ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ, ಇತ್ತ ಆಧುನಿಕ ಸಮಾಜದ ಸಂಸ್ಕೃತಿಯನ್ನು ಪೂರ್ಣವಾಗಿ ಒಪ್ಪಿಕೊಳ್ಳದ ಬಿಕ್ಕಟ್ಟಿನಲ್ಲಿ ಸಿಲುಕಿವೆ. ಇಂತಹ ಐಡೆಂಟಿಯ ಬಿಕ್ಕಟ್ಟಿನಲ್ಲಿ (identity crisis) ಸಿಲುಕಿರುವ ಸಮುದಾಯಗಳಲ್ಲಿ ಕರ್ನಾಟಕದ ಅಲೆಮಾರಿ ಮತ್ತು ಅರೆ-ಅಲೆಮಾರಿ ಸಮುದಾಯಗಳು ಮುಖ್ಯವಾಗಿವೆ.

ಅಲೆಮಾರಿ ಸಮುದಾಯಗಳು ದೇಶದಾದ್ಯಂತ ಕಂಡು ಬರುತ್ತವೆ. ಬೇರೆ ಬೇರೆ ರಾಜ್ಯಗಳಲ್ಲಿ ವಿವಿಧ ರೀತಿಯ ಅಲೆಮಾರಿ ಸಮುದಾಯಗಳು ಕಂಡು ಬರುತ್ತವೆ. ಇಂತಹ ಸಮುದಾಯಗಳು ಭಿನ್ನ ರೀತಿಯ ಸಮಸ್ಯೆಗಳು, ಸವಾಲುಗಳು, ಮತ್ತು ಸಂಸ್ಕೃತಿಯನ್ನು ಹೊಂದಿದೆ. ಕರ್ನಾಟಕ ರಾಜ್ಯದಲ್ಲಿ ಕಂಡು ಬರುವ ಅಲೆಮಾರಿ ಸಮುದಾಯಗಳ ಸಮಸ್ಯೆಗಳು ಹಲವಾರು. ವಿವಿಧ ರೀತಿಯ ಅನನ್ಯತೆ ಮತ್ತು ಸಂಸ್ಕೃತಿಯನ್ನು ಹೊಂದಿದವುಗಳಾಗಿವೆ. ಇವುಗಳು ಅಭಿವೃದ್ಧಿ ಮತ್ತು ಮಿಳಿತವಾಗುವ ಸಮಸ್ಯೆಯನ್ನು ಎದುರಿಸುತ್ತಿವೆ. ಇಲ್ಲಿನ ಈ ಅಲೆಮಾರಿ ಬುಡಕಟ್ಟು ಸಮುದಾಯಗಳು ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಅತ್ಯಂತ ಹಿಂದುಳಿದ ಸಮುದಾಯಗಳಾಗಿವೆ. ಇವರದ್ದು ಶ್ರೀಮಂತ ಸಂಸ್ಕೃತಿಯಾಗಿದ್ದರೂ ಇವರು ಮುಖ್ಯವಾಹಿನಿಗೆ ಬಂದಿಲ್ಲ. ಇವರು ಹಿಂದುಳಿದವರಲ್ಲಿ ಅತ್ಯಂತ ಹಿಂದುಳಿದವರಾಗಿದ್ದಾರೆ. ಇಂತಹ ಅಲೆಮಾರಿ ಸಮುದಾಯಗಳ ಬಗ್ಗೆ ವಿದ್ವಾಂಸರು ಹೆಚ್ಚಿನ ಗಮನಹರಿಸಿಲ್ಲವಾದ್ದರಿಂದ ಇವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಚಿತ್ರಣ ದೊರೆಯುವುದು ಕಷ್ಟ ಸಾಧ್ಯ. ಇತ್ತೀಚೆಗೆ ಬುಡಕಟ್ಟು ತಜ್ಞರು ಮತ್ತು ವಿದ್ವಾಂಸರುಗಳು ಅಲೆಮಾರಿ ಸಮುದಾಯಗಳ ಬಗ್ಗೆ ಮತ್ತು ಅವರ ಸಂಸ್ಕೃತಿ ಸಮಾಜದ ಬಗ್ಗೆ ದಾಖಲಾತಿ ಕಾರ್ಯ ಮತ್ತು ಸಮೀಕ್ಷಾ ಕಾರ್ಯ ಕೈಗೊಳ್ಳುತ್ತಿರುವುದು ಸಂತೋಷದ ವಿಷಯವಾಗಿದೆ.

ಅಲೆಮಾರಿ ಸಮುದಾಯಗಳು ಏಕತೆರನಾದ (homogeneous) ಗುಂಪುಗಳಾಗಿರದೆ ಬಹುಸಂಸ್ಕೃತಿ (heterogeneous) ಹೊಂದಿರುವ ಗುಂಪುಗಳಾಗಿವೆ. ಅಂದರೆ ಔಪಚಾರಿಕವಾಗಿ ಹೇಳುವುದಾದರೆ ಪರಿಶಿಷ್ಟರಲ್ಲಿ ಮತ್ತು ಹಿಂದುಳಿದ ವರ್ಗಗಳಲ್ಲಿ ಅಲೆಮಾರಿ ಸಮುದಾಯಗಳು ಕಂಡು ಬರುತ್ತವೆ. ಇಂತಹ ಸಮುದಾಯಗಳಲ್ಲಿ ಕಂಡು ಬರುವ ಕೆಲ ಸಮುದಾಯಗಳು ನೆಲೆ ನಿಂತ (settled) ಸಮುದಾಯಗಳಾಗಿದ್ದರೆ, ಇನ್ನೂ ಕೆಲವು ಅಲೆಮಾರಿ ಸಮುದಾಯಗಳಾಗಿಯೇ ಉಳಿದಿವೆ. ಕೆಲವು ಸಮುದಾಗಳಂತು ತಮ್ಮ ಕಡಿಮೆ ಜನಸಂಖ್ಯೆಯಿಂದಾಗಿ ನಶಿಸಿ ಹೋಗುವ ಹಂತಕ್ಕೆ ತಲುಪಿವೆ. ಇನ್ನೂ ಕೆಲವು ಅಲೆಮಾರಿ ಸಮುದಾಯಗಳು ನಿಕೃಷ್ಟ ಸ್ಥಿತಿಯಲ್ಲಿದ್ದು, ವಿನಾಶದ ಅಂಚಿನಲ್ಲಿವೆ. ಅನಕ್ಷರತೆಯಿಂದಾಗಿ ಮತ್ತು ಅಲೆಮಾರಿತನದಿಂದಾಗಿ ಎಲ್ಲಾ ಅವಕಾಶಗಳಿಂದ ವಂಚಿತರಾಗಿ ಸಂಘಟನೆಗೆ ತೊಡಕು ಉಂಟಾಗಿ ಅಸಂಘಟಿತರಾಗಿಯೇ ಉಳಿದಿದ್ದಾರೆ. ಇತ್ತೀಚೆಗೆ ಅಲೆಮಾರಿ ಸಮುದಾಯಗಳ ಪ್ರಮುಖರು ಸಂಘಟಿತರಾಗಲು ಪ್ರಯತ್ನಿಸುತ್ತಾ, ಹೊಸ ಅರಿವನ್ನು ಬೆಳೆಸಿಕೊಳ್ಳುತ್ತಾ, ತಮ್ಮ ನಿಕೃಷ್ಟ ಸ್ಥಿತಿಯ ಬಗ್ಗೆ ಅರಿವನ್ನು ಬೆಳೆಸಿ

ಕೊಳ್ಳುತ್ತಿದ್ದಾರೆ. ಇದು ಅಭಿವೃದ್ಧಿ ದೃಷ್ಟಿಯಿಂದ ಪೂರಕ ವಿದ್ಯಮಾನವಾಗಿದೆ. ಇಂತಹ ಅಲೆಮಾರಿ ಸಮುದಾಯಗಳ ಪೈಕಿ ಕರ್ನಾಟಕದ ಕಾಡುಗೊಲ್ಲ ಸಮುದಾಯವು ಒಂದಾಗಿದೆ.

## ಇದುವರೆಗಿನ ಅಧ್ಯಯನಗಳು

ಕಾಡುಗೊಲ್ಲ ಸಮುದಾಯವನ್ನು ಕುರಿತಂತೆ ವಿದೇಶಿ ಸಂಶೋಧಕರು ಸೇರಿದಂತೆ ಹಲವಾರು ವಿದ್ವಾಂಸರು, ಸಂಶೋಧಕರು, ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಲೇಖನ ಮತ್ತು ಕೃತಿಗಳನ್ನು ರಚಿಸಿದ್ದಾರೆ. ಇಂತಹ ಕೃತಿಗಳಲ್ಲಿ ಕೆಲವು ಪಿಹೆಚ್ ಡಿ ಸಂಶೋಧನೆ ಮಾಡಿ ಪುಸ್ತಕಗಳ ರೂಪದಲ್ಲಿ ಪ್ರಕಟಿತವಾದವುಗಳಾಗಿದ್ದರೆ ಮತ್ತೆ ಕೆಲವು ಜನಾಂಗೀಯ ಅಥವಾ ಕುಲಶಾಸ್ತ್ರೀಯ (ethnographic) ಅಧ್ಯಯನಗಳಾಗಿವೆ. ಕೆಲವೊಂದು ಮಾನವಶಾಸ್ತ್ರೀಯ (Anthropological studies) ಅಧ್ಯಯನಗಳೂ ಆಗಿವೆ. ಅನೇಕ ಲೇಖನಗಳು ದಿನ ಪತ್ರಿಕೆ, ವಾರಪತ್ರಿಕೆ, ತ್ರೈಮಾಸಿಕ ಮುಂತಾದ ಪತ್ರಿಕೆಗಳಲ್ಲಿ ಕಾಡುಗೊಲ್ಲರ ಜೀವನ, ಸ್ಥಿತಿಗತಿಗಳ ಬಗ್ಗೆ ಉಲ್ಲೇಖವಿದೆ. ಕಾಡುಗೊಲ್ಲರ ಲಿಖಿತ ಚರಿತ್ರೆ ಮತ್ತು ಕುಲಶಾಸ್ತ್ರೀಯ ಅಧ್ಯಯನದ ಬಗ್ಗೆ ಬೆಳಕು ಚೆಲ್ಲಿ ಕೃತಿ ಮತ್ತು ಲೇಖನ ಪ್ರಕಟಿಸಿರುವುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಫ್ರಾನ್ಸಿಸ್ ಬುಕನಾನ್ (೧೮೦೭) ತಮ್ಮ ಕೃತಿಯಾದ ಜರ್ನಿ ಥ್ರೋ ಮೈಸೂರ್ ಕೆನೆರಾ ಅಂಡ್ ಮಲಬಾರ್ (Journey through Mysore Canara and Malabar) ದಲ್ಲಿ ಕಾಡುಗೊಲ್ಲರು ಬುಡಕಟ್ಟಿನ ಜನರಾಗಿದ್ದಾರೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಎ ಎ ಡಿ ಲೂಯಿಸ್ (೧೯೬೩) ರವರು ತಮ್ಮ ಕೃತಿಯಾದ ದ ಟ್ರೈಬ್ಸ್ ಆಫ್ ಮೈಸೂರು (The Tribes of Muysore) ದಲ್ಲಿ "ಕಾಡುಗೊಲ್ಲರನ್ನು ಪರಿಶಿಷ್ಟ ಬುಡಕಟ್ಟಿಗೆ ಸೇರಿಸಲು ಅರ್ಹರು (Kadu Gollas who have a culture and dialect of their own rightly deserved to be classified as Scheduled Tribes in Karnataka) ಎಂದು ಹೇಳಿದ್ದಾರೆ. ಇವರು ಬುಡಕಟ್ಟು ಕೇಂದ್ರ ಸಲಹಾ ಮಂಡಳಿಯ ಸದಸ್ಯರು ಮತ್ತು ಅಲೆಮಾರಿ ಬುಡಕಟ್ಟು ವಿಚಾರಣಾ ಸಮಿತಿಯ ಅಧ್ಯಕ್ಷರಾಗಿದ್ದರು. ಎಚ್ ವಿ ನಂಜುಡಯ್ಯ ಮತ್ತು ಎಲ್ ಕೆ ಅನಂತಕೃಷ್ಣ ಅಯ್ಯರ್ ರವರು (೧೯೩೦) ತಮ್ಮ ಕೃತಿಯಲ್ಲಿ (The Mysore tribes and castes) ಕಾಡುಗೊಲ್ಲರು ಅಂದರೆ ಅಡವಿ ಗೊಲ್ಲರು (Kadu Gollas are Forest tribes) ಎಂದು ಹೇಳಿದ್ದಾರೆ. ಎಡ್ಗರ್ ಥರ್‌ಸ್ಟನ್ (೧೯೮೭) ತಮ್ಮ ಕೃತಿ ಕಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ (Castes and Tribes of South India) ಎಂಬ ಕೃತಿಯಲ್ಲಿ ಕಾಡುಗೊಲ್ಲರ ಬಗ್ಗೆ ಪ್ರತ್ಯೇಕ ಉಲ್ಲೇಖವಿದ್ದು ಕಾಡುಗೊಲ್ಲರು ಬುಡಕಟ್ಟು ಪಂಗಡವರಾಗಿದ್ದಾರೆ ಎಂದು ಹೇಳಿದ್ದಾರೆ. ಎಲ್ ಕೆ ಅ ಅಯ್ಯರ್ ಮತ್ತು ಎಡ್ಗರ್ ಥರ್‌ಸ್ಟನ್‌ರವರು ಪ್ರತ್ಯೇಕವಾಗಿ ಕಾಡುಗೊಲ್ಲರ ಕುಲಶಾಸ್ತ್ರೀಯ (ethnomethodoloy) ಅಧ್ಯಯನವನ್ನು ಮಾಡಿದ್ದಾರೆ.

ಪ್ರೊ. ತೀ ನಂ ಶಂಕರನಾರಾಯಣ (೧೯೮೨) ರವರು "ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು" ಎಂಬ ಶೀರ್ಷಿಕೆಯಡಿ ಕಾಡುಗೊಲ್ಲರ ಬಗ್ಗೆ ಪಿಹೆಚ್ ಡಿ ಪ್ರಬಂಧವನ್ನು ರಚಿಸಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯವು ಇದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಮಾನವಶಾಸ್ತ್ರಜ್ಞರಿಗೆ, ಸಮಾಜಶಾಸ್ತ್ರಜ್ಞರಿಗೆ ಮತ್ತು ಸಂಶೋಧಕರಿಗೆ ಇದೊಂದು ಉತ್ತಮ ಆಕರ ಗ್ರಂಥವಾಗಿದೆ. ಈ ಗ್ರಂಥದಲ್ಲಿ ಶಂಕರನಾರಾಯಣರವರು ಕಾಡುಗೊಲ್ಲರ ಬುಡಕಟ್ಟು ಸಂಪ್ರದಾಯ ಮತ್ತು ನಂಬಿಕೆಗಳು ಹಾಗೂ ಕಾಡುಗೊಲ್ಲರು ಒಂದು ಅಪ್ಪಟ ಬುಡಕಟ್ಟಿನವರು ಎಂಬುದಾಗಿ ವಿಸ್ತೃತವಾಗಿ ವಿವರಿಸಿದ್ದಾರೆ. ಬಿ ಎ ನಾಗರಾಜು (೧೯೯೮) ರವರು "ಗೊಲ್ಲರ ಹಟ್ಟಿ" ಎಂಬ ಪುಸ್ತಕ ಬರೆದು ಕಾಡುಗೊಲ್ಲರ ಸಾಮಾಜಿಕ-ಆರ್ಥಿಕ ಮತ್ತು ರಾಜಕೀಯ ಜೀವನದ ಮೇಲೆ ಬೆಳಕು ಚೆಲ್ಲಿದ್ದಾರೆ. ಡಾ ಕಾಳೇಗೌಡ ನಾಗವಾರವರು ಕಾಡುಗೊಲ್ಲರ ಜಾನಪದದ ಬಗ್ಗೆ ಪಿಹೆಚ್ ಡಿ ಮಹಾಪ್ರಬಂಧವನ್ನು ರಚಿಸಿ ಮೈಸೂರು ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ್ದಾರೆ. ಅಲ್ಲದೆ ಅದು ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ. ಡಾ ಮೀರಾಸಾಬಿಹಳ್ಳಿ ಶಿವಣ್ಣನವರು "ಕಾಡುಗೊಲ್ಲರ ಸಂಸ್ಕೃತಿ"ಯ ಬಗ್ಗೆ ಪಿಹೆಚ್ ಡಿ ಮಹಾಪ್ರಬಂಧವನ್ನು ರಚಿಸಿದ್ದು ಮೈಸೂರು ವಿಶ್ವವಿದ್ಯಾಲಯವು ಮಹಾಪ್ರಬಂಧವನ್ನು ಪಿಹೆಚ್ ಡಿ ಪದವಿಗೆ ಅಂಗೀಕರಿಸಿದೆ. ನಂತರ ಅವರು ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಜುಂಜಪ್ಪ ಮತ್ತು ಎತ್ತಪ್ಪನವರ ಕುರಿತು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಈ ರೀತಿಯ ಜಾನಪದ ಮತ್ತು ಸಾಹಿತ್ಯಾತ್ಮಕ ಕೃತಿಗಳಲ್ಲದೆ ಸಮಾಜಶಾಸ್ತ್ರೀಯ ಮತ್ತು ಸಾಮಾಜಿಕ ಮಾನವಶಾಸ್ತ್ರೀಯ ಹಾಗೂ ಕುಲಶಾಸ್ತ್ರೀಯ ಅಧ್ಯಯನಗಳು ಮತ್ತು ಸಂಶೋಧನೆಗಳು ನಡೆದಿವೆ. ಡಾ ಎಂ ಗುರುಲಿಂಗಯ್ಯನವರು "ಕಾಡುಗೊಲ್ಲರಲ್ಲಿ ಸಾಮಾಜಿಕ ಚಲನೆ ಮತ್ತು ಸಾಮಾಜಿಕ ಬದಲಾವಣೆ" ಎಂಬ ಶೀರ್ಷಿಕೆಯಡಿ ಪಿಹೆಚ್ ಡಿ ಸಂಶೋಧನೆಯನ್ನು ಸಮಾಜಶಾಸ್ತ್ರೀಯ (Sociology) ದೃಷ್ಟಿಕೋನದಿಂದ ಮಾಡಿದ್ದು (೧೯೯೯), ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ (Social Mobility and Social Change Among Kadu Gollas). ನಂತರ ಅವರು Tribal Culture, Change and Mobility ಎಂಬ ಕೃತಿ ಮತ್ತು "ಕರ್ನಾಟಕದ ಗೊಲ್ಲ ಸಮುದಾಯ" (೨೦೦೫) ಎಂಬ ಕೃತಿಗಳನ್ನು ಗೊಲ್ಲಸಮುದಾಯಕ್ಕೆ ಸಂಬಧಿಸಿದಂತೆ ಬರೆದು ಪ್ರಕಟಿಸಿದ್ದಾರೆ. ಕಾಡುಗೊಲ್ಲರ ಕುರಿತು ಪುಸ್ತಕಗಳಲ್ಲದೆ ಕೆಲವು ಪಿಹೆಚ್ ಡಿ ಮಹಾಪ್ರಬಂಧಗಳು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲ್ಪಟ್ಟಿವೆ. ಡಾ ಎಸ್ ಕೆ ಸಣ್ಣ ಓಬಯ್ಯನವರು "ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ" ಎಂಬ ಮಹಾಪ್ರಬಂಧವನ್ನು ೨೦೦೨ ರಲ್ಲಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ್ದಾರೆ. ಮಲ್ಲಿಕಾರ್ಜುನ ಕಲಮರಹಳ್ಳಿ ರವರು ಕುವೆಂಪು ವಿಶ್ವವಿದ್ಯಾಲಯಕ್ಕೆ "ಕಾಡುಗೊಲ್ಲರ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ" ಎಂಬ ಪಿಹೆಚ್ ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಹಂಪಿ ಕನ್ನಡ

ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ ಕೆ ಎಂ ಮೈತ್ರಿಯವರು ಕೃಷ್ಣ ಗೊಲ್ಲರ ಕಥನ ಕಾವ್ಯಗಳು (೧೯೯೭) ಸಂಪಾದಿಸಿದ್ದಾರೆ. ಇದೇ ವಿಭಾಗದ ಡಾ ಚೆಲುವರಾಜ್‌ರವರು ಕಾಡುಗೊಲ್ಲರ ಸಾಂಸ್ಕೃತಿಕ ವೀರನಾದ ಜುಂಜಪ್ಪನ ಕಾವ್ಯ (೧೯೯೭)ವನ್ನು ಸಂಗ್ರಹಿಸಿದ್ದಾರೆ.

ಪುಸ್ತಕ ಮತ್ತು ಪಿಹೆಚ್ ಡಿ ಮಹಾಪ್ರಬಂಧಗಳಲ್ಲದೆ ಹಲವಾರು ಸಂಶೋಧಕರು, ಲೇಖಕರು ಮತ್ತು ವಿದ್ವಾಂಸರು ವಿವಿಧ ಪತ್ರಿಕೆ (Journal) ಮತ್ತು ಪುಸ್ತಕಗಳಲ್ಲಿ ಕಾಡುಗೊಲ್ಲರ ಸಂಸ್ಕೃತಿ, ಸಮಾಜ ಮತ್ತು ಬುಡಕಟ್ಟು ಜೀವನವನ್ನು ಕುರಿತ ಲೇಖನಗಳನ್ನು ಪ್ರಕಟಿಸಿದ್ದಾರೆ. ಡಾ ಜಿಶಂಪ ರವರ "ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು" ಎಂಬ ಪಿಹೆಚ್ ಡಿ ನಿಬಂಧದಲ್ಲಿ ಕಾಡುಗೊಲ್ಲರ ಬಗ್ಗೆ ಉಲ್ಲೇಖವಿದೆ. ಡಾ ಕೃಷ್ಣಮೂರ್ತಿ ಹನೂರುರವರು "ಕಾಡುಗೊಲ್ಲರು" ಎಂಬ ಲೇಖನವನ್ನು ಬರೆದು ಡಾ ಹೆಚ್ ಜೆ ಲಕ್ಕಪ್ಪಗೌಡರ ಸಂಪಾದಕತ್ವದಲ್ಲಿ ಪ್ರಕಟವಾದ "ಕರ್ನಾಟಕದ ಬುಡಕಟ್ಟುಗಳು" (೧೯೯೮) (ಕರ್ನಾಟಕ ಜಾನಪದ ಅಕಾಡೆಮಿಯಿಂದ ಪ್ರಕಟಿತ) ಎಂಬ ಪುಸ್ತಕದಲ್ಲಿ ಪ್ರಕಟಿಸಿದ್ದಾರೆ.

ಕಾಡುಗೊಲ್ಲ ಸಮುದಾಯದವರೇ ಆದ ಸಂ ರಂಗಯ್ಯನವರು "ಕರ್ನಾಟಕದ ಕಾಡುಗೊಲ್ಲರು" ಎಂಬ ಲೇಖನವನ್ನು (ಸ್ಮರಣ ಸಂಚಿಕೆ; ತುಮಕೂರು ಜಿಲ್ಲಾ ಗೊಲ್ಲರ ಪ್ರಥಮ ಅಧಿವೇಶನ; ತರುವೀಕೆರೆ ದಿನಾಂಕ ೩-೯-೧೯೭೨) ಸ್ಮರಣ ಸಂಚಿಕೆಯಲ್ಲಿ ಬರೆದಿದ್ದಾರೆ. ಅದೇ ರೀತಿ ಡಿ ಕರಿಯಪ್ಪ ಕಾಡುಗೊಲ್ಲರ ಮುಖಂಡರು "ಅಡವೀ (ಕಾಡು) ಗೊಲ್ಲರ ಸಮುದಾಯದ ಚಾರಿತ್ರಿಕ ಹಿನ್ನೆಲೆ" ಎಂಬ ಲೇಖನವನ್ನು ಇದೇ ಸ್ಮರಣ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಇದೇ ರೀತಿ ಮಂಗಳೂರು ವಿಶ್ವ ವಿದ್ಯಾಲಯದ ಸಮಾಜಶಾಸ್ತ್ರ ವಿಭಾಗ ಪ್ರಾಧ್ಯಾಪಕರಾದ ಡಾ ಎಂ ಗುರುಲಿಂಗಯ್ಯನವರು ಗೊಲ್ಲ, ಯಾದವ, ಮತ್ತು ಕಾಡುಗೊಲ್ಲ ಸಮುದಾಯದ ಬಗ್ಗೆ ಹಲವಾರು ಲೇಖನಗಳನ್ನು ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ.

ಡಾ ಮೀರಾಸಾಬಿಹಳ್ಳಿ ಶಿವಣ್ಣನವರು ಕಾಡುಗೊಲ್ಲರ ಬುಡಕಟ್ಟು ವೀರರ ಬಗ್ಗೆ ಸಂಶೋಧನೆ ಮಾಡಿ ೧೯೯೩ ರಲ್ಲಿ ಪಿಹೆಚ್ ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪ್ರಬಂಧವನ್ನು ೨೦೦೫ರಲ್ಲಿ ಕಾಡುಗೊಲ್ಲ ಬುಡಕಟ್ಟು ವೀರರು ಎಂಬ ಶೀರ್ಷಿಕೆಯಡಿ ಪ್ರಕಟಿಸಿದ್ದಾರೆ. ಈ ಪುಸ್ತಕದಲ್ಲಿ ಶಿವಣ್ಣನವರು ಕಾಡುಗೊಲ್ಲರ ಸಂಸ್ಕೃತಿ ಮತ್ತು ಸಾಂಸ್ಕೃತಿಕ ವೀರರ ಬಗ್ಗೆ ವಿವರಿಸಿದ್ದಾರೆ. ಅಲ್ಲದೆ ಎತ್ತಪ್ಪ ಮತ್ತು ಜುಂಜಪ್ಪನ ಸಂಪ್ರದಾಯದ ಬಗ್ಗೆ ವಿವರವಾಗಿ ವಿವರಿಸಿದ್ದಾರೆ.

ಹೀಗೆ ಇನ್ನೂ ಹತ್ತು ಹಲವು ಲೇಖನಗಳು ಕಾಡುಗೊಲ್ಲರನ್ನು ಕುರಿತಂತೆ ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಎಲ್ಲಾ ಲೇಖನ ಮತ್ತು ಕೃತಿಗಳಲ್ಲಿ ಕಾಡುಗೊಲ್ಲರು ಅಲೆಮಾರಿ ಬುಡಕಟ್ಟು ಜನರು ಎಂದು ಲೇಖಕರು ಪ್ರತಿಪಾದಿಸಿದ್ದಾರೆ.

## ಸಮುದಾಯದ ಹೆಸರು, ಔಚಿತ್ಯ

ಕಾಡುಗೊಲ್ಲ ಸಮುದಾಯವನ್ನು ಈ ಸಮುದಾಯದ ಜನರು. ಬೇರೆ ಸಮುದಾಯದವರು, ಹೇಗೆ ಈ ಸಮುದಾಯವನ್ನು ಗುರುತಿಸುತ್ತಾರೆ ಎನ್ನುವುದಕ್ಕೆ ಅದರದ್ದೇ ಆದ ಹಿನ್ನಲೆಯಿದೆ. "ಕಾಡುಗೊಲ್ಲ" ಎಂಬುದು ಎರಡು ಪದಗಳನ್ನು ಒಳಗೊಂಡಿದೆ. "ಕಾಡು" ಎಂದರೆ ಅಡವಿ (forest), ಬೆಟ್ಟ, ಗುಡ್ಡ. ಗಿರಿ. ಕಾನನ. ಸರೋವರ, ದಿಣ್ಣೆ ಎಂತಲೂ, "ಗೊಲ್ಲ" ಎಂದರೆ ಗೋವುಗಳನ್ನು ಅಥವಾ ದನ-ಕರುಗಳನ್ನು ಕಾಯುವವನು (grazing) ಎಂದರ್ಥವಾಗುತ್ತದೆ. ಅಂದರೆ ಕಾಡಿನಲ್ಲಿ ದನ-ಕರುಗಳನ್ನು ಕಾಯ್ದುಕೊಂಡು ಊರಿಂದ ಊರಿಗೆ, ಕಾಡಿನಿಂದ ಕಾಡಿಗೆ ಅಲೆಮಾರಿಯಾಗಿ ವಲಸೆ ಹೋಗುತ್ತಾ ಜೀವನ ನಡೆಸುವ ಸಮುದಾಯಕ್ಕೆ ಸಾಮಾನ್ಯವಾಗಿ "ಕಾಡುಗೊಲ್ಲ"ರೆಂದು ಕರೆಯುತ್ತಾರೆ. ಕಾಡುಗೊಲ್ಲರು ತಾವು ವಾಸಿಸುವ ಸ್ಥಳಗಳಲ್ಲಿ (ನೆಲೆಗಳಲ್ಲಿ) ತಮ್ಮದೇ ಆದ ನೆಲೆಗಳನ್ನು ಅಥವಾ ಹಟ್ಟಿಗಳನ್ನು ರಚಿಸಿಕೊಂಡು (settlements) ವಾಸಿಸಲು ಪ್ರಾರಂಭಿಸಿದ್ದರಿಂದ ಇವರನ್ನು ಹಟ್ಟಿಗೊಲ್ಲರು ಅಥವಾ ಕಾಡುಗೊಲ್ಲರು ಎಂದು ಕರೆಯುತ್ತಾರೆ. ಇವರು ವಾಸಿಸುವ ಹಟ್ಟಿಗಳನ್ನು ಗೊಲ್ಲರಹಟ್ಟಿ ಅಥವಾ ಕಾಡುಗೊಲ್ಲರಹಟ್ಟಿ ಎಂದು ಕರೆಯುವ ವಾಡಿಕೆಯಿದೆ. ಪ್ರೊ ತೀ ನಂ ಶಂಕರನಾರಾಯಣರವರು (೧೯೮೨:೨೦) ಕಾಡುಗೊಲ್ಲರೆಂದರೆ ಕಾಡಿನಲ್ಲಿ ವಾಸಿಸುವ ಗೊಲ್ಲರೆಂದು ಅರ್ಥೈಸಿದ್ದಾರೆ. ಸಿಂಗ್ ಕೆ ಎಸ್ (೨೦೦೩ : ೫೨೪)ರವರು ಗೊಲ್ಲ ಸಮುದಾಯವನ್ನು ಕುರಿತು ಈ ರೀತಿ ಹೇಳಿದ್ದಾರೆ. "There are two major social divisions or groups among the Golla, namely Ooru Golla and Kadu Golla. Among the Golla, thre is no intermarriage between the Kadu Gollas and Ooru Gollas" ಈ ರೀತಿ ಸಿಂಗ್ ಅವರು ಹೇಳಿರುವುದು ಇವೆರಡು ಪಂಗಡಗಳು ಬೇರೆಯಾಗಿದ್ದು ವಿವಾಹಕ್ಕೆ ಸಂಬದಿದಂತೆ ಯಾವುದೇ ರೀತಿಯ ಕೊಡುಕೊಳ್ಳುವಿಕೆ ಇಲ್ಲವೆಂದು ಹೇಳಬಹುದು.

ಎಚ್ ವಿ ನಂಜುಂಡಯ್ಯ ರವರು (೧೯೦೮:೧) The Golla means a cow-herd, Kadugolla means a wild cowerd. They are also calld as theire dwellings are alwayes erected outside a village, so as to command the view of waste or jungle land,capable of affording pasture for their cattle. They are also known as Kalli Gollas, as there hamlets are usually surrounded by a hedge of the milkbush (Eugeni tirukalli).

ಕಾಡುಗೊಲ್ಲರೆಂದರೆ ತಮ್ಮದೇ ಆದ ವಸಾಹತು (ನೆಲೆ) ಅಥವಾ ಹಟ್ಟಿಯನ್ನು ಕಟ್ಟಿಕೊಂಡು ದಿಣ್ಣೆಗಳಲ್ಲೋ, ಬಯಲಿನಲ್ಲಿಯೋ ಅಥವಾ ವ್ಯವಸಾಯಕ್ಕೆ ಯೋಗ್ಯವಲ್ಲದ ಗುಡ್ಡಗಾಡು ಪ್ರದೇಶಗಳಲ್ಲಿಯೋ ತಮ್ಮದೇ ಆದ ಭೌಗೋಳಿಕ ಮತ್ತು ಸಾಂಸ್ಕೃತಿಕ

ಪ್ರತ್ಯೇಕತೆಯನ್ನು ಉಳಿಸಿಕೊಂಡು ಜೀವನ ನಡೆಸುತ್ತಿರುವ ಅರೆ-ಅಲೆಮಾರಿ ಬುಡಕಟ್ಟು ಸಮುದಾಯದವರಾಗಿದ್ದಾರೆ. ಕಾಡುಗೊಲ್ಲರ ನೆಲೆಗಳು ಮುಖ್ಯವಾಗಿ ಚಿತ್ರದುರ್ಗ ತುಮಕೂರು ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿಯೂ ಹಾಗೂ ಕೆಲವು ಜಿಲ್ಲೆಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿಯೂ ಕಂಡು ಬರುತ್ತವೆ. ಬುಕನಾನ್ (೧೮೦೭), ನಂಜುಂಡಯ್ಯ ಮತ್ತು ಎಚ್ ಕೆ ಎ ಅಯ್ಯರ್ (೧೯೩೦), ಲೂಯಿಸ್ ಎ ಎ ಡಿ (೧೯೬೧), ಎಡ್ಗರ್ ಥರ್‌ಸ್ಟನ್, ಡಾ ಕೆ ಎಂ ಮೇತ್ರಿ, ಶ್ರೀ ನಂ ಶಂಕರನಾರಾಯಣ (೧೯೮೨), ಡಾ ಎಂ ಗುರುಲಿಂಗಯ್ಯ (೧೯೯೯) ಇವರ ಅಧ್ಯಯನಗಳು ಕಾಡುಗೊಲ್ಲ ಪದದ ನಿಷ್ಪತ್ತಿಯ ವೈಚಿತ್ರ್ಯವನ್ನು ಹೇಳುತ್ತವೆ.

ಲೂಯಿಸ್ ಎ ಎ ಡಿ (೧೯೬೩; ೮೫)ರವರು ತಮ್ಮ ಕೃತಿಯಾದ "The ethnograpical survey of Mysore"ದಲ್ಲಿ ಗೊಲ್ಲ ಸಮುದಾಯದ ಹುಟ್ಟಿನ ಬಗ್ಗೆ ಈ ರೀತಿ ಹೇಳುತ್ತಾರೆ. "Gollas have much information regarding their origin and history. The elders narrate incidents connected with their migration from the north as a result of Muslim invasions, and of how their women were manhandled by the Muslim armies and after a series of southward movements, they settled in the Magdi taluk of Bangalore District'. Later they migrated to Rathnagiri, when the chief of that area married a girl of their tribe."

ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿದಿದ್ದು, ಅರೆ-ಅಲೆಮಾರಿ ಜೀವನ ನಡೆಸುವ, ಹಟ್ಟಿಗಳಲ್ಲಿ ನೆಲೆಸಿರುವ, ತಮ್ಮದೇ ಆದ ಭೌಗೋಳಿಕ ಮತ್ತು ಸಾಂಸ್ಕೃತಿಕ ಅನನ್ಯತೆ (identity) ಹೊಂದಿರುವ ಅರೆ-ಅಲೆಮಾರಿ ಬುಡಕಟ್ಟು ಸಮುದಾಯಕ್ಕೆ ಕಾಡುಗೊಲ್ಲರೆಂದು ಕರೆಯುತ್ತಾರೆ.

ಇತರೆ ಸಮುದಾಯದವರು ಕಾಡುಗೊಲ್ಲರನ್ನು ಹಟ್ಟಿಗೊಲ್ಲರು, ಗೊಲ್ಲರಟ್ಟಿಯವರು, ಕಾಡುಗೊಲ್ಲರು, ಅಡವಿ ಗೊಲ್ಲರು, ಗೊಲ್ಲರು, ಕಾಡುಗೊಲ್ಲ ಬುಡಕಟ್ಟಿನವರು, ಪೆದ್ದಗೊಲ್ಲರು, ಗೊಲ್ಲ ಗೌಡರು, ಮುಂತಾದ ಹೆಸರುಗಳಿಂದ ಕರೆಯುವ ವಾಡಿಕೆಯಿದೆ. ಹಾಗೆಯೇ ಕಾಡುಗೊಲ್ಲ ಸಮುದಾಯದವರು ತಮ್ಮ ಸಮುದಾಯದವರನ್ನು ಅಡವೀ ಗೊಲ್ಲರು, ಕಾಡುಗೊಲ್ಲರು, ಬುಡಕಟ್ಟಿನವರು, ಹಟ್ಟಿಯ ಜನರು, ಗೊಲ್ಲರಟ್ಟಿಯ ಜನರು ಎಂಬುದಾಗಿ ಕರೆದುಕೊಳ್ಳುತ್ತಾರೆ. ಸೈಯ್ಯದ್ ಸಿರಾಜ್ ಉಲ್ ಹಸನ್ ರವರು (೧೯೨೦:೨೦೪) ಗೊಲ್ಲಪದದ ಹುಟ್ಟಿನ ಬಗ್ಗೆ ಈ ಕೆಳಗಿನಂತೆ ಹೇಳಿದ್ದಾರೆ. "The Gollas are not a homogeneous race, but are composed of a large number of endogamous groups, the members of which are found to differ from one another in their features and complexion and even in their manners and usages. Their traditions tend to support the same view and to show how people of different origin have

been linked together by common occupations and constitute the Golla caste."

ಕಾಡುಗೊಲ್ಲ ಸಮುದಾಯವನ್ನು ವೃತ್ತಿಯ ಹಿನ್ನಲೆಯಲ್ಲಿ (Identification of the Community by occupation) ಗುರುತಿಸುವುದು ರೂಢಿಯಲ್ಲಿದೆ. ಇವರನ್ನು ಗೊಲ್ಲ, ಗೋಪಾಲಕ, ಪಶುಪಾಲಕ, ದನಗಾಹಿ, ಗೋಪಾಲ, ಕಾಡಿನಗೊಲ್ಲ, ಮುಂತಾದ ಹೆಸರುಗಳಿಂದ ಗುರುತಿಸುತ್ತಾರೆ. ಹೆಸರೇ ಸೂಚಿಸುವಂತೆ ಕಾಡುಗೊಲ್ಲ ಸಮುದಾಯದ ಸಾಂಪ್ರದಾಯಿಕ (traditional) ಕಸುಬು ಪಶುಪಾಲನೆ. ಕಾಡು ಮೇಡುಗಳು ಹೆಚ್ಚಾಗಿದ್ದ ಕಾಲದಲ್ಲಿ ಹೆಚ್ಚಿಗೆ ದನಕರುಗಳನ್ನು ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಕಾಡುಗೊಲ್ಲರು ಕುರಿಸಾಕಣೆಯನ್ನು ಸಹ ತಮ್ಮ ಕುಲಕಸುಬನ್ನಾಗಿಸಿಕೊಂಡಿದ್ದಾರೆ. ಇಂದಿಗೂ ಗೊಲ್ಲರ ಹಟ್ಟಿಗಳಲ್ಲಿ ವಾಸಿಸುವ ಕಾಡುಗೊಲ್ಲ ಸಮುದಾಯದ ಪ್ರತಿಯೊಬ್ಬ ಕುಟುಂಬಸ್ತನೂ ಸಮುದಾಯದ ಕುಲಕಸುಬಾಗಿ ಸಾಂಕೇತಿಕವಾಗಿಯಾದರೂ (symbolic) ಒಂದೆರಡು ಎತ್ತು ಅಥವಾ ದನಕರುಗಳನ್ನು ಸಾಕುವುದನ್ನು ನೋಡಬಹುದಾಗಿದೆ.

ಇವುಗಳಿಂದ ಆದಾಯ ಅಥವಾ ಸೇವೆಯನ್ನು ನಿರೀಕ್ಷಿಸದಿದ್ದರೂ ಕುಲದ ಸಂಕೇತವಾಗಿ ಮತ್ತು ಬುಡಕಟ್ಟಿನ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗಲು ಪಶುಪಾಲನೆ ಮಾಡಿಕೊಂಡು ಬರುತ್ತಿದ್ದಾರೆ. ಕಾಡುಗೊಲ್ಲರಿಗೆ ದನ-ಕರುಗಳ ಬಗ್ಗೆ ಎಷ್ಟು ಕಾಳಜಿ ಇರುತ್ತದೆ ಎಂದರೆ ಇವರಿಗೆ ತಿನ್ನಲು ಆಹಾರವಿಲ್ಲದಿದ್ದರೂ ದನಕರುಗಳಿಗೆ ಹೊಟ್ಟೆ ತುಂಬಾ ಮೇವನ್ನು (ಹುಲ್ಲು) ಕೊಟ್ಟು ತಾವು ಉಪವಾಸ ಮಲಗುತ್ತಾರೆ. ಬರಗಾಲ, ಅಥವಾ ಕ್ಷಾಮ ಬಂದಾಗ ತಮ್ಮ ತಮ್ಮ ದನಕರುಗಳೊಂದಿಗೆ (ರಾಸು) ಬೇರೆ ಹುಲ್ಲುಗಾವಲುಗಳಿರುವ ಪ್ರದೇಶಕ್ಕೆ ವಲಸೆ ಹೋಗಿ ದನಕರುಗಳನ್ನು ಮೇಯಿಸಿಕೊಂಡು ಬರುತ್ತಾರೆ. ಸಾಮಾನ್ಯವಾಗಿ ಇವರು ತಾವು ಮಲಗುವ ವರಾಂಡದ ಪಕ್ಕದಲ್ಲಿ ದನಗಳ ಕೊಟ್ಟಿಗೆ ನಿರ್ಮಿಸಿ ಅವುಗಳ ಪಕ್ಕದಲ್ಲಿ ರಾತ್ರಿಯಿಡೀ ಮಲಗುತ್ತಾರೆ. ರಾತ್ರಿಯಿಡೀ ಎಚ್ಚರದಿಂದಿದ್ದು, ಅವುಗಳಿಗೆ ಮೇವನ್ನು ಹಾಕಿ, ಪ್ರತಿನಿತ್ಯ ಅವುಗಳ ಮೈಯನ್ನು(body) ಶುಚಿಗೊಳಿಸುತ್ತಾರೆ. ಕಾಡುಗೊಲ್ಲರ ಪಶುಪಾಲನೆ ವೃತ್ತಿಗೆ ಸಂಬಂಧಿಸಿದ ಮಾಹಿತಿಯನ್ನು ಜುಂಜಪ್ಪ ಮತ್ತು ಎತ್ತಪ್ಪನ ಕಾವ್ಯ-ಪುರಾಣಗಳಲ್ಲಿ ನೋಡಬಹುದಾಗಿದೆ.

ಕಾಡುಗೊಲ್ಲರನ್ನು ಜೀವನ ಪದ್ಧತಿಯ ಹಿನ್ನೆಲೆಯಲ್ಲಿ ಗುರುತಿಸುವುದಾದರೆ ಇವರು ಅಪ್ಪಟ ಅಲೆಮಾರಿ ಬುಡಕಟ್ಟು ಸಮುದಾಯದವರು ಎಂದು ಅರ್ಥವಾಗುತ್ತದೆ. ಕಾಡುಗೊಲ್ಲರ ಜೀವನ ಪದ್ಧತಿ (living condition) ಬುಡಕಟ್ಟು ಜನರ ಸ್ಥಿತಿಗತಿಯನ್ನು ಬಿಂಬಿಸುತ್ತದೆ. ಇದಲ್ಲದೆ ಇವರು ಅರೆ-ಅಲೆಮಾರಿ ಜೀವನ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಗೊಲ್ಲರಹಟ್ಟಿಗಳಲ್ಲಿರುವ ಸಾಮಾಜಿಕ ಪರಿಸರ, ಸಾಮಾಜಿಕ ಮತ್ತು ಭೌಗೋಳಿಕ ಪ್ರತ್ಯೇಕತೆ ಹಾಗೂ ಜೀವನ ವಿಧಾನವನ್ನು ಅಧ್ಯಯನ ಮಾಡಿಯೇ

ಸಮಾಜಶಾಸ್ತ್ರಜ್ಞರು ಹಾಗೂ ಮಾನವಶಾಸ್ತ್ರಜ್ಞರು ಕಾಡುಗೊಲ್ಲರನ್ನು ಅಪ್ಪಟ ಅಲೆಮಾರಿ ಬುಡಕಟ್ಟಿನವರು ಎಂದು ಗುರುತಿಸುತ್ತಾರೆ. ಹೀಗೆ ಕಾಡುಗೊಲ್ಲರನ್ನು ಬೇರೆ ಸಮುದಾಯದವರು, ಹಾಗೂ ವೃತ್ತಿ ಹಿನ್ನೆಲೆಯಿಂದ ಗುರುತಿಸುವ ಪದ್ಧತಿಯನ್ನು ನೋಡಬಹುದಾಗಿದೆ.

**ಸಮುದಾಯದ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಪ್ರತಿಯೊಂದು ಸಮುದಾಯಕ್ಕೂ ಇರುವ ಹಿನ್ನೆಲೆಯ ಹಾಗೆ ಕಾಡುಗೊಲ್ಲ ಸಮುದಾಯಕ್ಕೂ ತನ್ನದೇ ಆದ ಪೌರಾಣಿಕ-ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆಯಿದೆ. ಪೌರಾಣಿಕ-ಐತಿಹಾಸಿಕ ಹಿನ್ನೆಲೆಯು ಕಾಡುಗೊಲ್ಲ ಸಮುದಾಯದ ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನವನ್ನು ತೋರಿಸುತ್ತದೆ. ಕಾಡುಗೊಲ್ಲ ಸಮುದಾಯದ ಉಗಮದ ಬಗ್ಗೆ ಪೌರಾಣಿಕವಾದ ಹಿನ್ನೆಲೆಯನ್ನು ಈ ಸಮುದಾಯದ ಸಾಂಸ್ಕೃತಿಕ ವೀರರ ಸಾಹಸಗಾಥೆಗಳಿಂದ ತಿಳಿದುಕೊಳ್ಳಬಹುದಾಗಿದೆ. ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪ, ದೇವರ ದಯಾಮಯಿ, ಕಾಟಪ್ಪ, ಚಿಕ್ಕಣ್ಣ, ಚಿತ್ತಯ್ಯ ಮುಂತಾದ ವೀರರ ಬಗ್ಗೆ ಹಲವಾರು ಆಯಾಮಗಳ ಇತಿಹಾಸವಿದೆ. ಜೊತೆಗೆ ಈ ಸಮುದಾಯವು ಮೂಲತಃ ಸೂರ್ಯ ಚಂದ್ರರ ವಂಶಸ್ಥರಿಂದ ಉದಯವಾಯಿತು ಎಂಬ ಐತಿಹ್ಯವಿದೆ. ಅಂದರೆ ಈ ಸಮುದಾಯದ ಹುಟ್ಟಿಗೆ ಸೂರ್ಯ ಚಂದ್ರರೇ ಕಾರಣ ಎಂಬ ಪ್ರತೀತಿ ಇದೆ. ಇದಕ್ಕೆ ನಿದರ್ಶನವೆಂಬಂತೆ ಸೂರ್ಯನ ವಂಶದಿಂದ ಚಿತ್ತಮುತ್ತಿ ಎಂಬ ಸಾಂಸ್ಕೃತಿಕ ವೀರ ಜನಿಸಿದ ಮತ್ತು ಚಂದ್ರನ ವಂಶದಿಂದ ಚಂದಮುತ್ತಿ ಜನಿಸಿದ ಎಂಬ ಪ್ರತೀತಿ ಇದೆ. ಏಕೆಂದರೆ ಈ ಇಬ್ಬರಿಂದಲೇ ಕಾಡುಗೊಲ್ಲ ಸಮುದಾಯವು ಉಗಮವಾಯಿತು ಎಂದು ನಂಬಲಾಗಿದೆ.

ಸೂರ್ಯನ ಕಿರಣಗಳಿಂದ ಜನ್ಮ ಧರಿಸಿದ ವ್ಯಕ್ತಿಗೆ ಚಿತ್ತಮುತ್ತಿ ಎಂದು ಹೆಸರಿಸಿ ಚಂದ್ರನ ಕಿರಣಗಳಿಂದ ಜನ್ಮ ತಾಳಿದ ವ್ಯಕ್ತಿಗೆ ಚಂದಮುತ್ತಿ ಎಂದು ಹೆಸರನ್ನಿಟ್ಟಿರುವುದು ಈ ಸಮುದಾಯದ ಪೌರಾಣಿಕ ಇತಿಹಾಸವನ್ನು ತೋರಿಸುತ್ತದೆ. ಇದಲ್ಲದೆ ಶಿವ-ಪಾರ್ವತಿಯವರ ಬೆವರ ಹನಿಗಳಿಂದ ಕಾಡುಗೊಲ್ಲ ಸಮುದಾಯವು ಜನ್ಮ ತಾಳಲು ಕಾರಣವಾಯಿತು ಎಂಬ ಪ್ರತೀತಿ ಇದೆ.

ಇದಲ್ಲದೆ ಐತಿಹಸಿಕವಾಗಿ ಕಾಡುಗೊಲ್ಲ ಸಮುದಾಯಕ್ಕೆ ತನ್ನದೇ ಆದ ಇತಿಹಾಸವಿದೆ. ಒಂದು ಐತಿಹಾಸಿಕ ವಿಶ್ಲೇಷಣೆಯ ಪ್ರಕಾರ ಕಾಡುಗೊಲ್ಲರು ಮೂಲತಃ ದೆಹಲಿ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಕಾಲಾನಂತರ ಅಲ್ಲಿನ ಮೊಗಲರ ಉಪಟಳ ತಾಳಲಾರದೆ ದಕ್ಷಿಣ ಇಂಡಿಯಾದ ಕಡೆ ವಲಸೆ ಬಂದರು ಎಂಬುದಾಗಿ ಹೇಳಲಾಗುತ್ತದೆ. ಹೀಗೆ ದಕ್ಷಿಣದ ಕಡೆ ವಲಸೆ ಬಂದವರು ಕರ್ನಾಟಕದ ಮಧ್ಯ ಭಾಗಗಳಾದ ಚಿತ್ರದುರ್ಗ, ಬಳ್ಳಾರಿ, ತುಮಕೂರು, ಹಾಸನ ಜಿಲ್ಲೆಗಳಲ್ಲಿ ತಮ್ಮ ನೆಲೆಗಳನ್ನು ಹೊಂದಲು ಪ್ರಾರಂಭಿಸಿದರು ಎಂಬುದಾಗಿ ಇತಿಹಾಸ ತಿಳಿಸುತ್ತದೆ.

ವಲಸೆ ಮುಂದುವರಿದಾಗ ತುಂಗಭದ್ರಾ ನದಿಯನ್ನು ದಾಟಿ ಅಂದರೆ ವಿಜಯನಗರ

ಆಳ್ವಿಕೆಯ ಸಮಯದಲ್ಲಿ ಇತರೆ ಭಾಗಗಳಾದ ತುಮಕೂರು, ಬೆಂಗಳೂರು ಮತ್ತು ಇತರ ಭಾಗಗಳಿಗೆ ವಲಸೆ ಬಂದರು ಎಂಬುದಾಗಿ ನಂಬಲಾಗಿದೆ. ಹೀಗೆ ವಲಸೆ ಬಂದ ಸಮುದಾಯವು ತಮ್ಮದೇ ಆದ ಪ್ರತ್ಯೇಕ ನೆಲೆಗಳನ್ನು ಅಲ್ಲಲ್ಲಿ ಸ್ಥಾಪಿಸಿ ಕುಲಮುಂದುವರಿಸಿಕೊಂಡು ಬಂದರು ಎಂಬುದಾಗಿ ಹೇಳಲಾಗುತ್ತದೆ. ಆದರೆ ಕಾಡುಗೊಲ್ಲರ ಭಾಷೆ ಮತ್ತು ಅವರಾಡುವ ಅಪಭ್ರಂಷವನ್ನು ಗಮನಿಸಿದರೆ ಇವರು ಈ ರಾಜ್ಯದ ಮೂಲ ನಿವಾಸಿಗಳು. ಇಲ್ಲಿಯ ಹಳೆಯ ಜನರು ಎಂಬುದಾಗಿ ಅರ್ಥವಾಗುತ್ತದೆ. ಕಾರಣ ಇವರಲ್ಲಿರುವ ಕೆಲವು ಬುಡಕಟ್ಟು ಲಕ್ಷಣಗಳು ಇತರೆ ಬುಡಕಟ್ಟು ಜನರ ಲಕ್ಷಣಗಳನ್ನು ಹೋಲುತ್ತವೆ. ಆದ್ದರಿಂದ ಕಾಡುಗೊಲ್ಲ ಸಮುದಾಯವು ಕರ್ನಾಟಕ ರಾಜ್ಯದ ಮುಖ್ಯವಾದ ಬುಡಕಟ್ಟು ಸಮುದಾಯವಾಗಿದ್ದು, ಇಲ್ಲಿಯ ಮೂಲ ನಿವಾಸಿಗಳೇ ಆಗಿದ್ದಾರೆ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಕಾಡುಗೊಲ್ಲರಿಗೆ ಪೌರಾಣಿಕ, ಐತಿಹಾಸಿಕ  ಮತ್ತು ಸಾಮಾಜಿಕ ಹಿನ್ನೆಲೆಯೂ ಇದೆ. ಕಾಡುಗೊಲ್ಲರು ಭಾರತೀಯ ಸಮಾಜದ ಜಾತಿ ವ್ಯವಸ್ಥೆಯ ಏಣಿ–ಶ್ರೇಣಿಯಲ್ಲಿ ಅತ್ಯಂತ ಕೆಳ ಅಂತಸ್ತನ್ನು ಹೊಂದಿದವರಾಗಿದ್ದಾರೆ. ಇವರು ಅಲೆಮಾರಿ ಬುಡಕಟ್ಟು ಸಮುದಾಯವಾಗಿದ್ದು, ರಾಜಕೀಯ, ಆರ್ಥಿಕ, ಶೈಕ್ಷಣಿಕ ಮತ್ತು ಸಾಮಾಜಿಕವಾಗಿ ಅತ್ಯಂತ ಹಿಂದುಳಿದ ಸಮುದಾಯವಾಗಿದೆ. ಸಮುದಾಯಗಳ ಏಣಿ–ಶ್ರೇಣಿಯಲ್ಲಿ ಕಾಡುಗೊಲ್ಲರು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾಗದು. ಇದಕ್ಕೆ ನಿದರ್ಶನವೆಂದರೆ ನಿಜವಾಗಿ ಬುಡಕಟ್ಟಾಗಿದ್ದು, ಅಧಿಕೃತವಾಗಿ ಪರಿಶಿಷ್ಟ ಬುಡಕಟ್ಟು ಸ್ಥಾನಮಾನ ಪಡೆಯದೇ ಇರುವುದು. ಬುಡಕಟ್ಟಿನ ಸಂಸ್ಕೃತಿ ಶ್ರೀಮಂತವಾಗಿದ್ದರೂ, ಸಮಾಜ ನೋಡುವ ಅಥವಾ ಅಂತಸ್ತನ್ನು ನಿರ್ಧರಿಸುವ ದೃಷ್ಟಿಕೋನದಿಂದ ಇದೊಂದು ಹಿಂದುಳಿದ ಸಮುದಾಯವಾಗಿಯೇ ಉಳಿದಿದೆ. ಈ ರೀತಿಯ ಸಾಮಾಜಿಕ ಹಿಂದುಳಿದಿರುವಿಕೆಯ ಜೊತೆಗೆ ಸಂಬಂಧಿತ ಕಳಂಕೀರಣವೂ ಈ ಸಮುದಾಯವನ್ನು (relative stigmatization) ಕಾಡುತ್ತಿದೆ. ಇವತ್ತಿಗೂ ಸಹ ಈ ಸಮುದಾಯವರನ್ನು 'ಗೊಲ್ಲ', 'ಗೊಲ್ಲರವನು', 'ಹಟ್ಟಿ ಗೊಲ್ಲರವನು' 'ಗೊಲ್ಲಗೌಡ' ಎಂಬುದಾಗಿ ಇತರೆ ಮುಂದುವರಿದ ಸಮುದಾಯದವರು ಸಂಬೋಧಿಸುತ್ತಿರುವುದನ್ನು ನೋಡಿದರೆ ಇವರ ಸಾಮಾಜಿಕ ಹಿಂದುಳಿದಿರುವಿಕೆ ತಿಳಿಯುತ್ತದೆ. ಕಾಡುಗೊಲ್ಲರು ನಮ್ಮ ಭಾರತೀಯ ಸಮಾಜದಲ್ಲಿ ಅತ್ಯಂತ ಕೆಳಸ್ತರ(lower stratum)ವನ್ನು ಹೊಂದಿರುವುದನ್ನು ಇವರ ಸಾಮಾಜಿಕ ಹಿನ್ನೆಡೆಯನ್ನು ತೋರಿಸುತ್ತದೆ.

## ೨

# ಮೂಲ ಮತ್ತು ಪ್ರಸಾರ

### ಮೂಲಸ್ಥಾನ, ವಲಸೆಯ ಮಾರ್ಗ

ಪ್ರತಿಯೊಂದು ಸಮುದಾಯಗಳಿಗೆ ತಮ್ಮದೇ ಆದ ಮೂಲ ಮತ್ತು ಪ್ರಸಾರದ ನೆಲೆಗಳಿರುತ್ತವೆ. ಹಾಗೆಯೇ ರಾಜ್ಯದ ಕಾಡುಗೊಲ್ಲ ಸಮುದಾಯದ ಬಗ್ಗೆ ಈ ಕುರಿತ ಐತಿಹಾಸಿಕ ಹಿನ್ನೆಲೆಯಿದೆ. ಇವರ ಮೂಲಸ್ಥಳ ಹುಡುಕ ಹೊರಟರೆ ದೆಹಲಿ ಮತ್ತು ಸುತ್ತಮುತ್ತಲಿನ ಗ್ರಾಮಪಟ್ಟಣಗಳಲ್ಲಿ ವಾಸಿಸುತ್ತಿದ್ದರು ಎಂಬುದು ಆಶ್ಚರ್ಯ ಮೂಡಿಸುವಂತಾದರೂ, ಮೊಗಲರ ಕಾಲಕ್ಕೆ ಅವರ ಹಿಂಸೆ ತಾಳಲಾರದೆ ಬುಡಕಟ್ಟಿನ ಪ್ರಮುಖರನ್ನೊಳಗೊಂಡಂತೆ ಎಲ್ಲರೂ ದಕ್ಷಿಣ ಭಾರತಕ್ಕೆ ವಲಸೆ ಬಂದು ಕರ್ನಾಟಕದ ಬಯಲು ಪ್ರದೇಶಗಳಾದ ಚಿತ್ರದುರ್ಗ, ತುಮಕೂರು, ಬಳ್ಳಾರಿ, ಬೆಂಗಳೂರು ಗ್ರಾಮಾಂತರ, ರಾಯಚೂರು, ಕೋಲಾರ ಮುಂತಾದ ಜಿಲ್ಲೆಗಳಲ್ಲಿ ವಾಸಿಸಲು ಪ್ರಾರಂಭಿಸಿದರು ಎಂಬುದು ಅವರ ಬದುಕಿನ ಅಧ್ಯಯನವೊಂದು ತಿಳಿಸುತ್ತದೆ (ನಾಗರಾಜು, ಬಿ ವಿ:೯೮೮:೪). ಎಡ್ಗರ್ ಥರ್‌ಸ್ಟನ್‌ರವರ ಪ್ರಕಾರ ಕಾಡುಗೊಲ್ಲರು ಉತ್ತರ ಭಾರತದಿಂದ ಬಂದವರೆಂದೂ, ಕಾಡುಗೊಲ್ಲರ ಸಂಪ್ರದಾಯಗಳು ಕಾಡು ಕುರುಬರ ಸಂಪ್ರದಾಯಗಳನ್ನು ಹೋಲುತ್ತವೆ ಎಂದೂ ಹೇಳಿದ್ದಾರೆ. ಹೀಗಾಗಿ ಕಾಡುಗೊಲ್ಲರು ಒಂದು ಬುಡಕಟ್ಟು ಸಮುದಾಯ ಎಂದು ಸಾಬೀತುಪಡಿಸುತ್ತದೆ.

ಕಾಡುಗೊಲ್ಲರ ಮೂಲ ಮತ್ತು ಪರಂಪರೆ ಕುರಿತು ಸಂಶೋಧಕರಲ್ಲಿ ಭಿನಾಭಿಪ್ರಾಯಗಳಿವೆ. ಆದರೂ ಉತ್ತರ ಭಾರತದ ದೆಹಲಿ ಮತ್ತು ಸುತ್ತಮುತ್ತಲಿನ ಪ್ರದೇಶದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದರು ಎಂದು ಹೇಳಬಹುದು ಎಂಬುದಾಗಿ ಸಣ್ಣೊಬಯ್ಯನವರು (೨೦೦೨:೩೧) ಅಭಿಪ್ರಾಯಪಡುತ್ತಾರೆ. ಪ್ರಸ್ತುತ ಕಾಡುಗೊಲ್ಲರ ಹಲವು ಕಥೆ, ಪುರಾಣ, ಐತಿಹ್ಯಗಳು ಕೂಡ ದೆಹಲಿಯ ಮೂಲವನ್ನೇ ಸೂಚಿಸುತ್ತವೆ. "ಕಾಡುಗೊಲ್ಲರು ಮಾತನಾಡಲು ಬಳಸುವ ಕನ್ನಡ ಭಾಷೆಯಲ್ಲಿ ಕೆಲವು ಪದಗಳು ಉರ್ದು ಭಾಷೆಯ ಪದಗಳಾಗಿರುವುದರಿಂದ ಇವರು ಉತ್ತರ ಭಾರತದಿಂದ ದಕ್ಷಿಣಕ್ಕೆ ವಲಸೆ ಬಂದು ಕಾಡಿನಲ್ಲಿ ವಾಸಿಸಲು ಪ್ರಾರಂಭಿಸಿದರು ಎಂಬುದಕ್ಕೆ ಸ್ಪಷ್ಟನೆ ಸಿಕ್ಕಂತಾಗುತ್ತದೆ (ಗುರುಲಿಂಗಯ್ಯ,ಎಂ:೨೦೦೪:೧೬೭). ಕಾಡುಗೊಲ್ಲರ ಹುಟ್ಟಿನ ಅಥವಾ ಮೂಲದ ಬಗ್ಗೆ ಏನೇ ಐತಿಹ್ಯ ಅಥವಾ ಪುರಾಣ(legends)ಗಳಿರಲಿ ಇವರು

ಕರ್ನಾಟಕದ ದೇಶೀಯ ಬುಡಕಟ್ಟಿನವರಾಗಿದ್ದು, ತಮ್ಮದೇ ಆದ ನೆಲೆಗಳನ್ನು ಹೊಂದಿದ್ದಾರೆ. ಕರ್ನಾಟಕದ ಕಾಡುಗೊಲ್ಲರು ಕನ್ನಡ ಭಾಷೆಯನ್ನು ಮಾತನಾಡುವುದರಿಂದ ಇವರು ಕನ್ನಡನಾಡಿನ ಬುಡಕಟ್ಟಿನ ಗುಂಪಿನವರು ಎಂದು ತಿಳಿಯಬಹುದು ಮತ್ತು ಅಲೆಮಾರಿ ಬುಡಕಟ್ಟಿನ ಪಂಗಡದವರು ಎಂದು ಹೇಳಬಹುದು. ಇವರು ಮೂಲತಃ ಕರ್ನಾಟಕದವರೇ ಎಂದು ನಂಬಬಹುದಾಗಿದೆ.

ಕಾಡುಗೊಲ್ಲರ ಮೂಲದ ಬಗ್ಗೆ ಇರುವ ಐತಿಹ್ಯವೆಂದರೆ ವಿಜಯನಗರದ ಕಾಲದಲ್ಲಿ ವಿಜಯನಗರದ ಸುತ್ತಮುತ್ತಲಿನ ಪ್ರದೇಶಗಳಾದ ಬಳ್ಳಾರಿ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳು ಪಶುಪಾಲನೆಗೆ ಮತ್ತು ಕುರಿ ಸಾಕಣೆಗೆ ಯೋಗ್ಯವಾದ ಕುರುಚಲು ಕಾಡುಗಳಾಗಿದ್ದವು. ಅಂತಹ ಸಂದರ್ಭದಲ್ಲಿ ಅಂಬೆರಾಮ ಮತ್ತು ತುಂಬೆರಾಮ ಎಂಬ ವ್ಯಕ್ತಿಗಳ ಎರಡು ಕುಟುಂಬಗಳಿದ್ದು, ಮುಂದೆ ಕಾಲಾಂತರದಲ್ಲಿ ಈ ಕುಟುಂಬಗಳು ಚಿತ್ರದುರ್ಗ, ತುಮಕೂರು ಮತ್ತು ಇತರೆ ಭಾಗಗಳಿಗೆ ವಲಸೆ ಬಂದು ತಮ್ಮ ನೆಲೆಗಳನ್ನು ಸ್ಥಾಪಿಸಿದರು ಎಂಬುದಾಗಿ ಐತಿಹ್ಯಗಳು ಹೇಳುತ್ತವೆ. ವಾಸ್ತವವಾಗಿ ಇದು ನಿಜವೂ ಹೌದು. ಏಕೆಂದರೆ ರಾಜ್ಯದ ಬಯಲು ಸೀಮೆಯ ಮಧ್ಯ ಭಾಗದಲ್ಲಿ ಕಾಡುಗೊಲ್ಲರ ನೆಲೆಗಳು ಇಂದಿಗೂ ಕಂಡು ಬರುತ್ತದೆ. ಈ ಜಿಲ್ಲೆಗಳಲ್ಲಿ ಕಂಡು ಬರುವ ಕಾಡುಗೊಲ್ಲರಿಗೆ ಕನ್ನಡ ಭಾಷೆ ಬಿಟ್ಟರೆ ಬೇರೆ ಭಾಷೆ ಗೊತ್ತಿಲ್ಲ.

ಚಂದ್ರ ವಂಶದ ಚಂದಮುತ್ತಿ ಮತ್ತು ಸೂರ್ಯ ವಂಶದ ಚಿತ್ತಮುತ್ತಿ ಎಂಬುವರು ಕಾಡುಗೊಲ್ಲರ ಮೂಲ ಪುರುಷರು. ಇವರು ದೆಹಲಿ ಮತ್ತು ಸುತ್ತ ಮುತ್ತ ಪ್ರದೇಶಗಳಲ್ಲಿ ಪಶುಪಾಲನೆ ಹಾಗೂ ಹೈನುಗಾರಿಕೆ ವೃತ್ತಿಯಲ್ಲಿ ತೊಡಗಿದ್ದವರು. ಇವರಿಬ್ಬರ ಹೆಣ್ಣು ಮಕ್ಕಳು ದೆಹಲಿ ಪಟ್ಟಣದಲ್ಲಿ ಹಾಲು, ಮೊಸರು ಮಾರುತ್ತಿರುವಾಗ ಈ ಹೆಣ್ಣು ಮಕ್ಕಳ ಸೌಂದರ್ಯಕ್ಕೆ ದೆಹಲಿಯ 'ನವಾಬ' ಮೋಹಿತನಾಗಿ ಅವರನ್ನೇ ಮದುವೆಯಾಗಬೇಕೆಂದು ಚಂದಮುತ್ತಿ ಮತ್ತು ಚಿತ್ತಮುತ್ತಿಗೆ ಹೇಳಿ ಕಳುಹಿಸುತ್ತಾನೆ. ಈ ನವಾಬನ ದುಡುಕುತನಕ್ಕೆ "ಚಂದಮುತ್ತಿ" ಬಂಧುಗಳಾದ ಬಲ್ಲಾಳು ಸೋಮ ಗೊಂಡನ ಗೌಡ, ಭೂಮ ಮುತ್ತಿ, ಚಿತ್ತಮುತ್ತಿ, ರಾಮ ಚಂದ್ರ ಮುತ್ತಿ ಅರೆರಾಯ ಗೊಂಡ, ಮೆರೆರಾಯ ಗೊಂಡ, ಎಗಡಿ ಮುತ್ತಿ, ಅಜ್ಜಿ ಮುತ್ತಿ, ಅತ್ತೆ ರಾಯ, ಮುತ್ತೆ ರಾಯ, ಕರಡಿ ಬಳ್ಳ ನಾಯ್ಕ, ಬಾಲಮುತ್ತ ನಾಯ್ಕ, ಪದ್ಮಳ್ಳ ನಾಯ್ಕ ಮೊದಲಾದುವರು ಉದ್ರೇಕಿತರಾಗಿ ಹಾಲಿನಂತ ಕುಲ ನೀರಾಗಬಾರದು; ಗೋಕುಲದ ಹೆಣ್ಣು ಮಕ್ಕಳನ್ನು ತುರುಕರಿಗೆ ಕೊಟ್ಟು ಮದುವೆ ಮಾಡುವುದು ನಮ್ಮ ಗೊಲ್ಲಾಳಿಕೆಗೆ ಅಪಮಾನವೆಂದು ಎಲ್ಲರು ಕುಳಿತು ವಿಚಾರಮಾಡಿ, ಸರ್ವಾಡೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ದೆಹಲಿ ಪಟ್ಟಣವನ್ನು ಬಿಟ್ಟು ದಕ್ಷಿಣ ಭಾರತದ ಕಡೆ ವಲಸೆ ಹೋಗಲು ನಿರ್ಧಾರ ಕೈಗೊಂಡರು (ಸಣ್ಣ ಓಬಯ್ಯ:೨೦೦೨:೩೨).

ಸರ್ವಾಡೇಶ್ವರ ಸ್ವಾಮಿಗಳ ನೇತೃತ್ವದಲ್ಲಿ ಬಂದಂತಹ ಕಾಡುಗೊಲ್ಲರು ಚಿತ್ರದುರ್ಗ, ತುಮಕೂರು, ಬಳ್ಳಾರಿ, ಮಂಡ್ಯ, ಮೈಸೂರು, ಹಾಸನ ಮೊದಲಾದ ಜಿಲ್ಲೆಗಳಲ್ಲಿ

ಹರಡಿಕೊಂಡರು. ಭಕ್ತರ ಅಪೇಕ್ಷೆ ಮೇರೆಗೆ ಚಿತ್ರದುರ್ಗ ತಾಲ್ಲೂಕು ರಾಮನಹಳ್ಳಿಯಲ್ಲಿ 'ರಾಮಲಿಂಗ'ವನ್ನು ಕೂಡಲಹಳ್ಳಿಯಲ್ಲಿ 'ಪಾರ್ಥಲಿಂಗ'ವನ್ನು, ಗೋಸಿಕೆರೆ ಮತ್ತು ಹರ್ತಿಕೋಟೆಯಲ್ಲಿ ವೀರಭದ್ರ ಸ್ವಾಮಿಯನ್ನು, ಕರೀಓಬನಹಳ್ಳಿಯಲ್ಲಿ ರೇಣುಕಾದೇವಿಯನ್ನು ಸರ್ವಾಡೇಶ್ವರ ಸ್ವಾಮಿಗಳು ಸ್ಥಾಪಿಸಿದರು. ಕರಡಿಬುಳ್ಳ ನಾಯ್ಕ ನಿಂತ ಸ್ಥಳ ಕರಿಓಬನಹಳ್ಳಿ, ಚಂದಮುತ್ತಿ ನಿಂತ ಸ್ಥಳ ತಾಳವಟ್ಟಿ ಮತ್ತು ರಾಮಲಿಂಗ ಸ್ಥಾಪಿಸಿದ ಸ್ಥಳ ರಾಮನಹಳ್ಳಿ ಎಂದು ಹೆಸರಿಟ್ಟು ಕರಿಓಬನಹಳ್ಳಿ ತಾಳವಟ್ಟಿ ಮತ್ತು ರಾಮನಹಳ್ಳಿ ಎಂಬ ಮೂರು ಹಟ್ಟಿಗಳನ್ನೇ ಕಾಡುಗೊಲ್ಲರ ಕಟ್ಟಿ ಮನೆಗಳು ಎಂದು ನಿಗದಿಪಡಿಸಲಾಯಿತು (ಅವರೇ:೨೦೦೨:೩೩).

## ಭೌಗೋಳಿಕತೆ

ಕರ್ನಾಟಕದ ಕಾಡುಗೊಲ್ಲ ಸಮುದಾಯದವರು ತಮ್ಮದೇ ಆದ, ವಿಶಿಷ್ಟವೂ ಆದಂತಹ ಭೌಗೋಳಿಕ ನೆಲೆಗಳನ್ನು (physical settlement) ನಿರ್ಮಿಸಿಕೊಂಡು ಮುಖ್ಯ ಹಳ್ಳಿಗಳಿಂದ ಬಹುದೂರ ವಾಸಿಸುತ್ತಾರೆ. ಇವರು ವಾಸಿಸುವ ಜಾಗ ಅಥವಾ ನೆಲೆ ಅಥವಾ ಪ್ರದೇಶಕ್ಕೆ ಗೊಲ್ಲರಹಟ್ಟಿ, ಗೊಲ್ಲರದೊಡ್ಡಿ, ಗೊಲ್ಲರ ಬೀದಿ, ಓಣಿಗಳೆಂದು ಕರೆಯುತ್ತಾರೆ. ಗೊಲ್ಲರ ಹಟ್ಟಿಗಳು ಒಂದು ರೀತಿಯ ಪುಟ್ಟ ಗಣರಾಜ್ಯಗಳಂತಿರುತ್ತವೆ. ಇಂತಹ ಹಟ್ಟಿಗಳಲ್ಲಿ ವಾಸದ ಮನೆ ಅಥವಾ ಗುಡಿಸಲು ನಿರ್ಮಿಸಿಕೊಳ್ಳುತ್ತಾರೆ. ಈ ಗುಡಿಸಲುಗಳ ರಚನೆಯು ಕೂಡ ತುಂಬಾ ಸರಳವಾಗಿರುತ್ತದೆ. ಸಂಘ ಜೀವಿಗಳಾದ ಕಾಡುಗೊಲ್ಲರು ವಾಸಕ್ಕೆ ಗುಡಿಸಲು ಕಟ್ಟಿಕೊಳ್ಳುವಾಗ ಯಾವುದೇ ಪಂಚಾಂಗಶಾಸ್ತ್ರ ಕೇಳದೆ ಪೂರ್ವ, ಉತ್ತರ ಇಲ್ಲವೇ ದಕ್ಷಿಣಕ್ಕೆ ತಲೆಬಾಗಿಲು ಬರುವಂತೆ ಉದ್ದನೆಯ ಒಂದು ಅಡ್ಡ ಬೆಲುಗು ಹಾಕಿ ಅದರ ವಿರುದ್ಧ ದಿಕ್ಕಿನಲ್ಲಿ ತೇರುಗಳು ಅಥವಾ ಗಳಗಳನ್ನು ಹಾಕಿ ಅದರ ಮೇಲೆ ಹುಲ್ಲು ಅಥವಾ ತೆಂಗಿನ ಗರಿಯನ್ನು ಮುಚ್ಚುತ್ತಾರೆ. ಕೆಲವರು ಹೆಂಚಿನ ಮನೆಯನ್ನು ಹೊಂದಿದ್ದಾರೆ. ಆದರೆ ಅಂಥವರ ಸಂಖ್ಯೆ ತುಂಬಾ ವಿರಳ. ಸಾಮಾನ್ಯವಾಗಿ ಕಾಡುಗೊಲ್ಲರು ತಮ್ಮ ದನಕರುಗಳಿಗೆ ಮೇವು ಸಿಗುವ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ತಮ್ಮದೇ ಆದಂತಹ ಪುಟ್ಟಹಳ್ಳಿಗಳನ್ನ ಸೃಷ್ಟಿಸಿಕೊಳ್ಳುತ್ತಿದ್ದರು (ನಾಗರಾಜು:೧೯೮೮:೬).ಇದು ಇವತ್ತಿಗೂ ಮುಂದುವರಿದುಬಂದಿದೆ.

ಒಂದು ಕಾಲಕ್ಕೆ ಅಲೆಮಾರಿಗಳಾಗಿದ್ದ ಕಾಡುಗೊಲ್ಲರು ಈಗ ತಮ್ಮದೇ ಆದ ಹಟ್ಟಿಗಳಲ್ಲಿ ವಾಸಮಾಡುತ್ತಾರೆ. ಇವರಲ್ಲಿ ಕೆಲವರು ೪-೫ ವರ್ಷಗಳಿಗೊಮ್ಮೆ ನೆಲೆ (settlement) ಬದಲಾಯಿಸುವವರೂ ಇದ್ದಾರೆ. ಅಷ್ಟೇ ಅಲ್ಲ, ಅವರು ದನಕರುಗಳು ಒಟ್ಟಾಗಿಸುತ್ತಾರೆ ಅಥವಾ ನೆಲೆಸಿರುವ ಸ್ಥಳಗಳಲ್ಲಿ ಪರಿಸರ ಮಾಲಿನ್ಯ ಕಂಡು ಬಂದಾಗ ಬೇರೆ ಸ್ಥಳವನ್ನು ಹುಡುಕಿಕೊಂಡು ಹೊರಡುವರು ಎಂದು ನಾಗರಾಜುರವರು ಕಾಡುಗೊಲ್ಲರ ನೆಲೆಗಳನ್ನು ಕುರಿತು ತಮ್ಮ "ಗೊಲ್ಲರಹಟ್ಟಿ" ಪುಸ್ತಕದಲ್ಲಿ ಹೇಳಿದ್ದಾರೆ. ಈ ಒಂದು ಅಭಿಪ್ರಾಯವು ಕಾಡುಗೊಲ್ಲ ಸಮುದಾಯವು ಒಂದು ಅಲೆಮಾರಿ ಬುಡಕಟ್ಟು ಸಮುದಾಯವೆಂದು ಸಮರ್ಥಿಸುವಲ್ಲಿ ಒಂದು ಮುಖ್ಯ ಆಕರವಾಗುತ್ತದೆ.

ಕಾಡುಗೊಲ್ಲರು ವಾಸಿಸುವ ನೆಲೆಗಳು ದಿಣ್ಣೆಗಳೋ ಅಥವಾ ನೀರು ನೆರಳು ಇಲ್ಲದ ಬಟ್ಟಂಬಯಲು ಪ್ರದೇಶಗಳೋ ಆಗಿರುತ್ತವೆ. ಈ ಹಟ್ಟಿಗಳು ಸರ್ಕಾರದ ದಾಖಲೆಯಲ್ಲಿ ಇರುವುದಿಲ್ಲ. ರಾಜ್ಯದ ಗೊಲ್ಲರ ನೆಲೆಗಳಿಗೆ ಯಾವುದೇ ರೀತಿಯ ರಸ್ತೆಯನ್ನು ಒಳಗೊಂಡಂತೆ ಮೂಲಸೌಕರ್ಯಗಳು ಇರುವುದಿಲ್ಲ. ಈ ಹಟ್ಟಿಗಳು ಡಾಂಬರು ರಸ್ತೆಯನ್ನೆ ಕಂಡಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಗೊಲ್ಲರ ಹಟ್ಟಿಗಳಲ್ಲಿರುವ ಬಹುತೇಕ ಮನೆಗಳು ಹುಲ್ಲಿನ ಗುಡಿಸಲುಗಳಾಗಿದ್ದು, ತೆಂಗಿನ ಗರಿ ಅಥವಾ ಅಂಚಿ ಹುಲ್ಲಿನಿಂದ ಕಟ್ಟಲ್ಪಟ್ಟಿರುತ್ತವೆ. ತಮ್ಮ ಗುಡಿಸಲುಗಳ ಪಕ್ಕದಲ್ಲಿಯೇ ಕುರಿ ಮತ್ತು ದನದ ರೊಪ್ಪ(ನೆಲೆ)ಗಳನ್ನ ನಿರ್ಮಿಸಿಕೊಂಡಿರುತ್ತಾರೆ. ಕಳ್ಳ-ಕಾಕರು ಮತ್ತು ತೋಳಗಳಿಂದ ಕುರಿಗಳನ್ನ ರಕ್ಷಿಸಿಕೊಳ್ಳಲು ಕುರಿ ರೊಪ್ಪ(ದೊಡ್ಡಿ)ಗಳಿಗೆ ಜಾಲಿ ಹಾಗೂ ಇತರೆ ಮುಳ್ಳು ಗಳಿಂದ ತಯಾರಿಸಿದ ಬೇಲಿಯನ್ನ ಹಾಕುತ್ತಾರೆ. ಇವರು ವಾಸ ಮಾಡುವ ನೆಲೆಗಳ ಸುತ್ತಾ ಕೃಷಿ ಜಮೀನು ಇರುತ್ತದೆ. ಹಾಗೆಯೇ ದನ ಕುರಿಗಳನ್ನ ಮೇಯಿಸಲು ಯೋಗ್ಯವಾದ ಪ್ರದೇಶಗಳಲ್ಲಿ ಇವರು ತಮ್ಮ ನೆಲೆಗಳನ್ನ ಹೊಂದುತ್ತಾರೆ.

ಇತ್ತೀಚೆಗೆ ಸ್ವಲ್ಪ ಮಟ್ಟಿನ ಆರ್ಥಿಕ ಸ್ಥಿತಿವಂತರು ಹಂಚಿನ ಮನೆಗಳನ್ನ ಕಟ್ಟಿ ಕೊಳ್ಳುವುದನ್ನ ನೋಡಬಹುದಾಗಿದೆ. ವಿದ್ವಾಂಸರಾದ ಪ್ರೊ ಹಿ ಚಿ ಬೋರಲಿಂಗಯ್ಯ ನವರು ಗೊಲ್ಲ ಸಮುದಾಯದ ವಾಸಸ್ಥಳದ ಬಗ್ಗೆ ಹೇಳುತ್ತಾ 'ಕರ್ನಾಟಕದ ಒಳನಾಡಿನ ಮಧ್ಯಭಾಗವೆನ್ನಬಹುದಾದ ತುಮಕೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ವಿಶೇಷವಾಗಿ ಕಂಡು ಬರುವ ಈ ಕಾಡು ಗೊಲ್ಲರು ತಮ್ಮ ವಾಸಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಭೂಪ್ರದೇಶಗಳು ಅಷ್ಟೇ ವಿಶಿಷ್ಟವಾಗಿವೆ. ಕುರುಚಲು ಕಾಡುಗಳು, ಸಾಮಾನ್ಯ ಗುಡ್ಡ ಬೆಟ್ಟಗಳ, ಹುಲ್ಲುಗಾವಲುಗಳೇ ಪ್ರಧಾನವಾದ ಈ ಪ್ರದೇಶ ಇವರ ವೃತ್ತಿಗೆ ಪೂರಕವಾದದ್ದು ಎಂಬುದಾಗಿ ಅಭಿಪ್ರಾಯ ಪಡುತ್ತಾರೆ". ಇದಕ್ಕೆ ಕಾರಣ ಇವರು ಬುಡಕಟ್ಟು ಜನರಾಗಿದ್ದು, ತಮ್ಮ ಅನನ್ಯತೆಯನ್ನ ಉಳಿಸಿಕೊಳ್ಳಲು ಪ್ರತ್ಯೇಕತೆಯನ್ನ ಕಾಪಾಡಿಕೊಂಡು ಬಂದಿದ್ದಾರೆ. ಆದರೆ ಅಭಿವೃದ್ಧಿಯ ದೃಷ್ಟಿಯಿಂದ ಹೇಳುವುದಾದರೆ ಪ್ರತ್ಯೇಕತೆಯು ಇವರ ಪ್ರಗತಿಗೆ ಹಿನ್ನಡೆಯನ್ನುಂಟು ಮಾಡುತ್ತದೆ. ಈ ಜನರ ಹಟ್ಟಿಗಳು ಊರಿಗೊಂದರಂತೆ ಇರುತ್ತವೆ. ಕಾಡುಗೊಲ್ಲ ಸಮುದಾಯದ ವಾಸದ ನೆಲೆಗಳು ಬುಡಕಟ್ಟು ಸಂಸ್ಕೃತಿಯನ್ನ ಬಿಂಬಿಸುತ್ತವೆ ಅಥವಾ ಇವರು ಬುಡಕಟ್ಟು ಜನರಾಗಿದ್ದರಿಂದಲೇ ತಮ್ಮ ಪ್ರತ್ಯೇಕ ನೆಲೆಯ ಅನನ್ಯತೆಯನ್ನ ಉಳಿಸಿಕೊಂಡು ಬಂದಿದ್ದಾರೆ. ಇಂದು ಇವರಲ್ಲಿ ಹಲವು ತೆರನಾದ ಪರಿವರ್ತನೆಗಳು ಗೋಚರಿಸುತ್ತಿದ್ದು, ನೆಲೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಬದಲಾವಣೆಗಳಾಗಿಲ್ಲ. ಆದರೆ ಮನೆಕಟ್ಟುವ ರೀತಿ ಅದಕ್ಕೆ ಬಳಸುವ ವಸ್ತುಗಳಲ್ಲಿ ಬದಲಾವಣೆಯಾಗಿದೆ. ಆದರೆ ಇಂದಿಗೂ ಕಾಡುಗೊಲ್ಲ ಸಮುದಾಯದ ಹಟ್ಟಿಗಳು ಡಿಸ್‌ಮೆಂಟಲ್ ಆಗದೆ ಹಾಗೆ ಉಳಿದುಕೊಂಡು ಬಂದಿರುವುದು ಅವರ ಅನನ್ಯತೆಗೆ ಹಿಡಿದ ಕನ್ನಡಿಯಾಗಿದೆ. ಆಧುನೀಕರಣ ಮತ್ತು ಗ್ರಾಮೀಣ ಅಭಿವೃದ್ಧಿಯಂತಹ ಪ್ರಕ್ರಿಯೆಗಳಿಂದಾಗಿ ಇಂದು

ಕಾಡುಗೊಲ್ಲ ಸಮುದಾಯದ ನೆಲೆಗಳಲ್ಲಿ ಸ್ವಲ್ಪಮಟ್ಟಿನ ಪರಿವರ್ತನೆಗಳು ಸಂಭವಿಸುತ್ತಿವೆ. ಗುಡಿಸಲು ಮನೆಗಳು ಕ್ರಮೇಣ ಮಾಯವಾಗುತ್ತಿವೆ. ಹಂಚಿನ ಮನೆಗಳು ಹೆಚ್ಚುತ್ತಿವೆ. ರಾಜ್ಯದ ತುಮಕೂರು ಜಿಲ್ಲೆಯ ಶಿರಾ, ಪಾವಗಡ, ಮಧುಗಿರಿ, ಗುಬ್ಬಿ, ಚಿಕ್ಕನಾಯಕನ ಹಳ್ಳಿ, ಮತ್ತು ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ ಅಲ್ಲದೆ ಉತ್ತರ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಇನ್ನೂ ಹೆಚ್ಚಿನದಾಗಿ ಗುಡಿಸಲು ಮನೆಗಳೇ ಇವೆ. ಗೊಲ್ಲರ ಹಟ್ಟಿಗಳಲ್ಲಿ ೧೦೦ ಕ್ಕೆ ೬೦ ರಷ್ಟು ಗುಡಿಸಲು ಮನೆಗಳು ಕಂಡುಬರುತ್ತವೆ. ಇವರು ತಾವು ಮಲಗುವ ಸ್ಥಳದ ಪಕ್ಕದಲ್ಲಿಯೇ ಕೊಟ್ಟಿಗೆಗಳನ್ನ ಕಟ್ಟಿ, ದನ, ಕರು ಮೇಕೆಗಳನ್ನ ಕಟ್ಟುತ್ತಾರೆ. ಸಾಮಾನ್ಯವಾಗಿ ಇವರು ಸೂರಿಗೆ, ತೆಂಗಿನ ಗರಿ, ಹುಲ್ಲು, ಎಲೆಗಳನ್ನ ಬಳಸುತ್ತಾರೆ. ಆಯಾಯ ಹಟ್ಟಿಗಳಲ್ಲಿ ಅವರದೇ ಬಳಗದ ಜನ ವಾಸ ಮಾಡುವುದನ್ನ ಕಾಣಬಹುದು. ಹಾಗೆಯೇ ರಾಜ್ಯದಲ್ಲಿ ಪ್ರತಿಯೊಂದು ನೆಲೆಯಲ್ಲಿ ವಾಸಿಸುವ ಕಾಡು ಗೊಲ್ಲ ಸಮುದಾಯಕ್ಕೆ ಅವರದೇ ಆದಂಥ ಹಟ್ಟಿಯಿರುತ್ತದೆ. ಈ ಹಟ್ಟಿಗಳು ಮುಖ್ಯ ಹಟ್ಟಿಯ ಹಾಮ್ಲೇಟ್‌ಗಳಾಗಿದ್ದು, ಗ್ರಾಮ ದಾಖಲೆಯಲ್ಲಿ ವಿಶೇಷ ಸ್ಥಾನ ಪಡೆದಿರುವುದಿಲ್ಲ.

**ಕಾಡುಗೊಲ್ಲಸಮುದಾಯದ ಭೌಗೋಳಿಕ ನೆಲೆಯ ಕೆಲವು ಹೆಸರುಗಳು**

ಕೆಲವು ಗೊಲ್ಲರ ಹಟ್ಟಿಯ ಹೆಸರನ್ನ ಈ ಕೆಳಗೆ ನೀಡಲಾಗಿದೆ. ಅವುಗಳೆಂದರೆ, ಶಿಡ್ಲೇಕೋಣದಟ್ಟಿ, ಕಾಟಮಾಳದ ಹಟ್ಟಿ, ಮೈಲನ ಹಟ್ಟಿ, ಮಾರನಟ್ಟಿ, ದೊಮ್ಮನಕುಪ್ಪೆ ಹಟ್ಟಿ, ಹೊಸಹಳ್ಳಿ ಹಟ್ಟಿ, ಬಿಳಿಗೆರೆ ಹಟ್ಟಿ, ಕಂಬೇರ ಹಟ್ಟಿ, ಬಿದರೆ ಹಟ್ಟಿ, ತಿಮ್ಮಪ್ಪನ ಹಟ್ಟಿ, ಗೌರಿಪುರದಟ್ಟಿ, ಗುಡ್ಡದಳ್ಳಿ ಹಟ್ಟಿ, ಚೌಕಾನಳ್ಳಿ ಹಟ್ಟಿ, ಜುಂಜಪ್ಪನ ಹಟ್ಟಿ, ಹಾಗಲವಾಡಿ ಹಟ್ಟಿ, ಬಿಳಿಕಲ್ಲಟ್ಟಿ, ಮಾದೇನಹಳ್ಳಿ ಹಟ್ಟಿ, ಕೆಳಗಲ ಹಟ್ಟಿ, ಮೇಗಲ ಹಟ್ಟಿ, ಚೆನ್ನಮ್ಮನಳ್ಳಿ ಹಟ್ಟಿ, ಮಂಚಲದೊರೆಯಟ್ಟಿ, ಕೆರೆಮುಂದಲ ಹಟ್ಟಿ, ಮೆಣಸನಹಳ್ಳಿ ಹಟ್ಟಿ, ತಿರುಮಲದೇವರ ಹಟ್ಟಿ, ಕರಿಯಜ್ಜನ ಹಟ್ಟಿ, ನಂದಿಹಳ್ಳಿಯಟ್ಟಿ, ಹೊಸಹಳ್ಳಿ ಹಟ್ಟಿ, ಗುಬ್ಬಿ ಹಟ್ಟಿ, ಹೊಸಹಟ್ಟಿ, ಕಾಡೇಗೌಡನ ಹಟ್ಟಿ, ಕಾಮನಹಟ್ಟಿ, ಚೇಳೂರಟ್ಟಿ, ನೆಲ್ಲೂರಟ್ಟಿ, ಹುಚ್ಚಂಗರಪ್ಪನಟ್ಟಿ, ನಾಗಸಂದ್ರದ ಹಟ್ಟಿ, ಹಿಂಡಿಸ್ಕೆರೆ ಹಟ್ಟಿ, ಮುತ್ತಯ್ಯನ ಹಟ್ಟಿ, ದಾಸರ ಹಳ್ಳಿ ಹಟ್ಟಿ, ಮಲ್ಲೇನಹಳ್ಳಿ ಹಟ್ಟಿ, ತಿಪ್ಪೂರಟ್ಟಿ, ಚೆನ್ನೇನ ಹಳ್ಳಿ ಹಟ್ಟಿ, ಹುಳಿಗೆರೆ ಹಟ್ಟಿ, ಅಪ್ಪ ನಾಯಕನಹಳ್ಳಿ ಹಟ್ಟಿ, ಹೊಸ ಕೆರೆ ಹಟ್ಟಿ, ದಿಬ್ಬದಳ್ಳಿ ಹಟ್ಟಿ, ದೇವರಟ್ಟಿ, ಚೆಂಗಾವರದಟ್ಟಿ, ಗುಮ್ಮನಹಳ್ಳಿ ಹಟ್ಟಿ, ಜಂಗಮರಹಳ್ಳಿ, ಯಳದಾಸನ ಹಟ್ಟಿ, ಸೀಗೆಮಳೆ ಹಟ್ಟಿ, ಮಾದಾಪುರದಟ್ಟಿ, ಅಜ್ಜಗೌಡನ ಹಟ್ಟಿ, ನೀರಕಲ್ಲಟ್ಟಿ, ಕಣಕುಪ್ಪೆ ಹಟ್ಟಿ, ದೊಡ್ಡಟ್ಟಿ, ಬೀಸನಹಳ್ಳಿ ಹಟ್ಟಿ, ಸಾಸಲಟ್ಟಿ, ಮತ್ತೀಹಳ್ಳಿ ಹಟ್ಟಿ, ಪೆನ್ನೋಬನಹಲ್ಲಿ ಗೊಲ್ಲರಹಟ್ಟಿ, ಜಡೇನಹಳ್ಳಿ, ಮಡೆನೂರಟ್ಟಿ, ಶಿರೋದಡಿ ಹಟ್ಟಿ, ಹೊನ್ನಗಾನಳ್ಳಿ ಹಟ್ಟಿ, ತಾಳಗುಂದದಟ್ಟಿ, ಗೊಲ್ಲರಳ್ಳಿ ಹಟ್ಟಿ, ನಾಗೇನಹಳ್ಳಿ ಹಟ್ಟಿ, ಕದರನಹಳ್ಳೀ ಹಟ್ಟಿ, ಸಂಗಾಪುರದಟ್ಟಿ, ಚೋಳುಂಬಳ್ಳಿ ಹಟ್ಟಿ, ಚಿಕ್ಕಣ್ಣ ಸ್ವಾಮಿ ಹಟ್ಟಿ (ಚಿಕ್ಕಣ್ಣಟ್ಟಿ), ಕುರುಡೀರಯ್ಯನ ಹಟ್ಟಿ, ಪುರದಟ್ಟಿ, ಬಸಾಪುರದಟ್ಟಿ, ವರದೇನ ಹಳ್ಳಿ ಹಟ್ಟಿ, ತಿಮ್ಮಪ್ಪನ ಹಟ್ಟಿ, ನಾಯಕನ ಹಟ್ಟಿ, ಆವಿನ ಹಟ್ಟಿ, ತಾವರೆಕೆರೆಯಟ್ಟಿ, ಕುಸ್ತೂರ ರಂಗಪ್ಪನಟ್ಟಿ, ಅಮ್ಮನಟ್ಟಿ, ಮುದ್ದರಂಗಪ್ಪನ

ಹಟ್ಟಿ, ಬಿಳಿಗೆರೆಯಟ್ಟಿ, ಕರಿಶೆಟ್ಟಿ ಹಟ್ಟಿ, ಚಿತ್ರದೇವರ ಹಟ್ಟಿ, ಜುಂಜಪ್ಪನ ಹಟ್ಟಿ, ಬಾಣದೇವರ ಹಟ್ಟಿ, ಹಟ್ಟಿಲಕ್ಕಮ್ಮನ ಹಟ್ಟಿ, ಗಣೆಮೈಲನ ಹಟ್ಟಿ ಇತ್ಯಾದಿ. ಹೀಗೆ ಕರ್ನಾಟಕದ ಗೊಲ್ಲ ಸಮುದಾಯದವರು ಹಟ್ಟಿಗಳಲ್ಲಿ ವಾಸಿಸುತ್ತಾ ಬುಡಕಟ್ಟು ಲಕ್ಷಣವನ್ನ ಉಳಿಸಿಕೊಂಡು ಬಂದಿದ್ದಾರೆ ಎನ್ನುವುದಕ್ಕೆ ಇಂದಿನ ಗೊಲ್ಲರ ಹಟ್ಟಿಗಳೇ ಸಾಕ್ಷಿಯಾಗಿವೆ.

ಕಾಡುಗೊಲ್ಲರ ಭೌಗೋಳಿಕತೆಯ ಬಗ್ಗೆ ಡಾ ಕೃಷ್ಣಮೂರ್ತಿ ಹನೂರುರವರು ಹೀಗೆ ಅಭಿಪ್ರಾಯಪಡುತ್ತಾರೆ. "ಕಾಡುಗೊಲ್ಲರು ಬೇಡ ನಾಯಕರಂತೆಯೇ ಊರಿನಿಂದ ಪ್ರತ್ಯೇಕವಾಗಿ ಹಟ್ಟಿಗಳನ್ನು ಕಟ್ಟಿಕೊಂಡು ತಮ್ಮಲ್ಲಿ ಬುಡಕಟ್ಟು ಸಂಪ್ರದಾಯ, ಆಚರಣೆಗಳೊಂದಿಗೆ ಅನೇಕಾನೇಕ ವರ್ಷಗಳಿಂದ ಬದುಕಿ ಬಂದಿದ್ದಾರೆ. ಗೊಲ್ಲರ ಗುಡಿಸಲುಗಳು ಹತ್ತು ಅಡಿ ಅಗಲದ ವೃತ್ತಾಕಾರಕ್ಕೆ ಕಟ್ಟಲ್ಪಟ್ಟು ಅದರ ಮೇಲೆ ಅಂಚಿ ಹುಲ್ಲು, ಬಾದೆ ಹುಲ್ಲು ಹೊದಿಸಲ್ಪಟ್ಟಿರುತ್ತದೆ. ಈ ಮನೆ ಅಥವಾ ಗುಡಿಸಲು ಮುಂಭಾಗಕ್ಕೆ ಹಸು, ಕರು, ಕುರಿ ಕೂಡುವ ರೊಪ್ಪಗಳಿರುತ್ತವೆ. ಈ ರೊಪ್ಪವನ್ನು ಮುಚ್ಚಿಕೊಳ್ಳುವಂತೆ ಸುತ್ತ ಗೋಡೆಯು ಬಂದಿರಬಹುದು. ಚಿತ್ರದುರ್ಗ ಪ್ರದೇಶವು ಇತಿಹಾಸ ನಡೆದ ಬಯಲಾದುದರಿಂದ ಆಗಾಗ ಶತ್ರುಗಳ ದಾಳಿ ಆ ನೆಲದ ಮೇಲೆ ಇರುತ್ತಿದ್ದು, ರಕ್ಷಣೆಯ ದೃಷ್ಟಿಯಿಂದ ಕಾಡುಗೊಲ್ಲರು ತಮ್ಮ ಹಟ್ಟಿಯ ಸುತ್ತ ಮುಳ್ಳು ಬೇಲಿ ಹಾಕಿಕೊಳ್ಳುತ್ತಿದ್ದರು. ಈ ಬೇಲಿಯೊಳಗೆ ಇರುವ ತಮ್ಮ ಗುಡಿಗಳ ಸುತ್ತಾ ಇನ್ನೂ ಬಲವಾದ ಮುಳ್ಳು ಬೇಲಿ ಹಾಕಿಕೊಳ್ಳುತ್ತಿದ್ದಕ್ಕೆ ಅವರದೇ ಆದ ಕಾವ್ಯವಿದೆ (ಕೃಷ್ಣಮೂರ್ತಿ ಹನೂರು:೧೯೯೮:೮೧೯-೮೨೦). ಕರ್ನಾಟಕದಲ್ಲಿ ಕಾಡುಗೊಲ್ಲರ ನೆಲೆಗಳು (ಹಟ್ಟಿಗಳು) ತುಮಕೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಮತ್ತು ಬೆಂಗಳೂರು ಜಿಲ್ಲೆಯ ಮಾಗಡಿ, ಕನಕಪುರಗಳಲ್ಲಿ ಕಂಡು ಬರುತ್ತವೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನಲ್ಲಿಯೂ ಕಂಡು ಬರುತ್ತಾರೆ. "ಹಿರಿಯೂರು, ಚಳ್ಳಕೆರೆ, ಪಾವಗಡ ಮತ್ತು ಶಿರಾ ತಾಲ್ಲೂಕುಗಳನ್ನು ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರವೆಂದು ಕರೆಯಬಹುದು (ಶೀ ನಂ ಶಂಕರ ನಾರಾಯಣ:೧೯೮೭:೨೩).

## ಜನಸಂಖ್ಯೆ

ಕರ್ನಾಟಕ ರಾಜ್ಯದಲ್ಲಿ ಕಾಡುಗೊಲ್ಲರ ಜನಸಂಖ್ಯೆ ಅಧಿಕೃತವಾಗಿ ಎಷ್ಟು ಎಂಬುದು ಜನಗಣತಿಯ ವರದಿಗಳಲ್ಲಿ ಕಾಣಸಿಗುವುದಿಲ್ಲ. ೧೮೮೧ರ ಜನಗಣತಿಯ ಪ್ರಕಾರ ಅಂದಿನ ಮೈಸೂರು ಪ್ರಾಂತದ ಕಾಡುಗೊಲ್ಲರ ಒಟ್ಟು ಜನಸಂಖ್ಯೆ ೪೪,೭೧೭ (ಕೀಟ್ಸ್,ಇ ಜೆ:೧೮೮೫:೮) ಎಂದು ದಾಖಲಾಗಿದೆ. ಇವರನ್ನು ಅಧಿಕೃತವಾಗಿ ಬುಡಕಟ್ಟುಗಳ ಪಟ್ಟಿಗೆ ಸೇರಿಸಿಲ್ಲವಾದ್ದರಿಂದ ಇವರ ಜನಸಂಖ್ಯೆ ಎಷ್ಟು ಎಂದು ಅನಂತರದ ಜನಗಣತಿ ಗಳಲ್ಲಿ ದಾಖಲಾಗಿಲ್ಲ.. ಆದಾಗ್ಯೂ ಕಾಡುಗೊಲ್ಲರ ಜನಸಂಖ್ಯೆಯ ಬಗ್ಗೆ ತಿಳಿಯಲು ಕೆಲವು ಪ್ರಯತ್ನಗಳು ನಡೆದಿವೆ. ಸರ್ಕಾರ ನೇಮಕ ಮಾಡಿದ ಹಿಂದುಳಿದ ವರ್ಗಗಳ ಆಯೋಗಗಳು ನಡೆಸಿದ ಸಾಮಾಜಿಕ-ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಗಳು ಗೊಲ್ಲರ ಜನಸಂಖ್ಯಾ ಸಮೀಕ್ಷೆಯ ಬಗ್ಗೆ ಬೆಳಕು ಚೆಲ್ಲಿವೆ. ಮೊದಲನೇ ಹಿಂದುಳಿದ ವರ್ಗಗಳ

(ಹಾವನೂರ್ ಅಧ್ಯಕ್ಷತೆಯಲ್ಲಿ) ಆಯೋಗದ (೧೯೭೫) ವರದಿಯ ಪ್ರಕಾರ ಕಾಡು ಗೊಲ್ಲರು ಇರುವ ಜಿಲ್ಲೆಗಳೆಂದರೆ ತುಮಕೂರು, ಚಿತ್ರದುರ್ಗ, ಬಳ್ಳಾರಿ, ಬೆಂಗಳೂರು ಮತ್ತು ಹಾಸನ ಎಂದು ಹೇಳಬಹುದು. ದಾವಣಗೆರೆ, ರಾಯಚೂರು ಮುಂತಾದ ಜಿಲ್ಲೆಗಳಲ್ಲಿ ಅತ್ಯಂತ ವಿರಳವಾಗಿದ್ದಾರೆ. ಸಾಮಾನ್ಯವಾಗಿ ಕಾಡುಗೊಲ್ಲರ ಜನಸಂಖ್ಯೆ ಎರಡರಿಂದ ಎರಡೂವರೆ ಲಕ್ಷದಷ್ಟಿರಬಹುದೆಂದು ಹೇಳಲಾಗುತ್ತಿದೆ. ಶ್ರೀ ನಂ ಶಂಕರನಾರಾಯಣರವರ ಪ್ರಕಾರ (೧೯೭೨:೨೩) ಗೊಲ್ಲರಲ್ಲಿ ಇರುವ ೪,೪೬,೮೯೩ ಜನರಲ್ಲಿ ಸುಮಾರು ಎರಡು ಲಕ್ಷದಷ್ಟು ಕಾಡುಗೊಲ್ಲರಿದ್ದಾರೆ ಎಂಬುದು ತಿಳಿದುಬರುತ್ತದೆ.

ಕರ್ನಾಟಕ ಸರ್ಕಾರ ನೇಮಕ ಮಾಡಿದ ರಾಜ್ಯದ ಎರಡನೇ ಹಿಂದುಳಿದ ವರ್ಗಗಳ ಆಯೋಗ ೧೯೮೬ ರಲ್ಲಿ ನಡೆಸಿದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸಮೀಕ್ಷೆಯ ವರದಿಯ ಪ್ರಕಾರ ರಾಜ್ಯದ ಗೊಲ್ಲರ ಜನಸಂಖ್ಯೆ (ಎಲ್ಲಾ ಬಗೆಯ ಗೊಲ್ಲರನ್ನು ಸೇರಿಸಿದಂತೆ) ೫,೯೫,೩೧೪ ರಷ್ಟಿದೆ ಎಂದು ಹೇಳಿದೆ (ಗುರುಲಿಂಗಯ್ಯ:೨೦೦೫:೫). ಮೊದಲನೇ ಶಾಶ್ವತ ಹಿಂದುಳಿದ ವರ್ಗಗಳ (First Permanent Backward class Commission) ಆಯೋಗದ ಪ್ರಕಾರ ರಾಜ್ಯದಲ್ಲಿ ೧೧೪೧ (ಒಂದು ಸಾವಿರದ ನೂರ ನಲವತ್ತೊಂದು) ಕಾಡುಗೊಲ್ಲರ ನೆಲೆ ಅಥವಾ ಹಟ್ಟಿ (Kadu Gollas settlement) ಗಳಿದ್ದು, ಒಟ್ಟಾರೆ ಜನಸಂಖ್ಯೆ ೬ ಲಕ್ಷದ ೩೭ ಸಾವಿರ ಜನರಿರುವುದಾಗಿ ಹೇಳಿದೆ. ಈ ಹಟ್ಟಿಗಳಲ್ಲಿ ಮತ್ತು ಜನಸಂಖೆಯಲ್ಲಿ ಗೊಲ್ಲ ಮತ್ತು ಕಾಡುಗೊಲ್ಲ ಸಮುದಾಯಗಳು ಸೇರಿರುವ ಸಾಧ್ಯತೆಗಳಿವೆ. ಹೀಗಾಗಿ ಇಂದು ಸುಮಾರು ೩,೦೦,೦೦೦ ಜನರು ಕಾಡುಗೊಲ್ಲರಿರಬಹುದಾಗಿದೆ.

ಲೂಯಿಸ್ ಎ ಎ ಡಿ (೧೯೬೩:೮೩) ರವರ ಪ್ರಕಾರ "Kadu gollas (Kadu gokulas, Kadu gollaras, kadu gollarus) are seen in the Bangalore, Belgaum, Bellary, Dharwar, Chitradurga, Shimoga, and Tumkur districts. Mysore Census Reports of 1891 and 1901 endorse the finding that the Kadu gollas are distinct from Uru gollas . They do not inter – dine or intermarry and generally avoide visiting each other."

ನಂಜುಂಡಯ್ಯ ನವರು (೧೯೦೮:೧) ಗೊಲ್ಲ ಜನ ಸಂಖ್ಯೆಯ ಬಗ್ಗೆ ಈ ರೀತಿ ಹೇಳಿದ್ದಾರೆ "According to the 1891, thre were 21,820 induividuls of this class, scattered in the district of Bangalore, Tumkur ,and Chitradurga. They differ in habits and costoms from Uru Gollas though bearing a common name and merit a separate treatment."

ಕರ್ನಾಟಕ ರಾಜ್ಯದಲ್ಲಲ್ಲದೆ ಕಾಡುಗೊಲ್ಲರು ನೆರೆಯ ರಾಜ್ಯದ ಆಂಧ್ರ ಪ್ರದೇಶದ ಗಡಿ ತಾಲೂಕುಗಳಾದ ಮಡಕಶಿರಾ, ಕಲ್ಯಾಣದುರ್ಗ ಮತ್ತು ರಾಯದುರ್ಗಗಳಲ್ಲಿ

ಕಂಡು ಬರುತ್ತಾರೆ. ಇವರೂ ಸಹ ಕಾಡುಗೊಲ್ಲರಾಗಿದ್ದು, ವಿವಾಹಕ್ಕೆ ಸಂಬಂಧಿಸಿದಂತೆ ಕೊಡು–ಕೊಳ್ಳುವಿಕೆಯನ್ನು ಇಟ್ಟುಕೊಂಡಿದ್ದು, ಮದುವೆ ಸಂಬಂಧವನ್ನು ಏರ್ಪಡಿಸಿ ಕೊಳ್ಳುತ್ತಾರೆ.

ಕರ್ನಾಟಕ ರಾಜ್ಯದ ಕಾಡುಗೊಲ್ಲ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಹಾಗೂ ಕುಲಶಾಸ್ತ್ರೀಯ ಸ್ಥಿತಿಗತಿಗಳನ್ನು ತಿಳಿಯಲು ರಾಜ್ಯದಾದ್ಯಂತ ಸಮೀಕ್ಷಾ ಕಾರ್ಯವನ್ನು ಕೈಗೊಳ್ಳಲಾಯಿತು. ಹೀಗೆ ಸಮೀಕ್ಷಾ ಕಾರ್ಯವನ್ನು ಕೈಗೊಂಡ ಮಾಹಿತಿಯನ್ನು ಸಂಗ್ರಹಿಸಿ, ಕ್ರೋಢೀಕರಿಸಿ, ವರದಿ ರೂಪಕ್ಕೆ ತರಲಾಯಿತು. ಈ ಅಧ್ಯಯನದಲ್ಲಿ ಸರಳ ಯಾದ್ರಚ್ಛಿಕ (simple random sampling) ಮಾದರಿ ವಿಧಾನವನ್ನು ಅಳವಡಿಸಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಒಟ್ಟು ರಾಜ್ಯದಲ್ಲಿ ೪೦೦ ಕುಟುಂಬಗಳನ್ನು ಪ್ರಸ್ತುತ ಸಮೀಕ್ಷಾ ಕಾರ್ಯಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಯಿತು. ಈ ೪೦೦ ಕುಟುಂಬಗಳಲ್ಲಿ ಒಟ್ಟು ೨೦೨೮ ಸದಸ್ಯರಿದ್ದಾರೆಂದು ಪ್ರಸ್ತುತ ಅಧ್ಯಯನದಿಂದ ತಿಳಿದು ಬಂದಿದೆ. ಇವರ ಪೈಕಿ ೧೦೯೦ (೫೩.೭೫%) ರಷ್ಟು ಪುರುಷ ಸದಸ್ಯರಾಗಿದ್ದಾರೆ, ೯೩೮ (೪೦.೨೫%) ರಷ್ಟು ಮಹಿಳಾ ಸದಸ್ಯರಾಗಿದ್ದಾರೆ.

**ಕೋಷ್ಟಕ: ೨.೧ ಸಮೀಕ್ಷೆಗೊಳಪಟ್ಟವರ ಲಿಂಗವಾರು ಜನಸಂಖ್ಯೆ**

| ಕ್ರಸಂ. | ಲಿಂಗ | ಜನಸಂಖ್ಯೆ | ಶೇಕಡಾ |
|---|---|---|---|
| ೧ | ಗಂಡು | ೧೦೯೦ | ೫೩.೭೫ |
| ೨ | ಹೆಣ್ಣು | ೯೩೮ | ೪೬.೨೫ |
| | ಒಟ್ಟು | ೨೦೨೮ | ೧೦೦.೦೦ |

**ಕೋಷ್ಟಕ: ೨.೨ ವಯೋಗುಂಪಾಧಾರಿತ ಲಿಂಗವಾರು ಶೇಕಡಾವಾರು ಜನಸಂಖ್ಯೆ**

| ಸಂ. | ವಯಸ್ಸು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ೦ – ೪ | ೪.೯೫ | ೬.೧೯ | ೫.೫೨ |
| ೨ | ೫ – ೧೭ | ೨೫.೮೫ | ೨೬.೮೯ | ೨೬.೩೩ |
| ೩ | ೧೮–೪೦ | ೪೩.೧೭ | ೪೬.೯೬ | ೪೪.೯೨ |
| ೪ | ೪೧–೬೦ | ೨೧.೦೮ | ೧೬.೯೭ | ೧೯.೧೮ |
| ೫ | ೬೧ ಕ್ಕಿಂತ ಮೇಲ್ಪಟ್ಟು | ೪.೯೫ | ೨.೯೯ | ೪.೦೪ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ಕೋಷ್ಟಕ: ೨.೩ ಸಮೀಕ್ಷೆಗೊಳಪಟ್ಟವರ ಜಿಲ್ಲಾವಾರು ಕುಟುಂಬಗಳ ವಿವರ

| ಕ್ರಸಂ. | ಜಿಲ್ಲೆ | ಕುಟುಂಬಗಳ ಸಂಖ್ಯೆ | ಶೇಕಡ |
|---|---|---|---|
| ೧ | ತುಮಕೂರು | ೧೬೩ | ೪೦.೭೫ |
| ೨ | ಚಿತ್ರದುರ್ಗ | ೨೧೨ | ೫೩.೦೦ |
| ೩ | ದಾವಣಗೆರೆ | ೧೯ | ೪.೭೫ |
| ೪ | ಬಳ್ಳಾರಿ | ೬ | ೧.೫೦ |
| | ಒಟ್ಟು | ೪೦೦ | ೧೦೦.೦೦ |

ಕೋಷ್ಟಕ: ೨.೪ ಸಮೀಕ್ಷೆಗೊಳಪಟ್ಟವರ ತಾಲೂಕುವಾರು ಕುಟುಂಬಗಳ ವಿವರ

| ಕ್ರಸಂ. | ತಾಲೂಕಿನ ಹೆಸರು | ಕುಟುಂಬಗಳ ಸಂಖ್ಯೆ | ಶೇಕಡ |
|---|---|---|---|
| ೧ | ಚಳ್ಳಕೆರೆ | ೨೩ | ೫.೭೫ |
| ೨ | ಚಿಕ್ಕನಾಯಕನ ಹಳ್ಳಿ | ೮ | ೨.೦೦ |
| ೩ | ಚಿತ್ರದುರ್ಗ | ೨೮ | ೭.೦೦ |
| ೪ | ದಾವಣಗೆರೆ | ೧೯ | ೪.೭೫ |
| ೫ | ಗುಬ್ಬಿ | ೫೦ | ೧೨.೫೦ |
| ೬ | ಹಿರಿಯೂರು | ೮೭ | ೨೧.೭೫ |
| ೭ | ಹೊಳಲ್ಕೆರೆ | ೩೦ | ೭.೫೦ |
| ೮ | ಹೊಸದುರ್ಗ | ೧೩ | ೩.೨೫ |
| ೯ | ಜಗಳೂರು | ೧೨ | ೩.೦೦ |
| ೧೦ | ಕೊರಟಗೆರೆ | ೨೩ | ೫.೭೫ |
| ೧೧ | ಕೂಡ್ಲಿಗಿ | ೬ | ೧.೫೦ |
| ೧೨ | ಕುಣಿಗಲ್ | ೧೩ | ೩.೨೫ |
| ೧೩ | ಮಧುಗಿರಿ | ೭ | ೧.೭೫ |
| ೧೪ | ಮೊಳಕಾಲ್ಮೂರು | ೧೯ | ೪.೭೫ |
| ೧೫ | ಪಾವಗಡ | ೧೦ | ೨.೫೦ |
| ೧೬ | ಶಿರಾ | ೬ | ೧.೫೦ |
| ೧೭ | ತಿಪಟೂರು | ೧೭ | ೪.೨೫ |
| ೧೮ | ತುಮಕೂರು | ೧೪ | ೩.೫೦ |
| ೧೯ | ತುರುವೇಕೆರೆ | ೧೫ | ೩.೭೫ |
| | ಒಟ್ಟು | ೪೦೦ | ೧೦೦.೦೦ |

**ಕೋಷ್ಟಕ: ೨.೫ ಸಮೀಕ್ಷೆಗೊಳಪಟ್ಟವರ ಗ್ರಾಮ ಪಂಚಾಯತಿವಾರು ಕುಟುಂಬಗಳು**

| ಕ್ರ.ಸಂ. | ಗ್ರಾಮ ಪಂಚಾಯಿತಿಯ ಹೆಸರು | ಕುಟುಂಬ | ಶೇಕಡ |
|---|---|---|---|
| ೧ | ಅಮ್ಮನ ಘಟ್ಟ | ೬ | ೧.೫೦ |
| ೨ | ಅರೆಕೆರೆ | ೮ | ೨.೦೦ |
| ೩ | ಅಟ್ಟಿಮನೆ | ೧೩ | ೩.೨೫ |
| ೪ | ಬಿದರೆ | ೧೮ | ೪.೫೦ |
| ೫ | ಬ್ಯಾಡನೂರು | ೧೦ | ೨.೫೦ |
| ೬ | ಚಿಕ್ಕೆಹಳ್ಳಿ | ೯ | ೨.೨೫ |
| ೭ | ಚಿತ್ರಹಲ್ಲಿ | ೨೦ | ೫.೦೦ |
| ೮ | ದೇವರ ಮರುಕುಂಟೆ | ೬ | ೧.೫೦ |
| ೯ | ಧರ್ಮಪುರ | ೨ | ೦.೫೦ |
| ೧೦ | ಘಳಿಗೇನ ಹಳ್ಳಿ | ೩ | ೦.೭೫ |
| ೧೧ | ಹಾಗಲವಡಿ | ೩ | ೦.೭೫ |
| ೧೨ | ಹಂಚಿಹಳ್ಳಿ | ೧೨ | ೩.೦೦ |
| ೧೩ | ಹನುಮಂತಪುರ | ೧೨ | ೩.೦೦ |
| ೧೪ | ಹರಿಯಟ್ಟಿ | ೮ | ೨.೦೦ |
| ೧೫ | ಹಿರೆಗುಂಟನೂರು | ೮ | ೨.೦೦ |
| ೧೬ | ಹಿರೇಹಳ್ಳಿ | ೧೦ | ೨.೫೦ |
| ೧೭ | ಹೊಸಹಳ್ಳಿ | ೬ | ೧.೫೦ |
| ೧೮ | ಈಶ್ವರಗೆರೆ | ೫೪ | ೧೩.೫೦ |
| ೧೯ | ಜೆ.ಸಿ. ಪುರ | ೮ | ೨.೦೦ |
| ೨೦ | ಜಾನುಕೊಂಡ | ೧೦ | ೨.೫೦ |
| ೨೧ | ಕಣಿಕುಪ್ಪೆ | ೩ | ೦.೭೫ |
| ೨೨ | ಖಂಡೇನಹಳ್ಳೀ | ೨ | ೦.೫೦ |
| ೨೩ | ಎಮ್.ಡಿ. ಕೋಟೆ | ೯ | ೨.೨೫ |
| ೨೪ | ಎಮ್. ಎನ್. ಕೋಟೆ | ೧೨ | ೩.೦೦ |
| ೨೫ | ಮದಲೂರು | ೬ | ೧.೫೦ |
| ೨೬ | ಮಾದೇನಹಳ್ಳಿ | ೩ | ೦.೭೫ |
| ೨೭ | ಮಾರಶೆಟ್ಟಿ ಹಳ್ಳಿ | ೩ | ೦.೭೫ |
| ೨೮ | ನಾಗಸಮುದ್ರ | ೧೮ | ೪.೫೦ |
| ೨೯ | ನರಗನಹಳ್ಳಿ | ೧೯ | ೪.೭೫ |

| | | | |
|---|---|---|---|
| ೩೦ | ನೀಲಗೊಂಡನಹಳ್ಳಿ | ೧೧ | ೨.೭೫ |
| ೩೧ | ಪಿ.ಡಿ. ಕೋಟೆ | ೭ | ೧.೭೫ |
| ೩೨ | ಪರಶುರಾಮಪುರ | ೭ | ೧.೭೫ |
| ೩೩ | ರಂಗನಾಥಪುರ | ೫ | ೧.೨೫ |
| ೩೪ | ಸಂಪಿಗೆ | ೧೫ | ೩.೭೫ |
| ೩೫ | ಶೆಟ್ಟಿಹಳ್ಳಿ | ೨೪ | ೬.೦೦ |
| ೩೬ | ಸಿದ್ದಾಪುರ | ೯ | ೨.೨೫ |
| ೩೭ | ತೇಕಲವಟ್ಟಿ | ೧೦ | ೨.೫೦ |
| ೩೮ | ತಿಮ್ಮಣ್ಣ ನ್ಯಾಕನ ಕೋಟೆ | ೧೦ | ೨.೫೦ |
| ೩೯ | ಯೆಳಗೋಡು | ೧ | ೦.೨೫ |
| | ಒಟ್ಟು | ೪೦೦ | ೧೦೦.೦೦ |

ಕೋಷ್ಟಕ: ೨.೬ ಸಮೀಕ್ಷೆಗೊಳಪಟ್ಟವರ ಹಟ್ಟಿವಾರು ಕುಟುಂಬಗಳು

| ಕ್ರ.ಸಂ. | ಹಟ್ಟಿಗಳ ಹೆಸರು | ಕುಟುಂಬ | ಶೇಕಡಾವಾರು |
|---|---|---|---|
| ೧ | ಅಕ್ಕಳಸಂದ್ರ ಗೊಲ್ಲರಹಟ್ಟಿ | ೧೫ | ೩.೭೫ |
| ೨ | ಅರಳಿಕೆರೆ | ೨ | ೦.೫೦ |
| ೩ | ಬಂಟನಗವಿ ಗೊಲ್ಲರಹಟ್ಟಿ | ೫ | ೧.೨೫ |
| ೪ | ಬಸಪ್ಪನ ಮಾಳಿಗೆ | ೬ | ೧.೫೦ |
| ೫ | ಬೆನಕನಹಳ್ಳಿ | ೪ | ೧.೦೦ |
| ೬ | ಬಿದರೆಹಟ್ಟಿ | ೧೧ | ೨.೭೫ |
| ೭ | ಬಿಲಿಗೆರೆಹಟ್ಟಿ | ೩ | ೦.೭೫ |
| ೮ | ಬ್ಯಾಡರಹಳ್ಳಿ ಗೊಲ್ಲರಹಟ್ಟಿ | ೧೮ | ೪.೫೦ |
| ೯ | ಚಿಕ್ಕಣ್ಣ ದೇವರಟ್ಟಿ | ೩ | ೦.೭೫ |
| ೧೦ | ಚಿಕ್ಕೆಹಳ್ಳಿ | ೯ | ೨.೨೫ |
| ೧೧ | ಚಿತ್ರಹಳ್ಳಿ ಗೊಲ್ಲರಹಟ್ಟಿ | ೨೦ | ೫.೦೦ |
| ೧೨ | ದೊಡ್ಡ ಗೊಲ್ಲರಹಟ್ಟಿ | ೭ | ೧.೭೫ |
| ೧೩ | ದೊಡ್ಡಕಟ್ಟೆ | ೩ | ೦.೭೫ |
| ೧೪ | ಇಳಿಗಟ್ಟೆಗೊಲ್ಲರಹಟ್ಟಿ | ೬ | ೧.೫೦ |
| ೧೫ | ಜಿ. ನಾಗೇನಹಳ್ಳಿ ಗೊಲ್ಲರಹಟ್ಟಿ | ೧೨ | ೩.೦೦ |
| ೧೬ | ಗುಡ್ಡದಹಳ್ಳಿ ಹಟ್ಟಿ | ೭ | ೧.೭೫ |
| ೧೭ | ಹರಿಯಟ್ಟಿಪಾಳ್ಯ | ೫ | ೧.೨೫ |
| ೧೮ | ಹಿರೆಗುಂಟನೂರು ಗೊಲ್ಲರಹಟ್ಟಿ | ೮ | ೨.೦೦ |

| | | | |
|---|---|---|---|
| ೧೯ | ಹೊಸ ಗೊಲ್ಲರಹಟ್ಟಿ | ೧೦ | ೨.೫೦ |
| ೨೦ | ಹೊಸಕೋಟೆ ಗೊಲ್ಲರಹಟ್ಟಿ | ೧೧ | ೨.೭೫ |
| ೨೧ | ಹುಳಿಗೆರೆ ಗೊಲ್ಲರಹಟ್ಟಿ | ೬ | ೧.೫೦ |
| ೨೨ | ಹೂವಿನಹೊಳೆ ಗೊಲ್ಲರಹಟ್ಟಿ | ೩೧ | ೭.೭೫ |
| ೨೩ | ಇಂದ್ರಾಪುರ ಗೊಲ್ಲರಹಟ್ಟಿ | ೬ | ೧.೫೦ |
| ೨೪ | ಈಶ್ವರಗೆರೆ ಮೇಗಳ ಗೊಲ್ಲರಹಟ್ಟಿ | ೨೦ | ೫.೦೦ |
| ೨೫ | ಜಗಳೂರು ಗೊಲ್ಲರಹಟ್ಟಿ | ೧೨ | ೩.೦೦ |
| ೨೬ | ಜಾಲಿಕಟ್ಟೆ ಗೊಲ್ಲರಹಟ್ಟಿ | ೯ | ೨.೨೫ |
| ೨೭ | ಜಡ್ತಿಗೆರೆ ಗೊಲ್ಲರಹಟ್ಟಿ | ೧೩ | ೩.೨೫ |
| ೨೮ | ಖಂದೇನಹಳ್ಳಿಪಾಳ್ಯ | ೨ | ೦.೫೦ |
| ೨೯ | ಕೊಳಲು ಕದುರೆ ದೇವರಹಟ್ಟಿ | ೭ | ೧.೭೫ |
| ೩೦ | ಕುರುಡೀಕರಯ್ಯನಹಟ್ಟಿ | ೮ | ೨.೦೦ |
| ೩೧ | ಮದ್ದನಕುಂಟೆ | ೩ | ೦.೭೫ |
| ೩೨ | ಮಾದೇನಹಳ್ಳಿ ಹಟ್ಟಿ | ೩ | ೦.೭೫ |
| ೩೩ | ಮೈಲನಹಟ್ಟಿ | ೩ | ೦.೭೫ |
| ೩೪ | ಮಾಳಿಗೆಹಟ್ಟಿ | ೮ | ೨.೦೦ |
| ೩೫ | ಮಲ್ಲೇನಹಳ್ಳಿ ಹಟ್ಟಿ | ೧೨ | ೩.೦೦ |
| ೩೬ | ಮಾರಶೆಟ್ಟಿ ಹಳ್ಳಿ ಗೊಲ್ಲರಹಟ್ಟಿ | ೩ | ೦.೭೫ |
| ೩೭ | ನಾಗಸಂದ್ರ ಗೊಲ್ಲರಹಟ್ಟಿ | ೫ | ೧.೨೫ |
| ೩೮ | ನರಗನಹಳ್ಳಿ ಗೊಲ್ಲರಹಟ್ಟಿ | ೧೪ | ೩.೫೦ |
| ೩೯ | ನೆರ್ಲಿಗೆಹಳ್ಳಿ | ೫ | ೧.೨೫ |
| ೪೦ | ಸಕ್ಕರ | ೩ | ೦.೭೫ |
| ೪೧ | ಶೆಟ್ಟಿಹಳ್ಳಿ ಗೊಲ್ಲರಹಟ್ಟಿ | ೨೪ | ೬.೦೦ |
| ೪೨ | ಟಿ. ಗೊಲ್ಲಹಳ್ಳಿ | ೩ | ೦.೭೫ |
| ೪೩ | ಟಿ. ನಾಗೇನಹಳ್ಳಿ | ೨ | ೦.೫೦ |
| ೪೪ | ಟರಗನಹಟ್ಟಿ | ೧೦ | ೨.೫೦ |
| ೪೫ | ತೇಕಲವಟ್ಟಿ ಗೊಲ್ಲರಹಟ್ಟಿ | ೩ | ೦.೭೫ |
| ೪೬ | ತಿಮ್ಮ ನಾಯಕನ ಕೋಟೆ | ೧೦ | ೨.೫೦ |
| ೪೭ | ತಿಪ್ಪೂರ ಹಟ್ಟಿ | ೩ | ೦.೭೫ |
| ೪೮ | ಉಳ್ಳಾಲ ಗೊಲ್ಲರಹಟ್ಟಿ | ೧ | ೦.೨೫ |
| ೪೯ | ವರದೇನಹಳ್ಳಿ | ೩ | ೦.೭೫ |
| ೫೦ | ವೇಣುಕಲ್ಲುಗುಡ್ಡ | ೩ | ೦.೭೫ |
| | ಒಟ್ಟು | ೪೦೦ | ೧೦೦.೦೦ |

## ಪ್ರಸಾರ ನೆಲೆಗಳು

ಕಾಡುಗೊಲ್ಲರ ನೆಲೆಗಳು ಕರ್ನಾಟಕದ ಬಯಲು ಸೀಮೆಯ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದು, ಮುಖ್ಯವಾಗಿ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಯಲ್ಲಿ ಕಂಡು ಬರುತ್ತವೆ. ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಕಾಡುಗೊಲ್ಲರ ನೆಲೆ (settlements)ಗಳು ಕಂಡುಬರುತ್ತವೆ. ಇವರ ನೆಲೆಗಳು ಕಂಡು ಬರುವ ತಾಲ್ಲೂಕು ಗಳೆಂದರೆ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು, ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ. ಈ ತಾಲ್ಲೂಕುಗಳ ಪೈಕಿ ಹಿರಿಯೂರು ತಾಲ್ಲೂಕಿನಲ್ಲಿ ಹೆಚ್ಚಿನ ಹಟ್ಟಿಗಳು ಕಂಡುಬರುತ್ತವೆ.

ಚಿತ್ರದುರ್ಗ ಜಿಲ್ಲೆಯನ್ನು ಬಿಟ್ಟರೆ, ಕಾಡುಗೊಲ್ಲರ ಪ್ರಸಾರ ನೆಲೆಗಳನ್ನು ಹೊಂದಿರುವ ಎರಡನೇ ಜಿಲ್ಲೆ ತುಮಕೂರು ಜಿಲ್ಲೆಯಾಗಿದೆ. ತುಮಕೂರು ಜಿಲ್ಲೆಯ ತಾಲ್ಲೂಕುಗಳಾದ, ಶಿರಾ, ಪಾವಗಡ, ಮಧುಗಿರಿ, ತುಮಕೂರು, ಕುಣಿಗಲ್, ಗುಬ್ಬಿ, ತುರುವೇಕೆರೆ, ಚಿಕ್ಕನಾಯಕನ ಹಳ್ಳಿ ಮತ್ತು ತಿಪಟೂರು ತಾಲ್ಲೂಕುಗಳಲ್ಲಿ ಕಾಡುಗೊಲ್ಲರ ನೆಲೆಗಳಿರುವುದು ಕಂಡು ಬರುತ್ತದೆ. ಈ ತಾಲ್ಲೂಕುಗಳ ಪೈಕಿ ಶಿರಾ ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚಿನ ಕಾಡುಗೊಲ್ಲರ ನೆಲೆಗಳು ಕಂಡುಬರುತ್ತವೆ. ಉಳಿದಂತೆ, ಪಾವಗಡ, ಮದುಗಿರಿ, ಗುಬ್ಬಿ ಮತ್ತು ತುರುವೇಕೆರೆ ತಾಲ್ಲೂಕುಗಳಲ್ಲಿಯೂ ಹೆಚ್ಚಿನ ಸಂಖ್ಯೆಯ ಕಾಡುಗೊಲ್ಲರ ನೆಲೆಗಳು ಕಂಡು ಬರುತ್ತವೆ. ಕುಣಿಗಲ್ ತಾಲ್ಲೂಕಿನಲ್ಲಿ ಕಡಿಮೆ ಸಂಖ್ಯೆಯ ನೆಲೆಗಳು ಕಂಡು ಬರುತ್ತವೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿಯೂ ಕಾಡುಗೊಲ್ಲರ ನೆಲೆಗಳು ಕಂಡು ಬರುತ್ತವೆ. ಅದೇ ರೀತಿ ದಾವಣಗೆರೆ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಇಂತಹ ನೆಲೆಗಳನ್ನು ನಾವು ಕಾಣಬಹುದಾಗಿದೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನಲ್ಲಿ ಕಾಡುಗೊಲ್ಲರ ಹಟ್ಟಿಗಳು ಕಂಡು ಬರುತ್ತವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲೂಕಿನಲ್ಲಿಯೂ ಮತ್ತು ನೆಲಮಂಗಲ ಹಾಗೂ ದೊಡ್ಡ ಬಳ್ಳಾಪುರ ತಾಲೂಕಿನಲ್ಲಿ ಚದುರಿದಂತೆ ಒಂದೆರಡು ನೆಲೆಗಳು ಕಂಡು ಬರುತ್ತವೆ. ಉಳಿದಂತೆ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕೆಲವು ಕಡೆ ಕಾಡುಗೊಲ್ಲರ ನೆಲೆಗಳನ್ನು ಕಾಣಬಹುದು. ಈ ನೆಲೆಗಳಿಗೆ ಗೊಲ್ಲರ ದೊಡ್ಡಿ ಎಂದು ಕರೆಯುತ್ತಾರೆ. ಹಾಗೆಯೇ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕೆಲವೇ ಕೆಲವು ನೆಲೆಗಳು ಕಂಡು ಬರಬಹುದು ಎಂದು ನಂಬಲಾಗಿದೆ.

ಬಿ ವಿ ನಾಗರಾಜರವರು ಕಾಡುಗೊಲ್ಲರ ಜನಸಂಖ್ಯೆಯ ಬಗ್ಗೆ ಹೀಗೆ ಹೇಳುತ್ತಾರೆ "ಎಲ್ಲಕ್ಕಿಂತ ವಿಸ್ಮಯಪಡುವ ವಿಚಾರವೆಂದರೆ ಕರ್ನಾಟಕದಲ್ಲಿ ಕಾಡುಗೊಲ್ಲರ ಜನಸಂಖ್ಯೆಯ ಬಗ್ಗೆ ಸರ್ಕಾರದಲ್ಲಿ ಮಾಹಿತಿ ಸಿಗದು. ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳು ಬರೇ ಗೊಲ್ಲರ ಬಗ್ಗೆ ಮಾಹಿತಿ ಸಂಗ್ರಹಿಸಿದ್ದಾರೆ. ಅವರ ಜನಸಂಖ್ಯೆ ಗುರುತಿಸಿದ್ದಾರೆ. ಆದರೆ ಕಾಡುಗೊಲ್ಲರನ್ನು ಪ್ರತ್ಯೇಕವಾಗಿ ಈ ಅಧಿಕಾರ ವರ್ಗ ಗುರುತಿಸಿಯೇ ಇಲ್ಲ. ಸರ್ಕಾರದ ಗಮನಕ್ಕೂ ಬಾರದ ಈ ಕಾಡುಗೊಲ್ಲರ ಹೀನ ಪರಿಸ್ಥಿತಿಯ ಬಗ್ಗೆ ಗಮನ ನೀಡಿದವರೇ ಇಲ್ಲ ಎಂಬುದು ಸ್ಪಷ್ಟ.

ಪ್ರೊ. ರವಿವರ್ಮಕುಮಾರ್‌ರವರ ಅಧ್ಯಕ್ಷತೆಯಲ್ಲಿದ್ದ ಮೊದಲನೇ ಕರ್ನಾಟಕ ರಾಜ್ಯ ಶಾಶ್ವತ ಹಿಂದುಳಿದ ವರ್ಗಗಳ ಆಯೋಗದ ವರದಿಯ ಪ್ರಕಾರ ರಾಜ್ಯದಲ್ಲಿಯ ಕಾಡುಗೊಲ್ಲರ ನೆಲೆಗಳು (ಭೂಪಟ) ಈ ಕೆಳಕಂಡಂತಿವೆ.

**ಕೋಷ್ಟಕ: ೨.೭ ಕಾಡುಗೊಲ್ಲರ ನೆಲೆಗಳ ವಿವರ**

| ಕ್ರಸಂ. | ಜಿಲ್ಲೆಯ ಹೆಸರು | ನೆಲೆಗಳ ಸಂಖ್ಯೆ | ಜನಸಂಖ್ಯೆ (ಲಕ್ಷದಲ್ಲಿ) |
|---|---|---|---|
| ೧ | ಚಿತ್ರದುರ್ಗ | ೪೨೦ | ೨.೫೦ |
| ೨ | ತುಮಕೂರು | ೪೧೫ | ೨.೪೦ |
| ೩ | ದಾವಣಗೆರೆ | ೧೨೦ | ೦.೫೦ |
| ೪ | ಬಳ್ಳಾರಿ | ೪೮ | ೦.೨೦ |
| ೫ | ಬೆಂಗಳೂರು ಗ್ರಾಮಾಂತರ | ೩೫ | ೦.೨೫ |
| ೬ | ಚಿಕ್ಕಮಗಳೂರು | ೩೬ | ೦.೨೦ |
| ೭ | ಹಾಸನ | ೫೨ | ೦.೨೨ |
| ೮ | ಕೋಲಾರ | ೧೫ | ೦.೦೫ |
| ೯ | ಶಿವಮೊಗ್ಗ | – | ೦.೩ |
| ೧೦ | ರಾಯಚೂರು | – | ೦.೨೦ |
| | **ಒಟ್ಟು** | ೧೧೪೧ | ೬.೩೭ |

ಎಸ್ ಕೆ ಸಣ್ಣಓಬಯ್ಯನವರು "ಮ್ಯಾಸ ಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಪಿಹೆಚ್ ಡಿ ಮಹಾಪ್ರಬಂಧದಲ್ಲಿ ಕಾಡುಗೊಲ್ಲರ ನೆಲೆ ಮತ್ತು ಜನಸಂಖ್ಯೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅವರ ಪ್ರಕಾರ "ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಹೊಸದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಕಾಡುಗೊಲ್ಲರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಮೊಳಕಾಲ್ಮೂರು ಮತ್ತು ಚಿತ್ರದುರ್ಗ ತಾಲ್ಲೂಕುಗಳಲ್ಲಿ ಕಡಿಮೆ ಸಂಖ್ಯೆಯ ಕಾಡುಗೊಲ್ಲ ನೆಲೆಗಳನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆ ಒಂದರಲ್ಲೇ ಸುಮಾರು ಎರಡು ಲಕ್ಷ ಜನಸಂಖ್ಯೆಯಷ್ಟು ಕಾಡುಗೊಲ್ಲರಿದ್ದಾರೆ ಎಂದು ಹೇಳಿದ್ದಾರೆ.

### ಸ್ಥಳೀಯ ವಲಸೆ

ಕಾಡುಗೊಲ್ಲರು ಅಲೆಮಾರಿ ಸಮುದಾಯದವರಾದ್ದರಿಂದ ವಲಸೆ ಹೋಗುವುದು ಇವರ ವೃತ್ತಿ ಬದುಕಿನ ಅವಿಭಾಜ್ಯ ಅಂಗವಾಗಿದೆ. ಇವರು ಪಶುಪಾಲಕರಾಗಿರುವುದರಿಂದ ತಮ್ಮ ರಾಸುಗಳನ್ನು ಮೇಯಿಸಲು ಊರಿನಿಂದ ಊರಿಗೆ ಮತ್ತು ಕಾಡಿನಿಂದ ಕಾಡಿಗೆ ವಲಸೆ ಹೋಗುವುದುಂಟು. ಕಾಡುಗಳು ದಟ್ಟವಾಗಿದ್ದ ಕಾಲದಲ್ಲಿ ವರ್ಷಾನುಗಟ್ಟಲೆ ದೂರದ ಕಾಡುಗಳಿಗೆ ತಮ್ಮ ದನಕರುಗಳು ಹೊಡೆದುಕೊಂಡು ಹೋಗಿ ಮೇಯಿಸಿ

ಕರ್ನಾಟಕ
ಕಾಡುಗೊಲ್ಲರ ನೆಲೆಗಳು
(ಸಂಖ್ಯೆಗಳಲ್ಲಿ)



ಕೊಂಡು ಬರುತ್ತಿದ್ದರು. ಕುರಿಸಾಕಣೆಯು ಕಾಡುಗೊಲ್ಲರ ಮುಖ್ಯ ಕಸುಬಾಗಿರುವುದರಿಂದ ಊರಿನಿಂದ ಊರಿಗೆ ಕುರಿ ಮೇಯಿಸಲು ವಲಸೆ ಹೋಗುತ್ತಾರೆ. ಕುರಿಗಳನ್ನು ಹೊಡೆದು ಕೊಂಡು ದಾರಿಯಲ್ಲಿ ವಲಸೆ ಹೋಗುತ್ತಾ ಜಮೀನು-ತೋಟಗಳಿರುವ ಜನರು ಕುರಿಗಳನ್ನು ಮಂದೆ ಬಿಡಿಸಿಕೊಳ್ಳುತ್ತಾರೆ. ಕುರಿಗಳು ಹಾಕುವ ಕುರಿಗೊಬ್ಬರ ಮತ್ತು ಗಂಜಲಿನಿಂದಾಗಿ ತೋಟಗಳು ಸಮೃದ್ಧವಾಗುತ್ತವೆ. ಇದಕ್ಕೆ ಪ್ರತಿಯಾಗಿ ಮಂದೆ ಬಿಡಿಸಿಕೊಂಡ ಜನರು (ತೋಟದವರು) ಇವರಿಗೆ ಊಟ ಮತ್ತು ದವಸ ಧಾನ್ಯಗಳನ್ನು ಕೊಡುತ್ತಾರೆ. ಬಯಲು ಸೀಮೆಯ ಜಿಲ್ಲೆಗಳಾದ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳ ಕುರಿಗಾರರಾದ ಕಾಡುಗೊಲ್ಲರು ಮಲೆನಾಡು ಮತ್ತು ಮೈಸೂರು ಕಡೆಗೆ ವಲಸೆ ಹೋಗುತ್ತಾರೆ. ಕುರಿಗಳನ್ನು ಮೇಯಿಸಲು ವಲಸೆ ಹೊರಡುವಾಗ ಇವರು ತಮ್ಮ ಜೊತೆಯಲ್ಲಿ ಕತ್ತೆ ಮತ್ತು ನಾಯಿಗಳನ್ನು ಜೊತೆಯಲ್ಲಿ ತರುತ್ತಾರೆ. ನಾಯಿಗಳು ಕುರಿಗಳನ್ನು ತೋಳಗಳಿಂದ ರಕ್ಷಣೆ ಮಾಡಿದರೆ, ಕತ್ತೆಗಳು ಕಾಡುಗೊಲ್ಲರ ಸರಕು ಸರಂಜಾಮುಗಳನ್ನು ಹೊತ್ತೊಯ್ಯುತ್ತವೆ. ಕುರಿ ಅಥವಾ ದನಕರುಗಳನ್ನು ಮೇಯಿಸಲು ವಲಸೆ ಹೊರಟಾಗ ಬಾಲಕರಿಂದ ಹಿಡಿದು ಮಹಿಳೆಯರಾದಿಯಾಗಿ ಹೊರಡುತ್ತಾರೆ. ಸಾಮಾನ್ಯವಾಗಿ ಕಾಡುಗೊಲ್ಲರು ಬೇಸಿಗೆ ಸಮಯದಲ್ಲಿ ವಲಸೆ ಹೋಗುತ್ತಾರೆ. ಇವರ ವಲಸೆಯ ಅವಧಿಯು ಕನಿಷ್ಠ ಒಂದು ತಿಂಗಳಿಂದ ಹಿಡಿದು ೬ ತಿಂಗಳವರೆಗೆವಿಗೂ ಮುಂದುವರಿಯುತ್ತದೆ. ಮುಂಗಾರು ಮಳೆ ಬಂದಾಗ ಅಥವಾ ಮಳೆಗಾಲ ಪ್ರಾರಂಭವಾದ ನಂತರ ತಮ್ಮ ತಮ್ಮ ಕುರಿ-ದನಕರುಗಳೊಂದಿಗೆ ತಮ್ಮ ಮೂಲ ನೆಲೆಗೆ ವಾಪಾಸಾಗುತ್ತಾರೆ. ಬರಗಾಲ ಬಂತೆಂದರೆ ಇಡೀ ಕುಟುಂಬವೇ ವಲಸೆ ಹೋಗುತ್ತದೆ. ಆದ್ದರಿಂದ ಕಾಡುಗೊಲ್ಲರ ಜೀವನ ದನಕರು-ಕುರಿಗಳೊಂದಿಗೆ ಮತ್ತು ವಲಸೆಯೊಂದಿಗೆ ಹಾಸುಹೊಕ್ಕಾಗಿದೆ.

### ಕುಲಗೋತ್ರಗಳು

ಕಾಡುಗೊಲ್ಲ ಸಮುದಾಯದ ಕುಲಗೋತ್ರಗಳು ಪ್ರಾಮುಖ್ಯವಾಗಿದ್ದು, ಬುಡಕಟ್ಟು ಲಕ್ಷಣಗಳನ್ನು ಬಿಂಬಿಸುವಲ್ಲಿ ಮತ್ತು ವಿವಾಹ ಸಂಬಂಧವನ್ನು ಏರ್ಪಡಿಸುವಲ್ಲಿ ಮುಖ್ಯಪಾತ್ರವನ್ನು ವಹಿಸುತ್ತವೆ. ಕಾಡುಗೊಲ್ಲರಲ್ಲಿ ಬೆಡಗು ಬಳಿಗಳಿಗೆ ಸಮಾನವಾಗಿ ಕುಲಗೋತ್ರಗಳೆಂದು ಕರೆಯುತ್ತಾರೆ. ಇವರಲ್ಲಿ ಮುಖ್ಯವಾಗಿ ಮೂರು ಕುಲಗಳಿವೆ. ಅವುಗಳೆಂದರೆ ಚಿತ್ತಮುತ್ತಿ, ಚಂದಮುತ್ತಿ ಮತ್ತು ರಾಮೇಗೌಡ ಕುಲದವರು. ಚಿತ್ತಮುತ್ತಿ ಕುಲದಲ್ಲಿ ಕರಡಿ ಗೊಲ್ಲರು ಮುಖ್ಯವಾದವರಾಗಿದ್ದಾರೆ. ಚಂದಮುತ್ತಿ ಕುಲದಲ್ಲಿ, ಸನ್ನರು, ಅಜ್ಜಿಯವರು, ಸೋಮನವರು, ಯುಗಡಿನವರು, ಅರೇನರು, ಮೇರೆನರು, ಕಂಬೀರು ಗೊಲ್ಲರು, ಕಹಳೆಯವರು, ಒಡೆಯವರು, ಒನಕೆಯವರು, ಮಾಸಿನವರು, ಬೇರನವರು, ಬೆಳ್ಳೂರನವರು ಮುಂತಾದ ಪಂಗಡಗಳಿವೆ. ಮೇಲೆ ಹೇಳಿದ ಎರಡು ಕುಲಗಳ ನಡುವೆ ವಿವಾಹ ಸಂಬಂಧ ಏರ್ಪಡಿಸಬಹುದು. ಅಂದರೆ ಚಂದಮುತ್ತಿ ಕುಲದಲ್ಲಿ ಬರುವ ಎಲ್ಲಾ ಬೆಡಗಿನ ಜನರು ಚಿತ್ತಮುತ್ತಿ ಕುಲದಡಿಯಲ್ಲಿ ಬರುವ ಕರಡಿಗೊಲ್ಲರ

ಜೊತೆ ವಿವಾಹ ಸಂಬಂಧವನ್ನು ಬೆಳೆಸಬಹುದು. ಹಾಗೆಯೇ ಚಿತ್ತಮುತ್ತಿ ಕುಲದಡಿಯಲ್ಲಿ ಬರುವ ಕರಡಿಗೊಲ್ಲರು ಚಂದಮುತ್ತಿ ಕುಲದಲ್ಲಿ ಬರುವ ಯಾವುದಾದರೂ ಕುಲ ಅಥವಾ ಬೆಡಗಿನೊಂದಿಗೆ ವಿವಾಹ ಸಂಬಂಧ ಬೆಳೆಸಬಹುದು. ಆದರೆ ಚಂದಮುತ್ತಿ ಕುಲದಲ್ಲಿ ಬರುವ ವಿವಿಧ ಬೆಡಗಿನವರು ತಮ್ಮ ತಮ್ಮಲ್ಲಿಯೇ ವಿವಾಹ ಸಂಬಂಧವನ್ನು ಬೆಳೆಸುವುದು ನಿಷೇಧ (taboo). ಚಿತ್ತಮುತ್ತಿ ಕುಲದಡಿಯಲ್ಲಿ ಬರುವ ಕರಡಿಗೊಲ್ಲರು ತಮ್ಮ ಕುಲದ ಒಳಗಡೆ ವಿವಾಹ ಸಂಬಂಧವನ್ನು ಬೆಳೆಸುವಂತಿಲ್ಲ. ಇವರಲ್ಲಿ ಗಂಡು ಮತ್ತು ಹೆಣ್ಣು ಅಣ್ಣ–ತಂಗಿಯರಾಗುತ್ತಾರೆ. ಉದಾಹರಣೆಗೆ ಒಬ್ಬ ಕರಡಿಗೊಲ್ಲ ಯುವಕನಿಗೆ ಕರಡಿಗೊಲ್ಲ ಸಮುದಾಯದ ಹೆಣ್ಣುಗಳು ಅಕ್ಕ–ತಂಗಿಯರಾಗುತ್ತಾರೆ. ಆದರೆ ಇದೇ ಯುವಕ ಚಂದಮುತ್ತಿ ಕುಲದಲ್ಲಿ ಬರುವ ಯಾವುದೇ ಕುಲದ ಯುವತಿಯೊಂದಿಗೆ ಮದುವೆಯಾಗಬಹುದು. ಇಲ್ಲಿ ಗಮನಿಸಬಹುದಾದ ಅಂಶವೇನೆಂದರೆ ಚಿತ್ತಮುತ್ತಿ ಕುಲದಲ್ಲಿ ಬರುವ ಕರಡಿಗೊಲ್ಲರಿಗೆ ವಿವಾಹಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಆಯ್ಕೆಗಳು (preferences) ಇರುತ್ತವೆ. ಆದರೆ ಚಂದಮುತ್ತಿ ಕುಲದಲ್ಲಿ ಬರುವ ವಿವಿಧ ಬೆಡಗಿನ ಜನರು ವಿವಾಹ ಸಂಬಂಧಕ್ಕೆ ಕರಡೀಗೊಲ್ಲರನ್ನೇ ಅವಲಂಬಿಸಿರುವುದರಿಂದ ಅವರಿಗೆ ಹೆಚ್ಚಿನ ಆಯ್ಕೆಗಳು ಇರುವುದಿಲ್ಲ. ಈ ಕುಲಗಳ ನಡುವೆ ನಾನಾ ಕಾರಣಗಳಿಂದಾಗಿ ಪೌರಾಣಿಕ ಮತ್ತು ಐತಿಹಾಸಿಕ ಭಿನ್ನಾಭಿಪ್ರಾಯಗಳಿವೆ ಎಂಬುದು ಕಾಡುಗೊಲ್ಲ ಸಮುದಾಯದ ಬುಡಕಟ್ಟು ಕಾವ್ಯಗಳಿಂದ ತಿಳಿದು ಬರುತ್ತದೆ.

ಹೆಚ್ ವಿ ನಂಜುಡಯ್ಯರವರ ಪ್ರಕಾರ ಕಾಡುಗೊಲ್ಲರಲ್ಲಿ ಮೂರು ಕುಲಗಳಿವೆ. "The Kadu Golla caste is made up of the three primary exogamous septs known Chittamuttoru, also styled Karadi Gollaru, Chandinoru,and RameGaudana kuladavaru(Nanjundaiah, H V: 1908:3)."

ಕಾಡುಗೊಲ್ಲರಲ್ಲಿನ ಉಪಪಂಗಡಗಳು ಅಥವಾ ಕುಲಗಳ ಬಗ್ಗೆ ತೀ ನಂ ಶಂಕರ ನಾರಾಯಣರವರು ಹೀಗೆ ಅಭಿಪ್ರಾಯಪಡುತ್ತಾರೆ. "ಕಾಡುಗೊಲ್ಲರಲ್ಲಿ ಉಪವರ್ಗಗಳನ್ನು ಬೆಡಗುಗಳೆಂದು ಕರೆಯುತ್ತಾರೆ; ಚಿತ್ತಮುತ್ತಿ ಕುಲದವರು, ರಾಮೇಗೌಡನ ಕುಲದವರು ಎಂಬ ಮುಖ್ಯವಾದ ವಿಭಾಗಗಳಿವೆ. ಇವುಗಳಲ್ಲಿ ಒಂದೊಂದು ಕುಲದಲ್ಲಿಯೂ ಕೆಲವಾರು ಬೆಡಗುಗಳಿವೆ. ಆದರೆ ಬೆಡಗುಗಳು ಎಷ್ಟು ಎಂಬುದು ಖಚಿತವಾಗಿ ತಿಳಿಯುವುದಿಲ್ಲ. ಕೆಲವು ಬೆಡಗುಗಳಲ್ಲಿ ಇನ್ನೂ ಕೆಲವು ಒಳ ವರ್ಗಗಳಿವೆ" ಎಂದು ಹೇಳಿದ್ದಾರೆ.

ಎಲ್ ಕೆ ಎ ಐಯರ್ ಅವರು ಕಾಡುಗೊಲ್ಲರಲ್ಲಿಯ ಕೆಳಕಂಡ ಬೆಡಗುಗಳನ್ನು ಗುರುತಿಸಿದ್ದಾರೆ.

**I. Chittamuttoru**

1) Kardiyavaru - Bear
2) Kamberu - Pot

**II. Chandinavru**

1) Ajjoru
2) Arsikalliyavaru - Milk-hedge
3) Konanavaru - He-buffalo
4) Polanavaru
5) Somanavaru - Moon
6) Yagadinavaru

**III Ramegowdana Kuladavaru**

1) Areraya - Name of person
2) Arenavaru - A plant
3) Merenavaru - Flail
4) Belloru - A hoe
5) Belluravaru - Name of a place
6) Chiranavaru
7) Huruliyavaru - Gram
8) Masinavaru - Name of a Diety
9) Nandihalliyavaru - Name of a Diety
10) Onakeyavaru - A pestle

ಪ್ರೊ, ಶ್ರೀ ನಂ ಶಂಕರನಾರಾಯಣರವರು ಎಲ್ಲವುಗಳನ್ನು ಸೇರಿಸಿಕೊಂಡು ಪರಿಷ್ಕೃತವಾದ ಪಟ್ಟಿಯನ್ನು ಕಾಡುಗೊಲ್ಲರ ಬೆಡಗುಗಳಿಗೆ ಸಂಬಂಧಿಸಿದಂತೆ ಕೊಟ್ಟಿದ್ದಾರೆ. ಅವುಗಳೆಂದರೆ

| | ಚಿತ್ತಮುತ್ತಿ ಕುಲದವರು | ರಾಮೇಗೌಡನ ಕುಲದವರು |
|---|---|---|
| ೧. ಕರಡಿಗೊಲ್ಲರು | ೧. ಅಜ್ಜಯವರ ಗೊಲ್ಲರು | ೧.ಅರೇನವರ ಗೊಲ್ಲರು |
| ೨. ಮಾರನವರ ಗೊಲ್ಲರು | | ೨. ಸನ್ನರ ಗೊಲ್ಲರು |
| ೨. ಮರೆನವರು | | |
| | ೩. ಸೋಮನವರ ಗೊಲ್ಲರು | ೩. ಕಂಬಿಯವರ ಗೊಲ್ಲರು |
| | ೪. ಬೊಮ್ಮನವರ ಗೊಲ್ಲರು | ೪. ಕಹಳೆಯವರ ಗೊಲ್ಲರು |
| | ೫. ಕೋಣನವರ ಗೊಲ್ಲರು | ೫. ಒಡೆಯವರ ಗೊಲ್ಲರು |
| | ೬. ಪೋಲಿನವರ ಗೊಲ್ಲರು | ೬. ಒನಕೆಯವರ ಗೊಲ್ಲರು |
| | ೭. ಎಗಡಿನವರ ಗೊಲ್ಲರು | ೭. ಮಾಸಿನವರ ಗೊಲ್ಲರು |
| | ೮. ಅರಸಿನಕಲ್ಲಿ ಗೊಲ್ಲರು | ೮. ಬೇರನವರ ಗೊಲ್ಲರು |
| | | ೯. ಬಳ್ಳೋರ ಗೊಲ್ಲರು |
| | | ೧೦. ಬೆಳ್ಳೂರವರು |

ಕಾಡುಗೊಲ್ಲರಲ್ಲಿನ ಚಿತ್ತಮುತ್ತಿಯ ಕುಲದವರು ಸೂರ್ಯನ ಅಂಶದಿಂದ ಹುಟ್ಟಿದವರು ಎಂಬ ಪ್ರತೀತಿ ಇದೆ. ಚಂದಮುತ್ತಿ ಎಂದರೆ ಚಂದ್ರನ ಅಂಶದಿಂದ ಹುಟ್ಟಿದವರು ಎಂಬ ಪ್ರತೀತಿ ಇದೆ. ಈ ಎರಡು ಕುಲದವರು ಅಂಬೇರಾಯ ಮತ್ತು ತುಂಬೇರಾಯ ಎಂಬ ಋಷಿಗಳ ಮೂಲದಿಂದ ಬಂದವರು ಎಂಬ ಐತಿಹ್ಯವಿದೆ (ನಾಗರಾಜು, ಬಿ ವಿ:೧೯೮೮:೮). ನಾಗರಾಜು ಅವರು ಕಾಡುಗೊಲ್ಲರಲ್ಲಿ ಭಿನ್ನಗೋತ್ರದ ಮೂರು ಒಳಪಂಗಡಗಳಿವೆ ಎಂದು ಹೇಳಿದ್ದಾರೆ. ಅವುಗಳೆಂದರೆ ೧. ಚಿತ್ತಮುತ್ತೋರು–ಕರಡಿಗೊಲ್ಲರು (ಕರಡಿ ಪಂಗಡ) ೨. ಚಂದ್ರನೊರು (ಚಂದ್ರನ ಪಂಗಡದವರು) ೩. ರಾಮೇಗೌಡನ ಕುಲದವರು (ರಾಮೇಗೌಡನ ವಂಶದವರು). ಈ ಮೂರರಲ್ಲಿಯೂ ಉಪಪಂಗಡಗಳಿವೆ. ಇವರೆಲ್ಲರ ಜಾತಿಯ ಮೂಲ ಒಂದೇ ಆದರೂ ಮದುವೆ ವಿಚಾರ ಬಂದಾಗ ಪಂಗಡ ಒಳಗೇ ಕೊಟ್ಟು ತೆಗೆದುಕೊಳ್ಳುವುದು ಪೂರ್ಣ ನಿಷಿದ್ಧ ಎಂಬುದಾಗಿ ನಾಗರಾಜುರವರು ಅಭಿಪ್ರಾಯಪಡುತ್ತಾರೆ. ತಮ್ಮ ಪೂರ್ವಜನೊಬ್ಬ ಕರಡಿಯನ್ನು ಪೋಷಿಸುತ್ತಿದ್ದ ಕಾರಣಕ್ಕೆ ಕರಡಿಗೊಲ್ಲರ ಉಪಪಂಗಡದ ಹುಟ್ಟಿಗೆ ಕಾರಣ ಎಂಬ ಮಾತು ಇದೆ ಎಂಬುದಾಗಿ ನಾಗರಾಜು ಅಭಿಪ್ರಾಯಪಡುತ್ತಾರೆ.

ಸಣ್ಣಓಬಯ್ಯನವರು(೨೦೦೨:೭೦) ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳ ಬಗ್ಗೆ ಮಾಡಿದ ಪಿಹೆಚ್ ಡಿ ಪ್ರಬಂಧದಲ್ಲಿ ಕಾಡುಗೊಲ್ಲರ ಬೆಡಗುಗಳು ಅಥವಾ ಕುಲಗಳ ಬಗ್ಗೆ ಬರೆದಿದ್ದು, ಕಾಡುಗೊಲ್ಲರಲ್ಲಿ ೭೩ ಬೆಡಗುಗಳನ್ನು ಗುರುತಿಸಿದ್ದಾರೆ. ಅವುಗಳು ಹೀಗಿವೆ.

**ಕೋಷ್ಟಕ: ೨.೮ ಕಾಡುಗೊಲ್ಲರ ಬೆಡಗುಗಳು**

| | |
|---|---|
| ೧) ಅಜ್ಜಿಯವರ ಗೊಲ್ಲರು | ೨) ಅರಸಿನಕಲ್ಲಿ ಗೊಲ್ಲರು |
| ೩) ಆರೇನವರ ಗೊಲ್ಲರು | ೪) ಉಪ್ಪಳರಗೊಲ್ಲರು |
| ೫) ಎಗಡಿನವರ ಗೊಲ್ಲರು | ೬) ಎಗಡಿಮತ್ತಿನ ಗೊಲ್ಲರು |
| ೭) ಎರಿಯರ ಗೊಲ್ಲರು | ೮) ಒಡೆಯವರ ಗೊಲ್ಲರು |
| ೯) ಒನಕೆಯವರ ಗೊಲ್ಲರು | ೧೦)ಓಬೇರ ಗೊಲ್ಲರು |
| ೧೧) ಕಂಬೇರ ಗೊಲ್ಲರು | ೧೨)ಕಟ್ಟೆಗೇರ ಗೊಲ್ಲರು |
| ೧೩) ಕರಡಿಗೊಲ್ಲರು | ೧೪)ಕರಡಿಬುಳ್ಳ ನಾಯ್ಕ ಗೊಲ್ಲರು |
| ೧೫) ಕರಿಮತ್ತಿ ಗೊಲ್ಲರು | ೧೬)ಕಲ್ಲಿಗೊಲ್ಲರು |
| ೧೭) ಕವುಕನ ಗೊಲ್ಲರು | ೧೮)ಕಹಳೆಯವರ ಗೊಲ್ಲರು |
| ೧೯) ಕಳ್ಳಿ ಗೊಲ್ಲರು | ೨೦)ಕಾಳಿನ ಗೊಲ್ಲರು |
| ೨೧) ಕ್ಯಾತನಾರು ಗೊಲ್ಲರು | ೨೨)ಕುರಿಯವರ ಗೊಲ್ಲರು |
| ೨೩) ಕೆಂಗುರಿ ಗೊಲ್ಲರು | ೨೪)ಕೆಂಚೆಡೆಯವರ ಗೊಲ್ಲರು |
| ೨೫) ಕೆಂಡಗನ ಗೊಲ್ಲರು | ೨೬)ಕೋಣನವರ ಗೊಲ್ಲರು |
| ೨೭) ಚಂದಮತ್ತಿ ಗೊಲ್ಲರು | ೨೮)ಚನ್ನೇರ ಗೊಲ್ಲರು |

| | | | |
|---|---|---|---|
| ೨೯) | ಚಿತ್ತಮುತ್ತಿ ಗೊಲ್ಲರು | ೩೦) | ಚಿತ್ತರ ಗೊಲ್ಲರು |
| ೩೧) | ಚೀರವರ ಗೊಲ್ಲರು | ೩೨) | ಜಂಪಾಳರ ಗೊಲ್ಲರು |
| ೩೩) | ಜವಾದಿ ಗೊಲ್ಲರು | ೩೪) | ಜಿವಾಜಿ ಗೊಲ್ಲರು |
| ೩೫) | ತೋಳಯಾನೆನ ಗೊಲ್ಲರು | ೩೬) | ದೇವರೋರ ಗೊಲ್ಲರು |
| ೩೭) | ನಂದಿಹಳ್ಳಿ ಗೊಲ್ಲರು | ೩೮) | ನರೆನರ ಗೊಲ್ಲರು |
| ೩೯) | ಪಜುಗಾವರ ಗೊಲ್ಲರು | ೪೦) | ಪದ ಗೊಲ್ಲರು |
| ೪೧) | ಪನ್ನೇರ ಗೊಲ್ಲರು | ೪೨) | ಪಲ್ಲೇರ ಗೊಲ್ಲರು |
| ೪೩) | ಪಯ್ಯೊರ ಗೊಲ್ಲರು | ೪೪) | ಬಳಗೊಳಲರ ಗೊಲ್ಲರು |
| ೪೫) | ಬಾಲೇನವರ ಗೊಲ್ಲರು | ೪೬) | ಬುಗುಡಿನವರ ಗೊಲ್ಲರು |
| ೪೭) | ಬೆಳ್ಳೋರ ಗೊಲ್ಲರು | ೪೮) | ಬೊಮಮ್ಮನವರ ಗೊಲ್ಲರು |
| ೪೯) | ಮಲಿನಾರ ಗೊಲ್ಲರು | ೫೦) | ಮೂಜುಲವರ ಗೊಲ್ಲರು |
| ೫೧) | ಮಾನೋನು ಗೊಲ್ಲರು | ೫೨) | ಮಾರನವರ ಗೊಲ್ಲರು |
| ೫೩) | ಮಾಸಿನವರ ಗೊಲ್ಲರು | ೫೪) | ಮುದ್ದಾರು ಗೊಲ್ಲರು |
| ೫೫) | ಮೇರೆನವರ ಗೊಲ್ಲರು | ೫೬) | ಮೆರಿಯೋರ ಗೊಲ್ಲರು |
| ೫೭) | ಮೇಶಿಯೋರ ಗೊಲ್ಲರು | ೫೮) | ರಾಮೇಗೌಡನರ ಗೊಲ್ಲರು |
| ೫೯) | ರಾಶಿನವರ ಗೊಲ್ಲರು | ೬೦) | ಸನ್ನಮುತ್ತಿ ಗೊಲ್ಲರು |
| ೬೧) | ಸನ್ನರ ಗೊಲ್ಲರು | ೬೨) | ಸಣ್ಣೇರ ಗೊಲ್ಲರು |
| ೬೩) | ಸೀಲುವಾಡಿ ಗೊಲ್ಲರು | ೬೪) | ಸೋಮನರ ಗೊಲ್ಲರು |
| ೬೫) | ಸೋಮುತ್ತಿ ಗೊಲ್ಲರು | ೬೬) | ಹಟ್ಟಿ ಗೊಲ್ಲರು |
| ೬೭) | ಹಬ್ಬು ಗೊಲ್ಲರು | ೬೮) | ಹಬ್ಬೊಳ ಗೊಲ್ಲರು |
| ೬೯) | ಹರೆನೋರ ಗೊಲ್ಲರು | ೭೦) | ಹುರುಳೀಯವರ ಗೊಲ್ಲರು |
| ೭೧) | ಹೂವಿನಾರು ಗೊಲ್ಲರು | ೭೨) | ಹೆಗ್ಗಣವರ ಗೊಲ್ಲರು |
| ೭೩) | ಹೊನ್ನೇರ ಗೊಲ್ಲರು | | |

ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಸಮೀಕ್ಷೆಯಲ್ಲಿ ಕಂಡು ಬಂದ ಕುಲಗಳು ಹೀಗಿವೆ.

**ಕೋಷ್ಟಕ: ೨.೯ ಕಾಡುಗೊಲ್ಲರ ಕುಲಗಳು**

| ಕ್ರ.ಸಂ. | ಕುಲದ ಹೆಸರು | ಕುಟುಂಬಗಳು | ಶೇಕಡಾವಾರು |
|---|---|---|---|
| ೧ | ಅಜ್ಜೇರು ಗೊಲ್ಲರು | ೧೫ | ೩.೭೫ |
| ೨ | ಅರಸಿನೋರ ಗೊಲ್ಲರು | ೬ | ೧.೫೦ |
| ೩ | ಅರೆನೋರು | ೧೬ | ೪.೦೦ |
| ೪ | ಬಡ ಗೊಲ್ಲರು | ೧ | ೦.೨೫ |
| ೫ | ಬಾಲನವರು | ೧ | ೦.೨೫ |

| | | | |
|---|---|---|---|
| ೬ | ಬೊಮ್ಮನವರು | ೫ | ೧.೨೫ |
| ೭ | ಚಿನ್ನೇರ ಗೊಲ್ಲರು | ೪ | ೧.೦೦ |
| ೮ | ದ್ಯಾವರ ಗೊಲ್ಲರು | ೨ | ೦.೫೦ |
| ೯ | ಎಡಗನವರು | ೧೦ | ೨.೫೦ |
| ೧೦ | ಕಹಳೆಯವರು | ೭ | ೧.೭೫ |
| ೧೧ | ಕಂಬೀರ ಗೊಲ್ಲರು | ೨೫ | ೬.೨೫ |
| ೧೨ | ಕರಡಿ ಗೊಲ್ಲರು | ೧೪೮ | ೩೭.೦೦ |
| ೧೩ | ಕೆಂಚ ಗೊಲ್ಲರು | ೨ | ೦.೫೦ |
| ೧೪ | ಕೆಂಗುರಿ ಗೊಲ್ಲರು | ೬ | ೧.೫೦ |
| ೧೫ | ಕೋಣನವರು | ೫ | ೧.೨೫ |
| ೧೬ | ಮಾಡನೋರು | ೧ | ೦.೨೫ |
| ೧೭ | ಮಾರನೋರು | ೧೫ | ೩.೭೫ |
| ೧೮ | ಮಾಸನವರ ಗೊಲ್ಲರು | ೧೩ | ೩.೨೫ |
| ೧೯ | ಮೆರೆಯರು | ೪೨ | ೧೦.೫೦ |
| ೨೦ | ಪೋಲನವರು | ೭ | ೧.೭೫ |
| ೨೧ | ಸಣ್ಣೋರ ಗೊಲ್ಲರು | ೪೩ | ೧೦.೭೫ |
| ೨೨ | ಸೋಮನ ಗೊಲ್ಲರು | ೧೭ | ೪.೨೫ |
| ೨೩ | ವಡೇನೋರು | ೧ | ೦.೨೫ |
| ೨೪ | ವಳ್ಳಿ ಸಣ್ಣೋರು | ೧ | ೦.೨೫ |
| ೨೫ | ಇತರೆಯವರು | ೭ | ೧.೭೫ |
| | ಒಟ್ಟು | ೪೦೦ | ೧೦೦.೦೦ |

### ವಂಶೋತ್ಪತ್ತಿಯ ವಿಚಾರ

ವಂಶೋತ್ಪತ್ತಿಯ ವಿಚಾರಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲ ಸಮುದಾಯದಲ್ಲಿ ತನ್ನದೇ ಆದ ಐತಿಹ್ಯಗಳಿವೆ. ಈ ಐತಿಹ್ಯಗಳು ಕಾಡುಗೊಲ್ಲರ ವಂಶ ಅಂದರೆ ಇವರ ಹುಟ್ಟು ಹೇಗಾಯಿತು ಎಂಬುದರ ಬಗ್ಗೆ ವಿವರ ನೀಡುತ್ತವೆ. ಅವುಗಳಲ್ಲಿ ಮುಖ್ಯವಾದುವು ಗಳೆಂದರೆ ಅಂಬೆರಾಯ ಮತ್ತು ತುಂಬೆರಾಯರ ಕಥೆಗಳು. ಕಾಡುಗೊಲ್ಲರು ಮೊದಲಿಗೆ ದೆಹಲಿ ಬಳಿಯ ಕಾಡುಗಳಲ್ಲಿ ವಾಸಿಸುತ್ತಿದ್ದರು. ಅವರ ಮೂಲ ಪುರುಷರಾದ ಅಂಬೆರಾಯ ಮತ್ತು ತುಂಬೆರಾಯರು ಋಷಿಗಳ ಮಾದರಿಯಲ್ಲಿ ಜೀವನ ನಡೆಸುತ್ತಿದ್ದರು. ಅವರ ವಂಶದಲ್ಲಿ ಚಂದನಗಂಧಿ ಎಂಬ ಹೆಣ್ಣು ಮಗಳು ಚಂದ್ರನನ್ನು ಕಾಮಿಸಿ ಅವನಿಂದ ಗರ್ಭದರಿಸಿ ಚಂದಮುತ್ತಿ ಎಂಬ ಮಗನನ್ನು ಪಡೆದಳು. ಚಂದನಗಂಧಿ ಚಂದ್ರನಿಂದ ಗರ್ಭದರಿಸಿದ್ದನ್ನು ಕಂಡು ಜನರು ಇದನ್ನು ನಂಬಲಿಲ್ಲ. ಜೊತೆಗೆ

ವಿವಾಹಕ್ಕೆ ಮೊದಲೇ ಗರ್ಭದರಿಸಿದ್ದನ್ನು ಸಮುದಾಯದ ಜನರು ನಂಬದೇ ಗರ್ಭಧಾರಣೆಗೆ ಕಾರಣವಾದವರನ್ನು ಹೆಸರಿಸುವಂತೆ ಚಂದನಗಂಧಿಗೆ ಒತ್ತಾಯಿಸಿದರು. ಆಗ ಚಂದನಗಂಧಿಯು ಸವಾಲು ಹಾಕಿ ಇದು ಚಂದ್ರನಿಂದ ಹುಟ್ಟಿದ ಮಗುವೇ ಆಗಿದೆ ಎಂದು ವಾದಿಸಿದಳು ಹಾಗೂ ಇದನ್ನು ಸಾಬೀತುಪಡಿಸುತ್ತೇನೆ ಎಂದು ಸವಾಲು ಹಾಕಿದಳು. ತದನಂತರ ಚಂದನಗಂಧಿಯ ಸಮ್ಮುಖದಲ್ಲಿಯೇ ಸಮುದಾಯದ ಜನರು ಒಂದು ಹಸುವಿನ ಮಣಕ (ಗರ್ಭಧಾರಣೆ ಮುನ್ನ)ವನ್ನು ತಂದು ಒಂದು ಕತ್ತಲೆ ಕೋಣೆಯಲ್ಲಿ ಕೂಡಿಹಾಕಿ ಪರೀಕ್ಷಿಸಿದರು. ಆಗ ಸೂರ್ಯನ ಕಿರಣಗಳು ಆ ಹಸುವಿನ ಮಣಕದ ಮೇಲೆ ಬೀಳುವಂತೆ ಮಾಡಲಾಯಿತು. ಸೂರ್ಯನ ಕಿರಣಗಳಿಂದ ಆ ಹಸುವು ಗರ್ಭಧರಿಸಿ ಒಂದು ಗಂಡು ಮಗುವನ್ನು ಹಡೆಯಿತು. ಸೂರ್ಯನ ಅಂಶ ಅಥವಾ ಕಿರಣಗಳಿಂದ ಹುಟ್ಟಿದ್ದರಿಂದ ಆ ಮಗುವಿಗೆ ಚಿತ್ತಮುತ್ತಿ ಎಂಬ ಹೆಸರಿಟ್ಟರು. ತದನಂತರ ಅಂಬೆರಾಯ ಮತ್ತು ತುಂಬೆರಾಯರಿಗೆ ವಯಸ್ಸಾದ ಮೇಲೆ ಚಂದಮುತ್ತಿ ಮತ್ತು ಚಿತ್ತಮುತ್ತಿಯವರು ಯುವಕರಾದರು. ಚಂದನಗಂಧಿಗೆ ಮದುವೆ ಮಾಡಿಸಿದರು. ಅವಳು ತನ್ನ ಗಂಡನಿಂದ ಒಂದು ಹೆಣ್ಣು ಮಗುವನ್ನು ಪಡೆದಳು. ಆದಿಶೇಷನ ಮಗಳಾದ ಬಾಲ ನಾಗಮ್ಮನನ್ನು ಚಂದಮುತ್ತಿ ಮದುವೆಯಾದ ಮುಂದೆ ಅವರು ಜೀವನ ಸಾಗಿಸುತ್ತಾ ಕುಲದ ಉದ್ಧಾರಕ್ಕೆ ಕಾರಣರಾಗಿ ಸುಖವಾಗಿ ಬಾಳಿದರು ಎಂಬುದಾಗಿ ಐತಿಹ್ಯಗಳು ಹೇಳುತ್ತವೆ. ಇದು ಕಾಡುಗೊಲ್ಲರ ವಂಶೋತ್ಪತ್ತಿಯ ವಿಚಾರವನ್ನು ತಿಳಿಸುತ್ತದೆ.

ಹಾಗೆಯೇ ವಂಶೋತ್ಪತ್ತಿಯ ವಿಚಾರಕ್ಕೆ ಸಂಬಂಧಿಸಿದಂತೆ ಮತ್ತೊಂದು ಕಥೆಯಿದೆ. ಅದೆಂದರೆ "ಒಮ್ಮೆ ಭೂಮಿಗೆ ಬೆಂಕಿ ಹತ್ತಿ ಉರಿಯುತ್ತಿರಬೇಕಾದರೆ ಭೂಮಿಯ ಮೇಲಿನ ಪ್ರಾಣಿ, ಪಶುಪಕ್ಷಿಗಳ ಗೋಳನ್ನು ಕೇಳಿದ ಈಶ್ವರ ಭೂಲೋಕಕ್ಕೆ ಬಂದ. ಕಾಡಿಗೆ ಹತ್ತಿದ ಬೆಂಕಿಯನ್ನು ಆರಿಸುವ ಪ್ರಯತ್ನದಲ್ಲಿ ಈಶ್ವರನ ಹಣೆಯಿಂದ ಮೂರು ಬೆವರ ಹನಿ ಉದುರಿತು. ಆ ಮೂರು ಬೆವರ ಹನಿಯಿಂದ ಕಾಟಯ್ಯ, ಚಿತ್ತಯ್ಯ, ಓಬಳನರಸಿಂಹ ಹುಟ್ಟಿದರು. ಪಾರ್ವತಿ ಇವರನ್ನು ಮಕ್ಕಳೆಂದೇ ಬಾವಿಸಿದಳು (ಕೃಷ್ಣಮೂರ್ತಿ ಹನೂರು:೧೯೯೮:೮೪೨). ಅಲ್ಲದೇ ಪಾತೇ ದೇವರೂ ಕೂಡ ಈಶ್ವರನ ವರದಿಂದ ಹುಟ್ಟಿದವನು ಎಂಬುದು ಒಂದು ಕಥೆಯಿದೆ. ಹೀಗೆ ಕಾಡುಗೊಲ್ಲರ ವಂಶೋತ್ಪತ್ತಿಯ ವಿಚಾರದ ಬಗೆಗೆ ಹಲವು ರೀತಿಯ ಕಥೆ ಮತ್ತು ಐತಿಹ್ಯಗಳಿವೆ. ಇವು ವಂಶೋತ್ಪತ್ತಿಯ ಹಿನ್ನಲೆಯ ಬಗ್ಗೆ ಹೇಳುತ್ತವೆ. ಕಾಡುಗೊಲ್ಲರು ಇಂದಿಗೂ ಈ ರೀತಿಯ ಕುಲದ ಅಥವಾ ವಂಶದ ಉತ್ಪತ್ತಿಯ ಬಗೆಗೆ ಕಥೆ ಹೇಳುತ್ತಾರೆ. ಆದರೆ, ಇತ್ತೀಚೆಗೆ ಆಧುನೀಕರಣದಿಂದಾಗಿ ಸಮುದಾಯದ ಜನರು ಇಂತಹ ಐತಿಹ್ಯಗಳನ್ನು ದಾಖಲಾತಿ ಮಾಡುತ್ತಿಲ್ಲ. ಅಲ್ಲದೆ ಬದಲಾವಣೆಯ ಗಾಳಿಯಿಂದಾಗಿ ಹೊಸ ಹೊಸ ವಿಚಾರಗಳೊಂದಿಗೆ ಚರ್ಚಿಸುತ್ತಾರೆ. ಅಂತೂ ಕಾಡುಗೊಲ್ಲ ಸಮುದಾಯದ ವಂಶೋತ್ಪತ್ತಿಯ ವಿಚಾರಗಳು ತುಂಬಾ ಮಹತ್ವದ್ದಾಗಿವೆ.

ಪ್ರಸ್ತುತ ಆಯ್ದ ಸಮೀಕ್ಷೆಯ ಪ್ರಕಾರ ಕಾಡುಗೊಲ್ಲರಲ್ಲಿ ಚಂದಮುತ್ತಿ ಮತ್ತು

ಚಿತ್ತಮುತಿ ಪೂರ್ವಜರು ದೈವಗಳಾಗಿ ಪೂಜ್ಯರಾಗಿರುವವರ ವಿವರ ಹೀಗಿದೆ.

**ಕೋಷ್ಟಕ: ೨.೧೦ ಕಾಡುಗೊಲ್ಲರ ದೈವಗಳು**

| ಕ್ರ.ಸಂ. | ದೈವಗಳು | ಕುಟುಂಬಗಳ ಸಂಖ್ಯೆ | ಶೇಕಡ |
|---|---|---|---|
| ೧ | ಚಂದಮುತ್ತಿ | ೧೭೦ | ೪೨.೫೦ |
| ೨ | ಚಿತ್ತಮುತ್ತಿ | ೮೨ | ೨೦.೫೦ |
| ೩ | ಉತ್ತರ ನೀಡಿಲ್ಲ | ೧೪೮ | ೩೭.೦೦ |
| | ಒಟ್ಟು | ೪೦೦ | ೧೦೦.೦೦ |

ಸಮೀಕ್ಷೆಗೊಳಪಟ್ಟ ಕಟುಂಬಗಳಲ್ಲಿ ಶೇಕಡ ೩೭ ರಷ್ಟು ಕುಟುಂಬಗಳು ತಮ್ಮ ದೈವಗಳ ಕುರಿತ ಉತ್ತರ ನೀಡಿಲ್ಲದ್ದಿರುವುದು ವಿಶೇಷವೆ. ಇವು ತಮ್ಮ ಕುಲಮೂಲದ ದೈವಗಳು.

**ಮೇಲ್ಕಂಡ ವಿವರಗಳಿಗೆ ಸಂಬಂಧಿಸಿದ ಐತಿಹ್ಯಗಳು**

ಈ ಅಧ್ಯಾಯದಲ್ಲಿ ಕಾಡುಗೊಲ್ಲ ಸಮುದಾಯದ ಮೂಲ ಮತ್ತು ಪ್ರಸಾರದ ಬಗ್ಗೆ ಚರ್ಚಿಸಲಾಗಿದೆ. ಸಮುದಾಯದ ಮೂಲಸ್ಥಾನ, ವಲಸೆಯ ಮಾರ್ಗ, ಭೌಗೋಳಿಕತೆ, ಪ್ರಸಾರ ನೆಲೆಗಳು ವಲಸೆ, ಸ್ಥಳೀಯ, ಕುಲಗೋತ್ರಗಳು, ವಂಶೋತ್ಪತ್ತಿಯ ವಿಚಾರ ಹೀಗೆ ಈ ಅಂಶಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ. ಇವುಗಳಿಗೆಲ್ಲಾ ಸಂಬಂಧಿಸಿದಂತೆ ಇರುವ ಐತಿಹ್ಯವೆಂದರೆ. ಕಾಡುಗೊಲ್ಲರು ದೆಹಲಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಅಲ್ಲಿ ಮೊಗಲರ ಹಿಂಸೆ ತಾಳಲಾರದೆ ದಕ್ಷಿಣದ ಕಡೆ ವಲಸೆ ಬಂದು, ಮಧ್ಯದಲ್ಲಿ ತುಂಗಭದ್ರಾ ನದಿಯ ದಂಡೆಯ ಅಸುಪಾಸಿನಲ್ಲಿ ವಾಸಿಸಲು ಪ್ರಾರಂಭಿಸಿ ಮುಂದೆ ಅವರು ರಾಜ್ಯದ ಕೇಂದ್ರ ಭಾಗವಾದ ಚಿತ್ರದುರ್ಗ ಮತ್ತು ಪಕ್ಕದ ಜಿಲ್ಲೆಗಳಲ್ಲಿ ನೆಲೆಯೂರಿದರು. ಅವರುಗಳಲ್ಲಿ ಅಂಬೆರಾಯ ಮತ್ತು ತುಂಬೆರಾಯ ಎಂಬುವರು ಸಮುದಾಯದ ಹಿರಿಯರು ಸಮುದಾಯದ ಪೂರ್ವಿಕರಾಗಿದ್ದರು. ನಂತರ ಕುಲಕ್ಕೆ ಸಂಬಂಧಿಸಿದಂತೆ ಚಿತ್ತಮುತ್ತಿ ಮತ್ತು ಚಂದಮುತ್ತಿ ಎಂಬ ಇಬ್ಬರು ಯುವಕರಿಂದ ಮುಂದೆ ಕುಲೋತ್ಪತ್ತಿಯಾಗಿ ಕಾಡುಗೊಲ್ಲರ ವಂಶ ಮುಂದುವರಿಯಲು ಸಹಾಯಕವಾದರು ಎಂಬುದಾಗಿ ಐತಿಹ್ಯಗಳು ಹೇಳುತ್ತವೆ. ಜೊತೆಗೆ ಹಲವು ಕಥೆಗಳು ಕುಲದ ಉಗಮದ ಬಗ್ಗೆ ಬೆಳಕು ಚೆಲ್ಲುತ್ತವೆ. ಉದಾಹರಣೆಗೆ ಶಿವಪಾರ್ವತಿಯರಿಂದ ಚಿತ್ತಯ್ಯ ಮತ್ತು ಕಾಟಯ್ಯನವರು ಉದ್ಭವವಾದ ಹಾಗೆ. ಇವುಗಳಲ್ಲದೆ ಕಾಡುಗೊಲ್ಲ ಸಮುದಾಯದ ಉಗಮ ಮತ್ತು ಪ್ರಸಾರ ನೆಲೆಗಳ ಬಗ್ಗೆ ಜುಂಜಪ್ಪ ಮತ್ತು ಎತ್ತಪ್ಪನ ಪುರಾಣಗಳು ಹೇಳುತ್ತವೆ. ಇವರುಗಳ ಪ್ರಸಾರ ನೆಲೆಗಳನ್ನು ಚಿತ್ರದುರ್ಗದ ಕೆಲವು ಕಡೆ ಮತ್ತು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮತ್ತು ಚೇಳೂರಿನಲ್ಲಿ ನೋಡಬಹುದಾಗಿದೆ. ಕಾಡುಗೊಲ್ಲರ ಸಂಸ್ಕೃತಿ ವೀರರಾದ ಜುಂಜಪ್ಪ ಮತ್ತು ಎತ್ತಪ್ಪನವರುಗಳ ಸಾಹಸಗಾಥೆಗಳನ್ನು ವಿವಿಧ ವಿದ್ವಾಂಸರುಗಳು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

# ೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

**ಮನೆ, ಕೊಟ್ಟಿಗೆ, ಗಲ್ಲಿ, ಎಲ್ಲೆಕಟ್ಟು ಅಥವಾ ಮೇರೆ**

ಕಾಡುಗೊಲ್ಲರು ವಾಸಿಸುವ ಮನೆಗಳು ಅಪ್ಪಟ ಬುಡಕಟ್ಟು ಮನೆಗಳಂತಿರುತ್ತವೆ. ಬಹುತೇಕ ಇವರ ಮನೆಗಳು ಗುಡಿಸಲು ಮನೆಗಳಾಗಿರುತ್ತವೆ. ಈ ಗುಡಿಸಲುಗಳು ಕಾಡುಗೊಲ್ಲರ ಸಾಮಾಜಿಕ ಮತ್ತು ಆರ್ಥಿಕ ಹಿಂದುಳಿದಿರುವಿಕೆಯನ್ನು ಸೂಚಿಸುತ್ತವೆ. ಕೆಲವು ಜನರು ಮಾಳಿಗೆ ಮತ್ತೆ ಕೆಲವರು ಹೆಂಚಿನ ಮನೆಯನ್ನು ಹೊಂದಿರುತ್ತಾರೆ. ಆದರೆ ಅಂತಹವರ ಸಂಖ್ಯೆ ತುಂಬಾ ವಿರಳ. ಕಾಡುಗೊಲ್ಲರ ಮನೆ ಮತ್ತು ನೆಲೆಯ ಕುರಿತು ಚಲುವರಾಜು (೧೯೯೭) ರವರು ತಮ್ಮ ಕೃತಿ 'ಜುಂಜಪ್ಪ' ಎನ್ನುವುದರಲ್ಲಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. "ಕರ್ನಾಟಕದ ಒಳನಾಡಿನ ಮಧ್ಯಭಾಗವೆನ್ನಬಹುದಾದ ತುಮಕೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ವಿಶೇಷವಾಗಿ ಕಂಡುಬರುವ ಈ ಕಾಡುಗೊಲ್ಲರು ತಮ್ಮ ವಾಸಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಭೂ ಪ್ರದೇಶಗಳು ಕೂಡ ಅಷ್ಟೇ ವಿಶಿಷ್ಟವಾಗಿವೆ. ಕುರುಚಲು ಕಾಡುಗಳ, ಸಾಮಾನ್ಯ ಗುಡ್ಡಬೆಟ್ಟಗಳ ಹುಲ್ಲುಗಾವಲುಗಳೇ ಪ್ರಧಾನವಾದ ಈ ಪ್ರದೇಶ ಇವರ ವೃತ್ತಿಗೆ ಪೂರಕವಾದದ್ದು. ಊರುಗಳ ಸಂಸ್ಕೃತಿಗೆ ಪರ್ಯಾಯವಾಗಿ ತಮ್ಮದೇ ಹಟ್ಟಿಗಳ ಸಂಸ್ಕೃತಿಯನ್ನು ಪೋಷಿಸುತ್ತಾ, ಯಾವ ಕಾರಣಕ್ಕೂ ಊರಿನ ಕಲಾಪಗಳ ಜೊತೆ ಒಂದಾಗದ ಇವರು ಊರಿನ ಜನರನ್ನು ಮೈಲಿಗೆಯವರು ಎಂದೇ ಕರೆಯುತ್ತಾರೆ. ಜುಂಜಪ್ಪನ ಕಾವ್ಯವನ್ನು ಅವಲೋಕಿಸಿ ಹೇಳುವುದಾದರೆ ಬಹುಶಃ ಮೊದಲಿಗೆ ಪೂರಾ ಅಲೆಮಾರಿಗಳಾಗಿಯೇ ಜೀವನ ಸಾಗಿಸುತ್ತಿದ್ದ ಇವರು ಕ್ರಮೇಣ ಹಟ್ಟಿಗಳನ್ನು ಕಟ್ಟಿಕೊಂಡಂತೆ ಕಾಣುತ್ತದೆ".

**ವಾಸ್ತು :** ಕಾಡುಗೊಲ್ಲ ಸಮುದಾಯದವರು ಹಟ್ಟಿಗಳಲ್ಲಿ ಗುಡಿಸಲು ಕಟ್ಟಿಕೊಂಡು ವಾಸಿಸುವುದರಿಂದ ಈ ಗುಡಿಸಲುಗಳಿಗೆ ವಾಸ್ತು ಎನ್ನುವುದೇ ಇರುವುದಿಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಾರೆ. ಇವರಿಗೆ ವಾಸ್ತು ಬಗ್ಗೆ ಕಲ್ಪನೆಯೇ ಇರುವುದಿಲ್ಲ. ಇವರು ವಾಸ್ತುವನ್ನು ನಂಬುವುದಿಲ್ಲ. ಯಾವ ದಿಕ್ಕಿಗಾದರೂ ಸರಿಯೇ ತಮ್ಮ ಅನುಕೂಲಕ್ಕೆ ಸರಿಹೊಂದುವಂತೆ ಗುಡಿಸಲು ನಿರ್ಮಿಸಿಕೊಳ್ಳುತ್ತಾರೆ. ಈ ಗುಡಿಸಲುಗಳು ಚಪ್ಪಟೆಯಾಗಿರದೆ ಗುಂಡಾಗಿರುತ್ತವೆ. ಈ ಗುಡಿಸಲುಗಳ ನಿರ್ಮಾಣಕ್ಕೆ ಮಣ್ಣಿನಿಂದ ಗೋಡೆಯನ್ನು ಕಟ್ಟಿ, (ವೃತ್ತಾಕಾರವಾಗಿ ಕಟ್ಟಲ್ಪಟ್ಟಿದ್ದು) ತೆಂಗಿನ, ಬಾದೆ

ಹುಲ್ಲು ಅಥವಾ ಕಾಡಿನ ಹುಲ್ಲನ್ನು ಮೇಲಕ್ಕೆ ಹೊದಿಸಿರುತ್ತಾರೆ. ಬಹುತೇಕ ಕಾಡುಗೊಲ್ಲರ ಮನೆಗಳು ಗುಡಿಸಲು ಮನೆಗಳಾಗಿರುತ್ತವೆ. ಒಂದೆರಡು ಮಣ್ಣಿನ ಮಡಿಕೆ ಕಂಠಗಳನ್ನು ಗವಾಕ್ಷಿ ಅಥವಾ ಬೆಳಕಿನ ಕಂಡಿ ಅಂತ ಇಟ್ಟು ಅದರ ಬಾಯಿಗೆ ಅಡಿಕೆ ಪಟ್ಟೆಯಿಂದ ತಯಾರಿಸಿದ ಮುಚ್ಚಳ ಮುಚ್ಚುತ್ತಾರೆ. ಗುಡಿಸಲು ಅಥವಾ ಮನೆ ಬಾಗಿಲು ಮುಚ್ಚಲು ಮತ್ತು ತೆಗೆಯಲು ಕಟ್ಟಿಗೆಯಿಂದ ಕದ ಮಾಡಿಸಿರುತ್ತಾರೆ. ಕೆಲವೊಂದು ಗುಡಿಸಲುಗಳಲ್ಲಿ ತೆಂಗಿನ ಗರಿಯಿಂದ, 'ತಡಿಕೆ' ಕಟ್ಟಿಕೊಂಡು ಬಾಗಿಲು ಮುಚ್ಚಲು ಮತ್ತು ತೆಗೆಯಲು ತಡಿಕೆಯ ಬಾಗಿಲು ಮಾಡಿಕೊಂಡಿರುತ್ತಾರೆ.

ಅಡಿಗೆ ಮಾಡಲು ಮಣ್ಣಿನಿಂದ ಮಾಡಿದ ಒಲೆಗಳನ್ನು ಮಾಡಿರುತ್ತಾರೆ. ಅಡಿಗೆಗೆ ಮಣ್ಣಿನ ಮಡಿಕೆಗಳನ್ನು ಬಳಸುತ್ತಾರೆ. ಮಣ್ಣಿನ ಮಡಿಕೆಗಳನ್ನು ಒಂದರ ಮೇಲೊಂದರಂತೆ ಜೋಡಿಸಿರುತ್ತಾರೆ. ಹಾಲು, ಮೊಸರು, ಬೆಣ್ಣೆಯನ್ನು, ಮಣ್ಣಿನ ಮಡಿಕೆಯಲ್ಲಿ ತುಂಬಿ ಒಂದೆರಡು ಹಗ್ಗದ ನೆಲವುಗಳನ್ನು ಗುಡಿಸಲಿನ ಅಡ್ಡ ಬೆಲುಗಿಗೆ ಕಟ್ಟಿ ಇಳಿ ಬಿಟ್ಟಿರುತ್ತಾರೆ. ಖಾರ ಅರೆಯುವ ಗುಂಡು, ಬಂಡೆ ಒಳಕಲ್ಲು, ಅಡಿಗೆ ಮಾಡಲಿಕ್ಕೆ ಮಡಿಕೆ, ಹಿತ್ತಾಳೆ, ಕಂಚು, ಕಂಚಿನ ಗಂಗಳ, ಲೋಟ ಪಾತ್ರೆಗಳು ಅಡಿಗೆ ಮನೆಯಲ್ಲಿ ಕಂಡು ಬರುತ್ತವೆ. ಕಾಡುಗೊಲ್ಲರು ಹಿತ್ತಾಳೆ ಮತ್ತು ಮಣ್ಣಿನ ಮಡಿಕೆಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಇತ್ತೀಚೆಗೆ ಸ್ಟೀಲ್ ಪಾತ್ರೆಗಳನ್ನು ಉಪಯೋಗಿಸಲು ಪ್ರಾರಂಭಿಸಿದ್ದಾರೆ.

ಅಲೆಮಾರಿ ಬುಡಕಟ್ಟುಗಳಲ್ಲಿ ಬಹುಮಹಡಿ ಮನೆಗಳು ಇಲ್ಲವೆಂದೇ ಹೇಳಬೇಕು. ವೃತ್ತಾಕಾರದಲ್ಲಿ ಕಟ್ಟಲ್ಪಟ್ಟ ಗುಡಿಸಲು ಇಲ್ಲವೇ ಮಾಳಿಗೆ ಮನೆಗಳು ಕಾಡುಗೊಲ್ಲರ ಮನೆಗಳ ಲಕ್ಷಣವಾಗಿದ್ದು, ಒಂದೇ ಒಂದು ವಿಶಾಲವಾದ ಹಾಲ್ ಇರುತ್ತದೆ. ಈ ಹಾಲ್ ಅಥವಾ ರೂಮಿನಲ್ಲಿ ಎಲ್ಲಾ ವಸ್ತುಗಳನ್ನು ಗೋಡೆಯ ಸುತ್ತಲೂ ಇಟ್ಟಿರುತ್ತಾರೆ. ಅಡುಗೆ ಮಾಡಲು ಮಾತ್ರ ಹಾಲಿನ ಒಂದು ಮೂಲೆಯಲ್ಲಿ ತಾವೇ ಮಣ್ಣಿನಿಂದ ತಯಾರಿಸಿದ ಒಲೆಯಿರುತ್ತದೆ. ಅಡುಗೆ ಮಾಡುವುದು ಕಾಣದಂತೆ ಮಾಡಲು ಒಂದು ಸಣ್ಣ ಅಡ್ಡ ಗೋಡೆಯನ್ನು, ಅರ್ಧಕ್ಕೆ ಕಟ್ಟಿರುತ್ತಾರೆ. ಅರ್ಧಕ್ಕೆ ಕಟ್ಟಿರುವ ಸಣ್ಣ ಅಡ್ಡ ಗೋಡೆಯ ಮೇಲೆ ದೀಪ ಇಟ್ಟಿರುತ್ತಾರೆ. ಈ ದೀಪಕ್ಕೆ ಎಣ್ಣೆ ಮತ್ತು ಬತ್ತಿಯನ್ನು ಹಾಕಿ ಅದನ್ನು ಅಡ್ಡ ಗೋಡೆಯ ಮೇಲೆ ಇಟ್ಟಿರುತ್ತಾರೆ. ಈ ದೀಪದಿಂದ ಬಂದ ಬೆಳಕು ಅಡುಗೆ ಮಾಡುವ ಜಾಗಕ್ಕೂ ಮತ್ತು ಇನ್ನೊಂದು ಹಾಲಿಗೂ ಎರಡೂ ರೂಮಿಗೂ ಸೇರಿ ಹರಡುತ್ತದೆ. ಕಾಡುಗೊಲ್ಲರಿಗೆ ಮಲಗಲು ಬೇರೆ ಬೇರೆ ರೂಮುಗಳಿರದೆ ಎಲ್ಲರೂ ಒಂದೇ ಸೂರಿನ ಅಡಿ ಅಂದರೆ ಹಾಲಿನಲ್ಲಿ ಮಲಗುತ್ತಾರೆ.

ಈ ಸಮುದಾಯದ ಮನೆಗಳು ಕಲ್ಲು ಮಣ್ಣಿನಿಂದ ನಿರ್ಮಿತವಾದವುಗಳಿರುತ್ತದೆ. ಕೆಲವು ಕಡೆ ಬೆಟ್ಟ ಗುಡ್ಡಗಳಿಂದ ದೊರೆಯುವ ಸಣ್ಣ ಸಣ್ಣ ಕಲ್ಲುಗಳನ್ನು ಉಪಯೋಗಿಸಿ ಮನೆ ನಿರ್ಮಿಸಿಕೊಂಡಿರುತ್ತಾರೆ. ಮತ್ತೆ ಕೆಲವರು ಮಾಳಿಗೆ ಮನೆಗಳನ್ನು ಕಟ್ಟಿಕೊಳ್ಳುತ್ತಾರೆ. ಮಾಳಿಗೆ ಮನೆ ಕಟ್ಟಲು ಮಣ್ಣು, ಮರ, ಬಿದಿರುಗಳನ್ನು ಉಪಯೋಗಿಸುತ್ತಾರೆ. ಮೊದಲು ಚೌಕಾಕಾರದಲ್ಲಿ ಮಣ್ಣಿನಿಂದ ಅಥವಾ ಮಣ್ಣಿನ ಇಟ್ಟಿಗೆಯಿಂದ (ಹಸಿ ಇಟ್ಟಿಗೆ)

ಗೋಡೆಗಳನ್ನು ನಿರ್ಮಿಸುತ್ತಾರೆ. ನಂತರ ಗೋಡೆಗಳ ಮೇಲೆ ಅಡ್ಡಲಾಗಿ ದಪ್ಪನೆಯ ಮರದ ತೀರು (ಮಂದಗಳ) ಗಳನ್ನು ಹಾಕಿ ಅದರ ಮೇಲೆ ಬಿದಿರಿನ ಕಡ್ಡಿ ಅಥವಾ ತೀರುಗಳನ್ನು ಉದ್ದವಾಗಿ ಹಾಕುತ್ತಾರೆ. ನಂತರ ಅದರ ಮೇಲೆ ಮಣ್ಣನ್ನು ಚದುರಿಸಿ ಸಮಾನಾಂತರಗೊಳಿಸಿ ಮೇಲ್ಮೈಯನ್ನು ಮಣ್ಣಿನಿಂದ ಮುಚ್ಚುತ್ತಾರೆ. ಗಾಳಿ ಬೆಳಕಿಗೋಸ್ಕರ ಇವರು ಕಿಟಕಿಯನ್ನು ನಿರ್ಮಿಸುವುದಿಲ್ಲ. ಆದರೆ, ಮಾಳಿಗೆಯಲ್ಲಿ ಒಂದು ಗವಾಕ್ಷಿ (ಕಂಡಿ)ಯನ್ನು ಬಿಟ್ಟಿರುತ್ತಾರೆ. ಅದರಿಂದ ಗಾಳಿ ಬೆಳಕು ಬರುತ್ತದೆ. ಕಾಡುಗೊಲ್ಲರ ಮನೆಗಳಲ್ಲಿ ಗಾಳಿ ಬೆಳಕಿಗಾಗಿ ಹೆಚ್ಚು ಕಿಟಕಿಗಳು ಇರುವುದಿಲ್ಲ. ಇವರ ಗುಡಿಸಲುಗಳಿಗೆ ಕಿಟಕಿಗಳೇ ಇರುವುದಿಲ್ಲ. ಒಂದು ವೇಳೆ ಬೆಳಕಿಗಾಗಿ ಒಂದು ಅಥವಾ ಎರಡು ಕಿಂಡಿಗಳಿದ್ದರೂ, ಅವುಗಳನ್ನು ಬಿದಿರುಗಳಿಂದ ಅಥವಾ ಇನ್ನಾವುದೇ ಮರದ ಕಡ್ಡಿಗಳಿಂದ ನಿರ್ಮಿತವಾದವುಗಳಾಗಿರುತ್ತವೆ. ಆದರೆ ಇದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಸಾಮಾನ್ಯವಾಗಿ ಕಾಡುಗೊಲ್ಲರು ಕಟ್ಟುವ ಮನೆಗಳಿಗೆ, ಸಿಮೆಂಟ್, ಕಬ್ಬಿಣ ಮತ್ತು ಆಧುನಿಕ ರೀತಿಯ ಬಣ್ಣಗಳನ್ನು ಬಳಸುವುದಿಲ್ಲ. ಕಾಡಿನಲ್ಲಿ ದೊರೆಯುವ ಕಡ್ಡಿ, ಹುಲ್ಲು, ಗರಿಗಳು ಮುಂತಾದ ವಸ್ತುಗಳನ್ನು ತಂದು ಸರಳವಾಗಿ ಮನೆಗಳನ್ನು ನಿರ್ಮಿಸಿಕೊಳುತ್ತಾರೆ. ಆದರೆ ಇತ್ತೀಚೆಗೆ ಹಲವರು ಸಿಮೆಂಟ್, ಕಬ್ಬಿಣದಂಥ ವಸ್ತುಗಳನ್ನು ಬಳಸುವುದನ್ನು ಕಾಣಬಹುದಾಗಿದೆ. ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಹಾಗೂ ಇತರೆ ಜಿಲ್ಲೆಗಳಲ್ಲಿ ಚದುರಿದಂತೆ ಕಂಡು ಬರುವ ಬಹುತೇಕ ಕಾಡುಗೊಲ್ಲರ ಮನೆಗಳು ಗುಡಿಸಲು ಇಲ್ಲವೇ ಮಾಳಿಗೆ ಮನೆಗಳಾಗಿರುತ್ತವೆ.

ಕಾಡುಗೊಲ್ಲರು ತಮ್ಮ ಮನೆಗಳಿಗೆ ಯಾವುದೇ ರೀತಿಯ ಆಧುನಿಕ ಅಲಂಕಾರಗಳನ್ನು (ಪೇಂಟ್ಸ್) ಬಳಸುವುದಿಲ್ಲ. ಇವರು ತಮ್ಮ ಮನೆಗಳ ಗೋಡೆಗಳಿಗೆ ಕೆಮ್ಮಣ್ಣನ್ನು ಅಲಂಕಾರಕ್ಕಾಗಿ ಬಳಿಯುತ್ತಾರೆ. ಇವುಗಳಿಂದಲೇ ನಾನಾ ರೀತಿಯ ಚಿತ್ರವನ್ನು ಗೋಡೆಗಳಿಗೆ ಬಿಡಿಸುತ್ತಾರೆ. ಸುಣ್ಣ ಮತ್ತು ಕಾಗೆ ಬಂಗಾರದ ಮಣ್ಣನ್ನು ಸಹ ಗೋಡೆಗಳಿಗೆ ಬಳಿಯುತ್ತಾರೆ. ಇವರು ಬಿಡಿಸಿರುವ ಗೋಡೆಗಳ ಮೇಲಿನ ಚಿತ್ತಾರವು ಬುಡಕಟ್ಟು ಕಲೆಯನ್ನು ಬಿಂಬಿಸುತ್ತದೆ.

**ಕೊಟ್ಟಿಗೆ :** ಕಾಡುಗೊಲ್ಲ ಸಮುದಾಯದಲ್ಲಿ 'ಕೊಟ್ಟಿಗೆಗೆ' ಮಹತ್ವದ ಸ್ಥಾನವಿದೆ. ಇವರು ತಮ್ಮ ದನ ಮತ್ತು ಕುರಿಗಳನ್ನು ಸಾಕುವುದರಿಂದ ಅವುಗಳ ರಕ್ಷಣೆಗೆಂದು ಕೊಟ್ಟಿಗೆಗಳನ್ನು ನಿರ್ಮಿಸುತ್ತಾರೆ. ಕಾಡುಗೊಲ್ಲ ಸಮುದಾಯದವರು ಮನೆ ಕಟ್ಟುವಾಗಲೇ ಅದಕ್ಕೆ ಹೊಂದಿಕೊಂಡಂತೆ ಕೊಟ್ಟಿಗೆಗಳನ್ನು ನಿರ್ಮಾಣ ಮಾಡುತ್ತಾರೆ. ಅಂದರೆ ವರಾಂಡದಲ್ಲಿ ಅಥವಾ ಮುಖ್ಯ ಮನೆ ಬಾಗಿಲು ಎರಡೂ ಕಡೆಗಳಲ್ಲಿ ಕೊಟ್ಟಿಗೆಗಳನ್ನು ನಿರ್ಮಾಣ ಮಾಡಿ ದನ ಕರು, ಎತ್ತು, ಎಮ್ಮೆ, ಕುರಿ ಮೇಕೆಗಳನ್ನು ಕಟ್ಟಿ ಹಾಕುತ್ತಾರೆ. ಕೊಟ್ಟಿಗೆ ನಿರ್ಮಾಣಕ್ಕೆ ಇವರು ತೆಂಗಿನ ಗರಿ, ಕಾಡಿನ ಹುಲ್ಲು ಮತ್ತು ಬಿದಿರಿನ ದಬ್ಬೆ ಅಥವಾ ಗಳಗಳನ್ನು ಬಳಸುತ್ತಾರೆ. ಕೊಟ್ಟಿಗೆಗಳು ಮನೆಗಳಿಗೆ ಹೊಂದಿಕೊಂಡಂತೆ ಇರುವುದರಿಂದ ಮನೆಯ ಒಳಗೆ ಪ್ರವೇಶಿಸಲು ಕೊಟ್ಟಿಗೆಯ ಮೂಲಕವೇ ಪ್ರವೇಶಿಸ

ಬೇಕಾಗುತ್ತದೆ. ಕೊಟ್ಟಿಗೆಯು ಮನೆಯ ಮುಂಬಾಗಿಲು ಎರಡು ಇಕ್ಕೆಲಗಳಲ್ಲಿ ನಿರ್ಮಾಣ ಗೊಂಡಿರುತ್ತದೆ. ಈ ಕೊಟ್ಟಿಗೆಗಳಲ್ಲಿ ಹಸು ಅಥವಾ ಎತ್ತುಗಳನ್ನು ಕಟ್ಟಲು ಗೂಂತುಗಳನ್ನು ನೆಟ್ಟಿರುತ್ತಾರೆ. ಈ ಗೂಂತುಗಳಿಗೆ ಎತ್ತು ಅಥವಾ ಹಸುಕರುಗಳನ್ನು ಕಟ್ಟುತ್ತಾರೆ. ಈ ರೀತಿಯ ಕೊಟ್ಟಿಗೆಗಳಲ್ಲಿ ಕಟ್ಟುವ ದನಕರು ಮೇವನ್ನು ತಿನ್ನಲು ಅನುವಾಗುವಂತೆ, ಮನೆಯ ಗೋಡೆಗೆ ಹೊಂದಿಕೊಂಡಂತೆ 'ಗೋಂದಿಗೆ'ಗಳನ್ನು ನಿರ್ಮಾಣ ಮಾಡಿ ರುತ್ತಾರೆ. ಗೋಂದಿಗೆಗಳೆಂದರೆ ಹುಲ್ಲು ಅಥವಾ ಮೇವನ್ನು ಹಾಕಲು ಕಟ್ಟೋಯೋಪಾದಿ ಯಲ್ಲಿ ಕಟ್ಟಿರುವ ಕಟ್ಟುಗಳು. ದನಕರುಗಳು ಗಂಜಲು ಮತ್ತು ಸೆಗಣಿ ಹಾಕುವುದರಿಂದ ಹುಲ್ಲು, ಸೆಗಣಿ ಮತ್ತು ಗಂಜಿನೊಳಗೆ ಸೇರಿಕೊಳ್ಳದಂತೆ ಗೂಂದಿಗೆಯಲ್ಲಿ ದನಕರುಗಳು ಹುಲ್ಲನ್ನು ತಿನ್ನಲು ಅನುಕೂಲವಾಗುತ್ತದೆ. ಕೊಟ್ಟಿಗೆಗಳಿಗೆ ದನದ ಕೊಟ್ಟಿಗೆ, ಎಮ್ಮೆಗಳ ಕೊಟ್ಟಿಗೆ, ದನಕರುಗಳ ಕೊಟ್ಟಿಗೆ ಎಂದು ಕರೆಯುತ್ತಾರೆ. ಕೊಟ್ಟಿಗೆಯ ಜಾಗವು ಇಳಿಜಾರಿಯೋಪಾದಿಯಲ್ಲಿ ಇರುತ್ತದೆ. ಏಕೆಂದರೆ ದನಕರುಗಳು ಹಾಕುವ ಗಂಜು ಕೆಳಮುಖವಾಗಿ ಹರಿದು ಒಂದು ಕಡೆ ಹೋಗುಲು ಸಹಕಾರಿಯಾಗುತ್ತದೆ. ದನಕರುಗಳು ಗಂಜಲುವು ಕೆಲವು ಕ್ರಿಯಾವಿಧಿಗಳಲ್ಲಿ ಪವಿತ್ರವಾದುದರಿಂದ ಕಾಡುಗೊಲ್ಲರು ಕೊಟ್ಟಿಗೆ ಯನ್ನು ನಿರ್ಮಿಸುವಾಗ ಇಳಿಜಾರಿನ ಜಾಗ ಮಾಡುತ್ತಾರೆ. ಇಳಿಜಾರಿನ ಜಾಗ ತಯಾರು ಮಾಡಿ ಕೊಟ್ಟಿಗೆಯ ಕೊನೆಯ ಭಾಗದಲ್ಲಿ ಒಂದು ಮಡಿಕೆಯನ್ನು ಆ ಗುಂಡಿಯೊಳಗೆ ಹೊಂದಿಕೆಯಾಗುವಂತೆ ಹದ್ದುತ್ತಾರೆ. ನಂತರ ಆ ಮಡಿಕೆಯ ಬಾಯಿ ಮುಚ್ಚಿಕೊಳ್ಳುವಂತೆ ಒಂದು ಹಲಗೆಯನ್ನು ಅಥವಾ ಕಲ್ಲಿನ ಚಪ್ಪಡಿಯನ್ನು ಸಮಾನಾಂತರವಾಗಿ (horizontal) ಮುಚ್ಚಿರುತ್ತಾರೆ. ದನಕರುಗಳು ಹಾಕಿದ ಗಂಜಲು ನೇರವಾಗಿ ಹರಿದು ಆ ಗುಂಡಿಯನ್ನು ಸೇರುತ್ತದೆ. ಗುಂಡಿಯಲ್ಲಿ ಶೇಖರಿಸಿದ ಗಂಜಲನ್ನು ಬಿದಿರಿನಿಂದ ತಯಾರಿಸಿದ, ಬುಟ್ಟಿ, ಮಂಕರಿ ಮತ್ತು ಮರಗಳಿಗೆ (ಅಕ್ಕಿ, ರಾಗಿ ಮತ್ತು ದವಸ ಧಾನ್ಯಗಳನ್ನು ಸ್ವಚ್ಛಗೊಳಿಸಲು ಬಿದಿರಿನಿಂದ ತಯಾರಿಸಲಾದ ಸಾಧನ) ತೂತುಗಳು ಮುಚ್ಚಿಕೊಳ್ಳುವಂತೆ ಬಳಿಯುತ್ತಾರೆ. ದನಕರುಗಳ ಗಂಜಲನ್ನು ಸೂತಕ ತೆಗೆಯಲೂ ಬಳಸುತ್ತಾರೆ. ಇನ್ನೊಂದು ಮುಖ್ಯವಾದ ಸಂಗತಿಯೆಂದರೆ ಕರುಗಳಿಂದ ನೆಲಕ್ಕೆ ಬೀಳಿಸದೆ ಸಂಗ್ರಹಿಸಿಕೊಂಡ ಗಂಜಲು ಮತ್ತು ಸೆಗಣಿ ಪವಿತ್ರವಾದುದು ಎಂಬುದಾಗಿ ಕಾಡುಗೊಲ್ಲರ ನಂಬಿಕೆ.

ಕೊಟ್ಟಿಗೆಗಳಲ್ಲಿ ದನಕರು-ಎತ್ತು, ಎಮ್ಮೆಗಳನ್ನು ಎರಡೆರಡು ಹಗ್ಗಗಳಲ್ಲಿ ಕಟ್ಟಿರುತ್ತಾರೆ. ದನಕರುಗಳ ಗಂಜಲು ಮತ್ತು ಸೆಗಣಿ ಅವುಗಳ ಮೈಗೆ ತಾಗದಂತೆ ಮಾಡಲು ಮತ್ತು ದನಕರುಗಳ ಮೈ ಮಣ್ಣಾಗದಂತೆ ಕಸದ ಹುಲ್ಲನ್ನು ಕೊಟ್ಟಿಗೆಗೆ ಹಾಸಿ ದನಕರುಗಳು ಮಲಗುವಂತೆ ಅನುವು ಮಾಡಿಕೊಡುತ್ತಾರೆ. ಕಾಡುಗೊಲ್ಲರು ತಮ್ಮ ಮನೆ ಹೇಗೆ ಇದ್ದರೂ ದನಕರುಗಳ ಕೊಟ್ಟಿಗೆಯನ್ನು ಅತ್ಯಂತ ನೀಟಾಗಿ, ಸ್ವಚ್ಛವಾಗಿ, ವ್ಯವಸ್ಥಿತವಾಗಿ ನಿರ್ಮಿಸಿಕೊಳ್ಳುತ್ತಾರೆ. ಪುರುಷರು ದನಕರುಗಳ ಪಕ್ಕದ ಪಡಸಾಲೆಯಲ್ಲಿಯೇ ಮಲಗುತ್ತಾರೆ. ಮುಂಜಾನೆ ಎದ್ದೊಡನೆಯೇ ಕರುಗಳ ಮುಖ ನೋಡಿದರೆ ಒಳ್ಳೆಯದು

ಅಥವಾ ಶುಭವಾಗುತ್ತದೆ ಎಂಬುದು ಕಾಡುಗೊಲ್ಲರ ನಂಬಿಕೆ. ಮುಂಜಾನೆಯೇ ಎದ್ದು, ದನಕರುಗಳ ಮುಖ ನೋಡಿ, ಕೊಟ್ಟಿಗೆಯಲ್ಲಿರುವ ದನಕರುಗಳನ್ನು ಹೊರಗೆ ಕಟ್ಟಿ, ಕೊಟ್ಟಿಗೆಯನ್ನು ಬಂದರೆಕಿ ಪರಕೆಯಿಂದ ಸ್ವಚ್ಛಗೊಳಿಸಿ, ಸೆಗಣಿಯನ್ನು ತಿಪ್ಪೆಗೆ ಹಾಕುತ್ತಾರೆ. ಕಾಡುಗೊಲ್ಲರ ಕೊಟ್ಟಿಗೆಗಳಲ್ಲಿ ರೊಪ್ಪವೂ (ಕುರಿಗಳನ್ನು ಕೂಡುವ ಜಾಗ) ಒಂದು ಮುಖ್ಯವಾದುದಾಗಿದೆ. ಕುರಿಗಳನ್ನು ಕೂಡುವ ಅಥವಾ ಬಿಡುವ ಜಾಗಕ್ಕೆ ಕುರಿ ರೊಪ್ಪ ಎಂದು ಕರೆಯುತ್ತಾರೆ. ಕುರಿ ರೊಪ್ಪಗಳು ಮನೆಯ ಮುಂದುಗಡೆಯೇ ಅಥವಾ ಪಕ್ಕದಲ್ಲಿಯೇ ಇರುತ್ತವೆ. ಈ ಕುರಿ ರೊಪ್ಪಗಳನ್ನು ವೃತ್ತಾಕಾರದಲ್ಲಿ ವಿವಿಧ ರೀತಿಯ ಮುಳ್ಳಿನಿಂದ ನಿರ್ಮಾಣ ಮಾಡಿರುತ್ತಾರೆ. ರೊಪ್ಪದ ಬಾಗಿಲಿಗೆ ತಡಿಕೆಯಿರುತ್ತದೆ. ಕುರಿ ರೊಪ್ಪವು ಚಿಕ್ಕದಾಗಿರಬಹುದು ಅಥವಾ ದೊಡ್ಡದಾಗಿರಬಹುದು. ಇದು ಕುರಿಗಳ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಕಾಡುಗೊಲ್ಲರು ಸಾಕುವ ಕುರಿಗಳು ಕನಿಷ್ಠ ೧೦ ರಿಂದ ಸಾವಿರದವರೆಗೂ ಇರುತ್ತವೆ. ಕುರಿ ರೊಪ್ಪದ ಮಧ್ಯ ಭಾಗದಲ್ಲಿ ಮಂಚದಲ್ಲಿ ಪಾದಿಯಲ್ಲಿರುವ 'ಮಂಚಿಗೆ' ಇರುತ್ತದೆ. ಇದನ್ನು ಕಾಡುಗೊಲ್ಲರು 'ಮಂಚಿಗೆ' ಎಂದು ಕರೆಯುತ್ತಾರೆ. ರಾತ್ರಿ ಹೊತ್ತು ಕುರಿಗಳನ್ನು ನೋಡಿಕೊಳ್ಳಲು ಈ ಮಂಚಿಕೆಯ ಮೇಲೆ ಪುರುಷರು ಮಲಗುತ್ತಾರೆ. ಈ ಮಂಚಿಗೆಯ ಮೇಲೆ ಮಲಗುವವರು ರಾತ್ರಿ ಇಡೀ ಎಚ್ಚರದಿಂದಿದ್ದು, ಕುರಿಗಳ ರಕ್ಷಣೆ ಮಾಡುತ್ತಾರೆ. ಕುರಿಗಳ ರೊಪ್ಪವು ಸುರಕ್ಷತೆಯ ದೃಷ್ಟಿಯಿಂದ ಅಷ್ಟೇನು ಸುರಕ್ಷಿತವಾಗಿಲ್ಲದಿರುವುದರಿಂದ ಕಳ್ಳಕಾಕರ ಮತ್ತು ತೋಳಗಳಿಂದ ಕುರಿಗಳನ್ನು ರಕ್ಷಿಸಲು ರಾತ್ರಿಯಿಡೀ ಎಚ್ಚರದಿಂದಿರುತ್ತಾರೆ. ಕಳ್ಳರು ಅಥವಾ ತೋಳಗಳು ಬಂದರೆ ನಾಯಿಗಳು ಬೊಗಳುವುದರಿಂದ ಮಂಚಿಗೆಯ ಮೇಲೆ ಮಲಗಿರುವ ಜನರು ಆಗಾಗ್ಗೆ ನಾಯಿ ಬೊಗಳಿದಾಗ ಎಚ್ಚರದಿಂದಿದ್ದು ಅವರೂ ಸಹ ಒಂದು ರೀತಿಯ 'ಕೂಗು' ಹಾಕುತ್ತಾರೆ. ಅಂದರೆ ನಾನು ಎಚ್ಚರದಿಂದ್ದೇನೆ ಎಂದು ತಿಳಿಸಲು ಮಂಚಿಗೆಯ ಮೇಲೆ ಮಲಗಿರುವ ವ್ಯಕ್ತಿ ತಿಳಿಸಲು ಆ ರೀತಿಯಲ್ಲಿ ಶಬ್ಧ ಮಾಡುತ್ತಾನೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕಾಡುಗೊಲ್ಲರ ಹಟ್ಟಿಗಳಲ್ಲಿ ವಿದ್ಯುತ್ ದೀಪಗಳೇ ಇರುತ್ತಿರಲಿಲ್ಲ. ಜೊತೆಗೆ ಈ ಹಟ್ಟಿಗಳು ಮುಖ್ಯ ಹಳ್ಳಿಗಳಿಂದ ದೂರದ ಕಾಡಿನಲ್ಲಿ ಇರುತ್ತಿದ್ದರಿಂದ ತೋಳಗಳು ಮತ್ತು ಇತರೆ ಪ್ರಾಣಿಗಳು ಸುಲಭವಾಗಿ ಕತ್ತಲಲ್ಲಿ ಹಟ್ಟಿಗಳಿಗೆ ನುಗ್ಗಿ ಕುರಿ ರೊಪ್ಪದಲ್ಲಿದ್ದ ಕುರಿಗಳನ್ನು ಕೊಂದು ತಿನ್ನುತ್ತಿದ್ದ ನಿದರ್ಶನಗಳಿವೆ. ಹಾಗೆಯೇ ಇಡೀ ಹಟ್ಟಿಯಲ್ಲಿ ಕತ್ತಲಿದ್ದುದ್ದರಿಂದ ಕಳ್ಳಕಾಕರು ಸುಲಭವಾಗಿ ಕುರಿಗಳನ್ನು ಕದ್ದೊಯ್ಯುತ್ತಿದ್ದರು. ಆದರೆ ಇತ್ತೀಚೆಗೆ ಕೆಲವು ಕುರಿಗಾರರು ಭದ್ರವಾದ ಗೋಡೆಗಳನ್ನು ನಿರ್ಮಿಸಿ ಕುರಿ ರೊಪ್ಪಗಳನ್ನು ಕಟ್ಟುತ್ತಾರೆ. ಕೆಲವರು ಕಲ್ಲುಗಳನ್ನು ಬಳಸಿ ರೊಪ್ಪಗಳನ್ನು ನಿರ್ಮಿಸುತ್ತಾರೆ. ಅರಣ್ಯ ನಾಶ ಕಾಡುಗಳ ನಾಶ, ಕೃಷಿ ಚಟುವಟಿಕೆಗಳಿಂದ ಗೋವುಗಳು ಮತ್ತು ಕಾಡುಗಳು ನಾಶವಾದ್ದರಿಂದ ಕಾಡುಗೊಲ್ಲರು ಕ್ರಮೇಣ ಕುರಿಸಾಕಣೆ ಮತ್ತು ಪಶುಪಾಲನೆಯ ವೃತ್ತಿಯನ್ನು ಕಡಿಮೆ ಮಾಡುತ್ತಿದ್ದಾರೆ.

**ಎಲ್ಲೆಕಟ್ಟು ಅಥವಾ ಮೇರೆ :** ಕಾಡುಗೊಲ್ಲರ ಎಲ್ಲೆಕಟ್ಟನ್ನು ಎರಡು ರೀತಿಯಲ್ಲಿ ನೋಡಬಹುದು. ಒಂದು ದೇಶ ಅಥವಾ ರಾಜ್ಯದಲ್ಲಿನ ಅದರ ಎಲ್ಲೆಕಟ್ಟು ಮತ್ತು ಸ್ಥಳೀಯವಾಗಿ ಅಥವಾ ಪ್ರಾದೇಶಿಕ ಎಲ್ಲೆಕಟ್ಟು, ರಾಜ್ಯದ ಎಲ್ಲೆಕಟ್ಟನ್ನು ಈಗಾಗಲೇ ಹೇಳಲಾಗಿದೆ. ಇನ್ನು ಹಟ್ಟಿಗೆ ಸಂಬಂಧಿಸಿದಂತೆ ಎಲ್ಲೆಕಟ್ಟು ಎಂದರೆ ಕಾಡುಗೊಲ್ಲರ ಹಟ್ಟಿಗಳಲ್ಲಿ ಬರೀ ಕಾಡುಗೊಲ್ಲರೇ ವಾಸಿಸುತ್ತಾರೆ. ಇವರ ಎಲ್ಲೆಗಳಲ್ಲಿ ಕಾಡುಗೊಲ್ಲರ ನೆಲೆಗಳೇ ಕಂಡು ಬರುತ್ತವೆ. ಕಾಡುಗೊಲ್ಲರ ಎಲ್ಲೆಗಳು ತುಂಬಾ ಚಿಕ್ಕವಾಗಿರುತ್ತವೆ. ಕಾಡುಗೊಲ್ಲರ ಎಲ್ಲೆಗಳ ಕುರಿತು ಶ್ರೀ ನಂ ಶಂಕರನಾರಾಯಣರವರು ಹೀಗೆ ಹೇಳುತ್ತಾರೆ "ಕಾಡುಗೊಲ್ಲರು ಊರುಗಳಿಂದ ಹೊರಗೆ ಕಾಡುಗಳಲ್ಲಿ ಕಟ್ಟಿಕೊಂಡ ಹಟ್ಟಿಗಳಲ್ಲಿ ವಾಸ ಮಡುತ್ತಾರೆ. ಊರಿನಿಂದ ಬಹಳ ದೂರವಿರುವ ಯಾವ ಗೊಲ್ಲರ ಹಟ್ಟಿಯೂ ಐದು ಮೈಲುಗಳ ಅಂತರವನ್ನು ಮೀರುವುದಿಲ್ಲ. ಸಾಮಾನ್ಯವಾಗಿ ಊರಿನಿಂದ ಒಂದು ಫರ್ಲಾಂಗಿನಿಂದ ಹಿಡಿದು ಒಂದು ಮೈಲಿನವರೆಗಿನ ಅಂತರದಲ್ಲಿರುವ ಗೊಲ್ಲರ ಹಟ್ಟಿಗಳೇ ಹೆಚ್ಚು. ಕೆಲವು ಊರುಗಳಲ್ಲಿ ರಸ್ತೆಯ ಒಂದು ಕಡೆ ಊರು; ಇನ್ನೊಂದು ಕಡೆ ಈ ರೀತಿ ಇರುವುದೂ ಉಂಟು. ಆದರೆ ಊರಿನಿಂದ ದೂರವಿದ್ದು, ಪ್ರತ್ಯೇಕವಾಗಿರುವ ಗೊಲ್ಲರ ಹಟ್ಟಿಗಳ ಸಂಖ್ಯೆಯೇ ಹೆಚ್ಚು. ಹತ್ತು ಗುಡಿಸಲುಗಳಿರುವ ಹಟ್ಟಿಗಳೂ ಉಂಟು. ನೂರಾರು ಗುಡಿಸಲುಗಳಿರುವ ಹಟ್ಟಿಗಳೂ ಉಂಟು. ಸಾಮಾನ್ಯವಾಗಿ ಕಾಡುಗೊಲ್ಲರು ತಮ್ಮ ಹಟ್ಟಿಗಳ ಸುತ್ತ ಜಾಲಿಮುಳ್ಳು, ಬಾರೆ ಮುಳ್ಳು ಅಥವಾ ಬೇರೆ ಹತ್ತಿರದಲ್ಲಿ ದೊರೆಯುವ ಯಾವುದಾದರೂ ಮುಳ್ಳನ್ನು ಉಪಯೋಗಿಸಿ ಕೊಂಡು ಬೇಲಿ ಕಟ್ಟುತ್ತಾರೆ" (ಶಂಕರನಾರಾಯಣ, ಶ್ರೀ ನಂ:೧೯೮೭:೨೬). ಹೀಗೆ ಕಾಡುಗೊಲ್ಲರ ಜೀವನ ಹಟ್ಟಿಗಳ ಎಲ್ಲೆಗೆ ಸೀಮಿತವಾಗಿರುತ್ತದೆ. ಇವರು ನಾಗರೀಕ ಸಮಾಜದ ಪ್ರಭಾವದಿಂದ ದೂರವಾಗಿದ್ದಾರೆ. ಆದರೆ ಇತ್ತೀಚೆಗೆ ಸ್ವಲ್ಪ ಮಟ್ಟಿನ ಸ್ಥಿತಿವಂತರು ಹೆಂಚಿನ ಮನೆಗಳನ್ನು ಕಟ್ಟಿಕೊಂಡು ತಮ್ಮ ಕೃಷಿ ಜಮೀನಿನಲ್ಲಿ ವಾಸ ಮಾಡಲು ಪ್ರಾರಂಭಿಸಿದ್ದಾರೆ. ಕಾಡು ಗೊಲ್ಲರು ಅಲೆಮಾರಿ ಪಶುಪಾಲಕರಾಗಿರುವುದರಿಂದ ರಾಜ್ಯದಾದ್ಯಂತ ಪಶುಪಾಲನೆಗಾಗಿ ಅಲೆಯುವುದು ಸಾಮಾನ್ಯ.

### ಕ್ರಿಯಾವಿಧಿಯ ಸ್ಥಳಾವರಣ

ಬುಡಕಟ್ಟು ಜನರ ಧರ್ಮ, ಕ್ರಿಯಾವಿಧಿಗಳು, ಮತ್ತು ಇತರೆ ಸಾಂಸ್ಕೃತಿಕ ಅಂಶಗಳು ಇತರೆ ಸಮುದಾಯಗಳಿಗಿಂತ ಭಿನ್ನವಾಗಿರುತ್ತವೆ. ಇದು ಅಲೆಮಾರಿ ಬುಡಕಟ್ಟುಗಳಲ್ಲಿ ಇನ್ನೂ ಅನನ್ಯವಾಗಿದ್ದು ಅಲೆಮಾರಿ ಬುಡಕಟ್ಟು ಸಂಪ್ರದಾಯವನ್ನು ಬಿಂಬಿಸು ವಂತಿರುತ್ತದೆ. ಇದು ಕಾಡುಗೊಲ್ಲ ಸಮುದಾಯಕ್ಕೂ ಅನ್ವಯಿಸುತ್ತದೆ. ಕ್ರಿಯಾವಿಧಿಗಳಿಗೆ ಸಂಬಂಧಿಸಿದಂತೆ ಇರುವ ಅಂಶಗಳು ಕಾಡುಗೊಲ್ಲರಲ್ಲಿ ಕಂಡು ಬಂದಷ್ಟು ಬೇರಾವುದೇ ಸಮುದಾಯದಲ್ಲಿ ಕಂಡು ಬರುವುದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಸಾಮಾನ್ಯ ವಾಗಿ ಬುಡಕಟ್ಟು ಜನರು ಪ್ರಕೃತಿಯ ಆರಾಧಕರಾದುದರಿಂದ ಇವರು ಭೂಮಿ, ನೀರು, ಬೆಟ್ಟ, ಗುಡ್ಡ, ನದಿ, ಸರೋವರ ಮುಂತಾದ ಪ್ರಾಕೃತಿಕ ವಸ್ತುಗಳನ್ನು ಪೂಜಿಸುತ್ತಾರೆ.

ಕೆಲವು ಬುಡಕಟ್ಟು ಜನರಂತೂ ಪ್ರಾಣಿಗಳನ್ನು ತಮ್ಮ ಆರಾಧ್ಯ ದೇವರುಗಳನ್ನಾಗಿ ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ಆಯಾ ಬುಡಕಟ್ಟು ಜನರು ವಾಸಿಸುವ ಸ್ಥಳಗಳು, ನದಿಗಳು, ಬೆಟ್ಟಗಳು ಆರಾಧನೆಗೆ ಒಳಪಡುತ್ತವೆ.

ಕಾಡುಗೊಲ್ಲರು ನಡೆಸುವ ಕ್ರಿಯಾವಿಧಿಗಳಲ್ಲಿ ಸ್ಥಳದ ಅಥವಾ ಒಂದು ಜಾಗದ ಮಹಿಮೆಯು ತುಂಬಾ ಪ್ರಾಮುಖವಾಗಿರುತ್ತದೆ. ಇವರು ತಮ್ಮ ಕ್ರಿಯಾವಿಧಿಗಳನ್ನು ನೆರವೇರಿಸಲು ಕೆಲವು ಸ್ಥಳಗಳನ್ನು ನಿಗದಿಮಾಡಿಕೊಂಡಿರುತ್ತಾರೆ. ಈ ಸ್ಥಳಗಳು ಪೂಜಾ ಸ್ಥಳಗಳಾಗಿರಬಹುದು ಅಥವಾ ಇತರೆ ಕ್ರಿಯಾವಿಧಿಗಳನ್ನು ನೆರವೇರಿಸುವ ಸ್ಥಳಗಳಾಗಿರ ಬಹುದು. ಈ ಸ್ಥಳಗಳಿಗೆ ಕ್ರಿಯಾವಿಧಿಯ ಸಂದರ್ಭದಲ್ಲಿ ಮಾತ್ರ ಬಹಳ ಪ್ರಾಮುಖ್ಯತೆ ಇರುತ್ತದೆ.

**ಬಿದ್ದು ಬೀಳು ಕ್ರಿಯಾವಿಧಿ :** ಕಾಡುಗೊಲ್ಲರಲ್ಲಿ ಮಕ್ಕಳಿಗೆ ಏನಾದರೂ ರೋಗ ಅಥವಾ ತೊಂದರೆಯಾದಾಗ "ಬಿದ್ದು ಬೀಳು" ಎಂಬ ಒಂದು ಕ್ರಿಯಾವಿಧಿಯನ್ನು ನೆರವೇರಿಸುತ್ತಾರೆ. ಅಂದರೆ ರೋಗ ಅಥವಾ ಆಪತ್ತು ಬರದಿರಲಿ ಎಂದು ಇದನ್ನು ಮಾಡುತ್ತಾರೆ. ಇದನ್ನು ಮಾಡಲು ಹಟ್ಟಿಯ ಹೊರಗಡೆ ಮೂರು ದಾರಿಗಳು ಕೂಡಿರುವ ಮಧ್ಯದಲ್ಲಿ ಅರ್ಧ ಅಡಿಯಷ್ಟು ಚಿಕ್ಕ ಗುಂಡಿಯನ್ನು ತೆಗೆದು ಆ ಗುಂಡಿಯ ಸುತ್ತ ವೃತ್ತಾಕಾರದಲ್ಲಿ ಬಿಳಿ ರಂಗೋಲಿಯನ್ನು ಬಿಡಿಸಿ, ಹಸುವಿನ ಸೆಗಣಿಯಿಂದ ಗುಂಡಿಯ ಸುತ್ತ ಸಾರಿಸಿ, ನಂತರ ಹೂವನ್ನು ಇಡಲಾಗುತ್ತದೆ. ನಂತರ ಒಂದು ಕಪ್ಪೆಯನ್ನು ತಂದು ಅದನ್ನು ಕೊಯ್ದು ಆ ಗುಂಡಿಯೊಳಗೆ ಹಾಕಲಾಗುತ್ತದೆ. ತದನಂತರ ಒಂದು ಬಟ್ಟೆಯಿಂದ ಸುತ್ತಿ ಮಾಡಿದ ಬತ್ತಿಗೆ ಎಣ್ಣೆ ಹಾಕಿ ಅದನ್ನು ಉರಿಯಿಂದ ಉರಿಸಿ ಅದು ಉರಿಯುವಾಗ ಮಗುವನ್ನು ಆ ಗುಂಡಿಯ ಹತ್ತಿರ ನಿಲ್ಲಿಸಿ ಆ ಉರಿಗೆ ನೀರನ್ನು ರಭಸವಾಗಿ ಚಿಮ್ಮಿಸುತ್ತಾರೆ. ಅದು ಜೋರಾಗಿ ಶಬ್ದ ಮಾಡಿದಾಗ ಮಗು ಬೆಚ್ಚಿ ಬೀಳುತ್ತದೆ. ಆ ಮಗು ಹೆದರಿ ಬೆಚ್ಚಿ ಬಿದ್ದರೆ ಆ ಮಗುವಿಗೆ ಹರಡಿಕೊಂಡಿರುವ ರೋಗ, ನೋವು, ಹೆದರಿಕೆಯು ಮಾಯವಾಗಿ ಹೋಗುತ್ತದೆ ಎಂಬುದಾಗಿ ಕಾಡುಗೊಲ್ಲರ ನಂಬಿಕೆ. ನಂತರ ಆ ಗುಂಡಿಯನ್ನು ಮುಚ್ಚಿ ಅದರ ಮೇಲೆ ಮಣ್ಣನ್ನು ಹಾಕುತ್ತಾರೆ. ದಾರಿಯಲ್ಲಿ ಹೋಗುವವರು ಅದನ್ನು ಸ್ವಲ್ಪ ದಿನಗಳ ಮಟ್ಟಿಗೆ ತುಳಿಯಬಾರದು, ಪಕ್ಕದಲ್ಲಿ ನಡೆದು ಹೋಗಬೇಕು. ಆಗ ದಾರಿಯಲ್ಲಿ ಹೋಗುವವರು ಅದರ ಮೇಲೆ ಉಗುಳಿ ಹೋಗಬೇಕು. ಅಂದರೆ ಇದರ ಪ್ರಭಾವ ತನ್ನ ಮೇಲೆ ಬರಬಾರದು ಎಂಬ ನಂಬಿಕೆ. ಕೆಲವು ಸಂದರ್ಭಗಳಲ್ಲಿ ಕಪ್ಪೆಯು ದೊರೆಯದಿದ್ದರೆ ಅದಕ್ಕೆ ಬದಲಾಗಿ ಕೋಳಿ ಮೊಟ್ಟೆಯನ್ನು ಬೀಳಿಸಿ ಅಂದರೆ ಅದನ್ನು ಆಹುತಿ ಕೊಟ್ಟು, ಅಂದರೆ ಒಡೆದು ಆ ಗುಂಡಿಯಲ್ಲಿ ಹಾಕುತ್ತಾರೆ. ನಂತರ ಮಣ್ಣು ಮುಚ್ಚಿ ಮೊದಲಿನಂತೆ ಎಲ್ಲಾ ಕ್ರಿಯಾ ವಿಧಿಗಳನ್ನು ನೆರವೇರಿಸುತ್ತಾರೆ. ಇದಾದ ಮೇಲೆ ಅವರ ನಂಬಿಕೆ ಎಂದರೆ ಮಗುವಿಗೆ ಹೆದರಿಕೆಯಾಗಿದ್ದರೆ ಆ ಹೆದರಿಕೆ ಹೊರಟು ಹೋಗುತ್ತದೆ. ಮಗುವಿಗೆ ಇನ್ನೇನಾದರೂ ರೋಗ ರುಜಿನಗಳಿದ್ದರೆ ಈ ಬಿದ್ದು ಬೀಳನ್ನು ಮಾಡಿದರೆ ಹೋಗುತ್ತದೆ ಎಂಬ ಜನರ ನಂಬಿಕೆಯಾಗಿದೆ.

ಹಾಲಣ್ಣನ ಪಂಪು

ಹಾಲಣ್ಣನ ಪಂಪು ಎಂದರೆ ಕಾಡುಗೊಲ್ಲ ಸಮುದಾಯದವರು ತಮ್ಮ ಸಾಂಸ್ಕೃತಿಕ ವೀರರ ಹೆಸರಿನಲ್ಲಿ ಹಲವಾರು ದೇವರುಗಳನ್ನು ಪೂಜಿಸುತ್ತಾರೆ. ಅವರುಗಳಲ್ಲಿ ಹಾಲಣ್ಣ ದೇವರೂ ಒಬ್ಬರು. ಈ ದೇವರಿಗೆ ಗುಡಿ-ಗೋಪುರಗಳಿರುವುದಿಲ್ಲ. ಆದರೆ ಜನರು ಬಾಯಿಂದ ಬಾಯಿಗೆ ಈ ದೇವರ ಹೆಸರು ಹೇಳುತ್ತಾರೆ. ಕಾಡುಗೊಲ್ಲರು ಕುರಿಗಳನ್ನು ಸಾಕುವುದರಿಂದ ಕುರಿಗಳ ರಕ್ಷಣೆ ಅಗತ್ಯವಾಗಿರುತ್ತದೆ. ಕೆಲವು ಸಾರಿ ಕುರಿಗಳಿಗೆ ರೋಗ ರುಜಿನಗಳು ಬಂದಾಗ ಇವರು ಪಶುವೈದ್ಯಾಧಿಕಾರಿಗಳಿಂದ ಚಿಕಿತ್ಸೆ ಕೊಡಿಸುವುದಿಲ್ಲ ಬದಲಾಗಿ ಹಲವು ದೇವರಿಗೆ ಹರಕೆ ಹೊರುತ್ತಾರೆ. ಅಂತಹ ದೇವರುಗಳಲ್ಲಿ ಹಾಲಣ್ಣ ದೇವರ ಹರಕೆಯೂ ಒಂದಾಗಿರುತ್ತದೆ. ಅಂದರೆ ಕಾಡುಗೊಲ್ಲರ ಕುರಿಗಳು ಮರಿ ಹಾಕಿದಾಗ ಒಂದು ಟಗರು (ಗಂಡು) ಮರಿಯನ್ನು "ಹಾಲಣ್ಣನಿಗೆ ಬಿಡುತ್ತೇವೆ" ಎಂದು ಆ ಟಗರು ಮರಿಗೆ ಹೆಸರಿಡುತ್ತಾರೆ. ಟಗರು ಮರಿಯನ್ನು ಹಾಲಣ್ಣನಿಗೆ ಬಿಟ್ಟರೆ ಕುರಿಗಳಿಗೆ ರೋಗ ಬರುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಒಂದು ವೇಳೆ ರೋಗ ಬಂದರೂ ಹಾಲಣ್ಣನ ಕೃಪೆಯಿಂದ ರೋಗವಾಸಿಯಾಗುತ್ತದೆ ಎಂದು ಗೊಲ್ಲ ಸಮುದಾಯದ ನಂಬಿಕೆಯಾಗಿದೆ. ಟಗರು ಮರಿಯನ್ನು ಹಾಲಣ್ಣನಿಗೆ ಹೆಸರಿಟ್ಟ ನಂತರ ಕಾಕತಾಳೀಯವೆಂಬಂತೆ ಆ ಟಗರು ಮರಿಯು ಹುಲುಸಾಗಿ ಮಾಂಸ ಖಂಡಗಳಿಂದ ತುಂಬಿ ಬೆಳೆಯುತ್ತದೆ. ಹಾಗೆಯೇ ಕುರಿಗಳಿಗೆ ತಗಲಿರುವ ರೋಗವೂ ವಾಸಿಯಾಗುತ್ತದೆ. ಟಗರು ಮರಿಯು ದೊಡ್ಡದಾಗಿ ಬೆಳೆದಾಗ ಕುರಿ ಸಾಕಿರುವ ಕುಟುಂಬದವರು ಹಾಲಣ್ಣನಿಗೆ ಟಗರನ್ನು ಅರ್ಪಿಸಲು ಒಂದು ದಿನವನ್ನು ನಿಗದಿ ಮಾಡುತ್ತಾರೆ. ಅಂದರೆ ಹಾಲಣ್ಣನ ಪಂಪು ಹಾಕಬೇಕೆಂದು ಸಂಬಂಧಿಕರಿಗೆ ಮತ್ತು ಊರಿನ ಜನರಿಗೆ ತಿಳಿಸುತ್ತಾರೆ. ತದನಂತರ ಒಂದು ನಿಗದಿಯಾದ ದಿನಾಂಕದಂದು ಆ ಟಗರನ್ನು ಊರಿನ ಹೊರಗಡೆ ಒಂದು ಸ್ಥಳದಲ್ಲಿ (ಕ್ರಿಯಾವಿಧಿಯ ಸ್ಥಳ) ಪೂಜೆ ಮಾಡಿ ಹಾಲಣ್ಣ ದೇವರಿಗೆ ಬಲಿ ಕೊಡುತ್ತಾರೆ. ನಂತರ ಎಲ್ಲಾ ಜನರು ಮಾಂಸಾಹಾರಿ ಭೋಜನ ಮಾಡಿ ಹಿಂದಿರುಗುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪೂಜೆ ಮಾಡುವ ಸ್ಥಳವು ಆ ಸಮಯದಲ್ಲಿ ಮಾತ್ರ ಕ್ರಿಯಾವಿಧಿಯ ಸ್ಥಳವಾಗಿರುತ್ತದೆ. ಕ್ರಿಯಾವಿಧಿಯು ನಡೆದ ಮೇಲೆ ಆ ಸ್ಥಳಕ್ಕೆ ಪ್ರಾಮುಖ್ಯತೆ ಬರುವುದಿಲ್ಲ. ಹೀಗೆ ಕಾಡುಗೊಲ್ಲರಲ್ಲಿ ಕ್ರಿಯಾವಿಧಿಗಳಿಗೆ ಸಂಬಂಧಿಸಿದಂತೆ ಹಲವು ಪೂಜಾಸ್ಥಳಗಳಿವೆ. ಕ್ರಿಯಾವಿಧಿಗಳು ನಡೆದ ನಂತರ ಆ ಸ್ಥಳಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದು ಕೊಳ್ಳುತ್ತವೆ. ಈ ರೀತಿಯ ಕ್ರಿಯಾವಿಧಿಯ ಸ್ಥಳಗಳನ್ನು ಕಾಡುಗೊಲ್ಲರಿರುವ ನೆಲೆಗಳಲ್ಲಿ ಕಾಣಬಹುದು. ಇವುಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರುತ್ತವೆ. ಹಾಲಣ್ಣನ ಪಂಪು ಕ್ರಿಯಾವಿಧಿಯು ತುಮಕೂರು ಜಿಲ್ಲೆಯಲ್ಲಿ ಕಂಡು ಬರುವ ಕಾಡುಗೊಲ್ಲರಲ್ಲಿ ಪ್ರಚಲಿತವಿದ್ದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಬೇರೆ ದೇವರ ಹೆಸರಲ್ಲಿ ಇದನ್ನು ಕರೆಯುತ್ತಾರೆ. ಆದರೆ ಇತ್ತೀಚೆಗೆ ಬದಲಾವಣೆಯ ಗಾಳಿಯಿಂದಾಗಿ ಕ್ರಿಯಾವಿಧಿಗಳು ಕಡಿಮೆಯಾಗುತ್ತಿದ್ದು ಅದರ ಸ್ಥಳಗಳಿಗೂ ಪ್ರಾಮುಖ್ಯತೆ ಇಲ್ಲದಾಗುತ್ತಿದೆ.

ವಾಸೆಯ ಪರಿಕಲ್ಪನೆ

ಚಿತ್ತಮುತ್ತಿ ವಂಶಸ್ಥರಾದ ಕರಡಿಗೊಲ್ಲರಿಗೆ ಚಿತ್ರದೇವರು ಅಮವಾಸೆ ದೇವರು – ಈ ಚಿತ್ರದೇವರಿಗೆ ಮಂತ್ರವಾಸೆ ಕೊಯ್ಯುವ ಪದ್ಧತಿ ಇದೆ. ಕರಡಿಗೊಲ್ಲರಲ್ಲಿ ತಾಳಿ ಕಟ್ಟಿದವರು, ಮತ್ತು ತಾಳಿ ಕಟ್ಟುವವರು ಎಂದು ಎರಡು ಬಗೆ. ಈ ಎರಡು ಗುಂಪಿನವರು ಚಿತ್ರದೇವರಿಗೆ ವಾಸೆ ಕೊಯ್ದು ದೇವರು ಮಾಡುತ್ತಾರೆ. ಅಂದರೆ ಕರ್ನಾಟಕದಲ್ಲಿರುವ ಎಲ್ಲಾ ತಾಳಿ ಕಟ್ಟುವ ಕರಡಿಗೊಲ್ಲರು ೨೫–೩೦ ವರ್ಷಕ್ಕೊಮ್ಮೆ ಕಲೆತು ಹಿರಿಯೂರು ತಾಲೂಕಿನ ಪಕ್ಕದಲ್ಲಿರುವ ಚಿತ್ರದೇವರ ಮುಂದೆ ವಾಸೆ ಕೊಯ್ದು ದೇವರು ಮಾಡುತ್ತಾರೆ. ಅದೇ ರೀತಿ ಕರ್ನಾಟಕದಲ್ಲಿರುವ ಎಲ್ಲಾ ತಾಳಿ ಕಟ್ಟುವ ಕರಡಿಗೊಲ್ಲರು ಪಾವಗಡ ತಾಲೂಕಿನಲ್ಲಿರುವ ಪಾಲವ್ವ ಹಳ್ಳಿಯಲ್ಲಿ (ಪೋಲೆನಹಳ್ಳಿ) ೩೦–೩೫ ವರ್ಷಕ್ಕೊಮ್ಮೆ ಕಲೆತು ಚಿತ್ರದೇವರ ಮುಂದೆ ವಾಸೆ ಕೊಯ್ದು ದೇವರು ಮಾಡುತ್ತಾರೆ.

ಆದರೆ, ಪಾಲವ್ವನಳ್ಳಿಗೆ (ಪೋಲೆನಹಳ್ಳಿ) ಸೇರಿದ ತಾಳಿ ಕಟ್ಟುವ ಹಿರಿಯೂರು ತಾಲ್ಲೂಕಿನ ವೇಣುಕಲ್ಲುಗುಡ್ಡದ ಕರಡಿಗೊಲ್ಲರು ಪ್ರತಿವರ್ಷ ಕಾರ್ತೀಕ ಮಾಸದಲ್ಲಿ ವೇಣುಕಲ್ಲುಗುಡ್ಡ ಗ್ರಾಮದಲ್ಲಿ ವಾಸೆ ಕೊಯ್ದು ಚಿತ್ರದೇವರನ್ನು ಮಾಡುತ್ತಾರೆ. ಇದರ ವಿವರಣೆ ಕೆಳಗಿನಂತಿದೆ.

ವೇಣುಕಲ್ಲುಗುಡ್ಡ ಗ್ರಾಮದ ಗೊಲ್ಲರ ಹಟ್ಟಿಯಲ್ಲಿರುವ ಪಾಲಿವ್ವನಳ್ಳಿ (ಪೋಲೆನಹಳ್ಳಿ) ಚಿತ್ರದೇವರಿಗೆ ಸೇರಿದ ತಾಳಿ ಕಟ್ಟುವ ಕರಡಿಗೊಲ್ಲರು (ಮಾರ್ಗೊಳ್ಳರು ಅಥವಾ ಮಾರ್ನವರು) ಪ್ರತಿವರ್ಷ ಕಾರ್ತೀಕ ಮಾಸದಲ್ಲಿ ಒಂದು ಭಾನುವಾರ ಹಾಲು ಮೀಸಲು ಕರೆದು, ಎಡೆ ಮಾಡಿ, ಸೋಮವಾರ ಬೆಳಿಗ್ಗೆ ಹಾಲು ಮೀಸಲು, ಎಡೆ ತೆಗೆದುಕೊಂಡು ಒಂಪತ್ತಿನಿಂದ ಯಾವುದೇ ಗ್ರಾಮದೊಳಗೆ ಹೋಗದೆ, ಬೇರೆ ಸಮುದಾಯದವರ ನೆರಳನ್ನು ಹಾಯಿಸಿಕೊಳ್ಳದೆ ಸಂಬಂಧಪಟ್ಟ ಗೌಡ ಪೂಜಾರಿಗಳ ಮತ್ತು ಭಕ್ತರ ಹುಡುಗರು ಪಾಲವನಳ್ಳಿಗೆ ಹೋಗಿ, ಅಲ್ಲಿ ಸ್ಥಾಪಿಸಿರುವ ಚಿತ್ರದೇವರಿಗೆ ಪೂಜೆ ಸಲ್ಲಿಸಿ ಅದೇ ದಿನ ರಾತ್ರಿ ವಾಸ ಬಿಡುತ್ತಾರೆ. ಅವರು ಬಿಡುವುದರೊಳಗೆ ಇಲ್ಲಿ ಹಟ್ಟಿಯಿಂದ ಚಿತ್ರದೇವರನ್ನು ತೆಗೆದುಕೊಂಡು ಹಟ್ಟಿಯಿಂದ ಸುಮಾರು ಒಂದು ಕಿಲೋಮೀಟರು ಹೋಗಿ ಯಾವುದಾದರೂ ನೀರಿನ ಅನುಕೂಲ ಇರುವ ಹೊಲದಲ್ಲಿ ಪಂಪು (ಬೆಡಗು) ಹಸಿರು ಸೊಪ್ಪಿನಿಂದ ಹಾಕಿ ಅದರ ಮಧ್ಯೆ ದೇವರನ್ನು ಇಡುತ್ತಾರೆ. ನಂತರ ಮೊದಲೆ ಆರಿಸಿ ತಂದಿದ್ದ ಕೊಬ್ಬಿದ ಕುರಿಯನ್ನು ಅಜ್ಜಿಕಟ್ಟೆಯ ಬೈಲಿನಲ್ಲಿ ನಿರ್ಮಿಸಿದ್ದ ವಾಸೆ ಕಲ್ಲಿನ ಹತ್ತಿರ ಹೋಗಿ, ಚಿತ್ರದೇವರ ಹೆಸರಿನಲ್ಲಿ ನಿರ್ಮಿಸಿರುವ ಕಲ್ಲಿನ ಬೆನವುಗಳನ್ನು ಪೂಜಿಸಿ, ಎದುರಿಗೆ ನಿರ್ಮಿಸಿರುವ ವಾಸೆ ಕಲ್ಲಿನ ಮೇಲಕ್ಕೆ ಅಂದರೆ ನೆಲದ ಮೇಲೆ ನಿಲ್ಲಿಸದೆ ಆ ಕೊಬ್ಬಿದ ಕುರಿಯನ್ನು ಪೂಜಾರಿಗಳಲ್ಲಿ ಇಬ್ಬರು ಎತ್ತಿ ಅವಚಿಕೊಳ್ಳುತ್ತಾರೆ. ಆಗ ಮತ್ತೊಬ್ಬ ಪೂಜಾರಿ ಕತ್ತು ಕೊಯ್ದು ರಕ್ತವನ್ನು ಆ ಕಲ್ಲಿನ ಮೇಲೆ ಸುರಿಸುತ್ತಾನೆ. ಕೆಲವು ಕಡೆ ಒಂದು ಬಿಳಿ ಕುರಿಯನ್ನು ವಾಸೆ ಕೊಯ್ದು ತಲೆಯನ್ನು ಹುಳುತ್ತಾರೆಂಬ ಪ್ರತೀತಿ. ಆ ಕುರಿ ಕೊಯ್ದು ನಂತರ ಪೂಜೆ ಮುಗಿಸಿ ಆ ಕುರಿಯನ್ನು ಪಂಪಗೆ

ತರುತ್ತಾರೆ. ಈ ಮುಂಚೆ ಕುರಿಯನ್ನು ಚರ್ಮ ಸಹಿತ ಸುಟ್ಟು ಮಾಂಸ ತೆಗೆದು ಅಡಿಗೆ ಮಾಡುತ್ತಿದ್ದರೆಂದು ತಿಳಿದಿದೆ. ಆದರೆ ಈಗ ಖಾಲಿ ಚರ್ಮ ತೆಗೆದು ಅದನ್ನು ಕೊಯ್ದು ಸಾರು ಮಾಡುತ್ತಾರೆ – ಅಂದರೆ ಅಷ್ಟರಲ್ಲಿ ಪಾಲವ್ವನಹಳ್ಳಿಗೆ ಹೋಗಿದ್ದವರು ಪ್ರಸಾದ ತಂದ ಮೇಲೆ, ಆ ವಾಸೆ ಕುರಿಯಿಂದ ತಯಾರಿಸಿದ ಮಾಂಸವನ್ನು ಪೂಜಾರಿ ವಂಶದವರು ಮಾತ್ರ ತಿನ್ನುತ್ತಾರೆ. ಇದರ ಪಕ್ಕದಲ್ಲಿ ಅದೇ ಪಂಪಿನಲ್ಲಿ ಆ ದೇವರಿಗೆ ಒಂದು ಕುರಿ ಮತ್ತು ಟಗರುಗಳನ್ನು ಕೊಯ್ದು ಹರಿಸೇವೆ ಮಾಡುತ್ತಾರೆ. ಆದರೆ ಆ ವಾಸೆ ಕುರಿ ಮೂಳೆ, ಅಥವಾ ಸಾರುಳಿದರೆ ಬೆಂಕಿಗೆ ಹಾಕಿ ಸುಡುತ್ತಾರೆ. ಅದೇ ದಿನ ಪಂಪಿಗೆ ತೆಗೆದುಕೊಂಡು ಹೋಗಿದ್ದ ಎಲ್ಲಾ ದೇವರುಗಳ ಸಂಕೇತವನ್ನು ಹತ್ತಿರದ ನದಿಗೋ ಅಥವಾ ಚಿಲುಮೆಗೋ ಹೋಗಿ ಗಂಗಾ ಪೂಜೆ ಮಾಡಿ, ದೇವರನ್ನು ಆ ನೀರಿನಿಂದ ತೊಳೆದು ಅಲಂಕರಿಸಿ ವಾಪಸ್ಸು ಒಂದು ರಾತ್ರಿ ದೇವರ ಪೂಜೆ ಮಾಡಿ ನಂತರ ಗುಡಿ ತುಂಬಿಸುತ್ತಾರೆ.

ಈ ವಾಸೆ ಕಲ್ಲಿನ ವಿಶೇಷತೆ ಅಂದರೆ, ಚಿತ್ತಯ್ಯ ಕಾಟಯ್ಯ ಊರಿಟ್ಟಿದ್ದ ಜಾಗವೆಂದು ಪ್ರತೀತಿ ಇರುವ ಚಿತ್ರಹಳ್ಳಿಯಲ್ಲಿ ಕಾರಣಾಂತರದಿಂದ ವಾಸ ಕಲ್ಲಿನ ಮೇಲೆ ಮಣ್ಣು ಮುಚ್ಚಿಕೊಂಡು ವಾಸೆ ಕಲ್ಲು ಕಾಣದಾಗಿತ್ತು. ಆದ್ದರಿಂದ ಅಲ್ಲಿ ವಾಸೆ ಕೊಯ್ಯುವುದನ್ನು ನಿಲ್ಲಿಸಿದ್ದರಿಂದ ಆ ದೇವರ ಪಟ್ಟದ ಪೂಜಾರಿಗಳು ಪ್ರತಿ ವರ್ಷ ಸಾಯುತ್ತಿದ್ದರಂತೆ. ಕೊನೆಗೆ ಆ ದೇವರನ್ನು ಕೇಳಿಕೊಳ್ಳಲಾಗಿ ಹಿರಿಯೂರು ತಾಲೂಕಿನ ಮುಂಗಸವಳ್ಳಿ ಗೊಲ್ಲರಹಟ್ಟಿಯಲ್ಲಿ ಕಾಟಜ್ಜ ಪದ ಹೇಳಿ ವಾಸೆ ಕಲ್ಲನ್ನು ಕೂರಿಸುತ್ತಾನೆ. ವಾಸೆ ಕೊಯ್ದು ದೇವರ ಪಟ್ಟದ ಪೂಜಾರಿಗಳು ಬದುಕಲು ಸಾಧ್ಯವೆಂದು ಒಬ್ಬ ಹುಡುಗನ ಮೈಮೇಲೆ ಬಂದು ಹೇಳಿದನಂತೆ. ಅದೇ ರೀತಿ ಮುಂಗುಸವಳ್ಳಿಗೆ ಹೋಗಿ ಕಾಟಜ್ಜನನ್ನು ಭೇಟಿ ಮಾಡಲಾಗಿ ಆತನಿಗೆ ಗಣೆ ಮೇಲೆ ಪದ ಹೇಳುವುದು ಬರುವುದಿಲ್ಲವೆಂದರೂ ದೇವರ ಅಪ್ಪಣೆಯಂತೆ ಕಾಟಜ್ಜನನ್ನು ಬಲವಂತವಾಗಿ ಚಿತ್ರಹಳ್ಳಿಗೆ ಕರೆದು ತಂದು ಗಣೆ ಊದಿಸಿದಾಗ ಅವನಿಗೇ ಅರಿವಿಲ್ಲದೆ ಒಂದು ರಾತ್ರಿ, ಒಂದು ಹಗಲು ಪದ ಹೇಳಿ ಮಾರನೆ ದಿನ ಸೂರ್ಯನಿಗೆ ಎದುರಾಗಿ ನಿಂತು ತಲೆ ನೆರಳಿನ ಕೆಳಗೆ ವಾಸೆ ಕಲ್ಲಿದೆ ಎಂದು ಹೇಳಲಾಗಿ, ಅಲ್ಲಿ ಅಗೆದು ನೋಡಿದಾಗ ವಾಸೆ ಕಲ್ಲು ಸಿಕ್ಕಿತೆಂದು ಪ್ರತೀತಿ. ನಂತರ ವಾಸೆ ಕೊಯ್ದು ಪಟ್ಟ ಕಟ್ಟಿದಾಗ ಆ ಪೂಜಾರಿ ಸಾಯಲಿಲ್ಲ ಎಂಬ ಪ್ರತೀತಿ.

### ಬ್ರಹ್ಮಾಂಡದ ಪರಿಕಲ್ಪನೆ

ಜಗತ್ತಿನ ಉಗಮದ ಬಗ್ಗೆ ಹಲವು ರೀತಿಯ ಕಲ್ಪನೆಗಳಿವೆ. ಈ ಕಲ್ಪನೆಗಳನ್ನು ಬ್ರಹ್ಮಾಂಡ ಕಲ್ಪನೆ ಎಂದು ಕರೆಯುತ್ತಾರೆ. ಹಾಗೆಯೇ ಬುಡಕಟ್ಟುಗಳ ಉಗಮದ ಬಗ್ಗೆ ಅವುಗಳದ್ದೇ ಆದ ಪರಿಕಲ್ಪನೆಗಳಿವೆ. ವಿವಿಧ ಬುಡಕಟ್ಟು ಸಮುದಾಯಗಳ ಬ್ರಹ್ಮಾಂಡದ ಪರಿಕಲ್ಪನೆಯ ಹಾಗೆ ಕಾಡುಗೊಲ್ಲ ಬುಡಕಟ್ಟಿನ ಉಗಮದ ಬಗ್ಗೆ ಕಥೆ ಅಥವಾ ಪರಿಕಲ್ಪನೆಗಳಿವೆ. "ಚಿತ್ರದೇವರು ಮತ್ತು ಕಾಟಮದೇವರ ಕಥೆಗಳು

ಸಾಮಾನ್ಯವಾಗಿ ಬುಡಕಟ್ಟಿನಲ್ಲಿರುವ ಜಗತ್ತಿನ ಉಗಮದ ಕಥೆಯನ್ನು ಹೇಳುವಂತಿವೆ"(ಕೃಷ್ಣಮೂರ್ತಿ ಹನೂರು:೧೯೯೮: ೮೪೨). ಇದು ಸತ್ಯವೂ ಹೌದು.

ಒಂದು ಸಲ ಈಶ್ವರ ಮತ್ತು ಪಾರ್ವತಿ ಆಕಾಶ ಮಾರ್ಗದಲ್ಲಿ ಪ್ರಪಂಚವನ್ನು ಸುತ್ತುತ್ತಾ ಬರುತ್ತಿದ್ದಾಗ ದಾರಿಯಲ್ಲಿ ಒಂದು ಕಾಡಿಗೆ ಬೆಂಕಿ ಬಿದ್ದಿರುವುದನ್ನು ಕಂಡರು. ಆ ಕಾಡಿನ ಪ್ರಾಣಿಗಳ ಗೋಳನ್ನು ಕೇಳಿದ ಈಶ್ವರ ಅವುಗಳನ್ನು ರಕ್ಷಿಸುವುದಕ್ಕೋಸ್ಕರ ಆ ಬೆಂಕಿಯನ್ನು ಆರಿಸಲು ಆರಂಭ ಮಾಡಿದ. ಆ ಪ್ರಯತ್ನದಲ್ಲಿ ಶಿವ ಬೆವರಿದ್ದಾಗ ಪಾರ್ವತಿ ಅವನ ಮೈಯನ್ನು ತನ್ನ ಸೀರೆಯ ಸೆರಗಿನಿಂದ ಒರಸುತ್ತಾಳೆ. ಆಗ ಈಶ್ವರನ ಬೆವರಿನ ಮೂರು ಹನಿಗಳು ನೆಲಕ್ಕೆ ಬಿದ್ದು ಅಲ್ಲಿ ಮೂವರು ಮಕ್ಕಳು ಹುಟ್ಟಿದರು. ಇವರಲ್ಲಿ ಮೊದಲನೆಯವನು ಕಾಟಯ್ಯ, ಎರಡನೆಯವನು ಚಿತ್ತಯ್ಯ, ಮೂರನೆಯವನು ಓಬಳನರಸಿಂಹ. ಈಶ್ವರನ ಮೈಬೆವರಿನಿಂದ ಈ ಮೂವರು ಮಕ್ಕಳು ಹುಟ್ಟಿದ್ದರಿಂದ ಪಾರ್ವತಿ ಈ ಮೂವರೂ ತಮ್ಮ ಮಕ್ಕಳೆಂದೇ ಭಾವಿಸಿದಳು. ಆಗ ಈಶ್ವರ ಈ ಮೂವರಿಗೂ ಜೀವನೋಪಾಯಕ್ಕೆ ವ್ಯವಸ್ಥೆ ಮಾಡಬೇಕಾಯಿತು. ಅದರಂತೆಯೇ ಈಶ್ವರ ಚಿತ್ರಗಿರಿ ಎಂಬ ಪಟ್ಟಣವನ್ನು ಕಟ್ಟಿ ಈ ಮೂವರನ್ನು ಅಲ್ಲಿ ಸುಖವಾಗಿ ಜೀವನ ಮಾಡಲು ಅವಕಾಶ ಕಲ್ಪಿಸಿದ. ಕಾಟಯ್ಯನಿಗೆ ಚಿಂತಾಮಣಿ ಎಂಬ ಪುಸ್ತಕವನ್ನು, ಒಂದು ಚಿನ್ನದ ಗಿಂಡಿಯನ್ನು, ಒಂದು ಚಿನ್ನದ ಬೆತ್ತವನ್ನು ಕೊಟ್ಟು ಈಶ್ವರ ಮತ್ತು ಪಾರ್ವತಿ ಕೈಲಾಸಕ್ಕೆ ಹೊರಟು ಹೋದರು (ಶಂಕರನಾರಾಯಣ, ತೀ ನಂ;೧೯೮೨: ೧೦೨). ಮುಂದೆ ಕಾಲ ಕಳೆದಂತೆಲ್ಲಾ ಈ ಮೂವರು ಜೀವನ ನಡೆಸುತ್ತಾ, ವಿವಿಧ ರೀತಿಯ ಹೋರಾಟಗಳನ್ನು ಮಾಡುತ್ತಾ ಬುಡಕಟ್ಟು ಸಮುದಾಯಗಳು ಅಸ್ತಿತ್ವಕ್ಕೆ ಬರಲು ಕಾರಣವಾಯಿತು ಎಂದು ನಂಬಲಾಗಿದೆ. ಮುಂದೆ ಈಶ್ವರ ಈ ಮೂವರನ್ನು ಚಿತ್ರಗಿರಿ ಎಂಬ ಪಟ್ಟಣದಲ್ಲಿ ವಾಸ ಮಾಡಲು ಅವಕಾಶ ಕಲ್ಪಿಸಿದಾಗ ಈ ಮೂವರು ಜೀವನ ನಡೆಸುತ್ತಿರುತ್ತಾರೆ. ಕಾಲಾನಂತರ "ಚಿತ್ತಯ್ಯ ಬ್ರಾಹ್ಮಣ ಹೆಣ್ಣು ಮಗಳಾದ ಗಂಗೆಮಾಳಮ್ಮಳನ್ನು ಮೋಹಿಸುತ್ತಾನೆ. ಇವರು ಮದುವೆಯಾಗುತ್ತಾರಾದರೂ, ಇದು ಗಂಗೆಮಾಳಮ್ಮನ ತಂದೆ ಹಾರುವರ ಬೊಮ್ಮಯ್ಯನಿಗೆ ಇಷ್ಟವಿರಲಿಲ್ಲ. ಇದರಿಂದಾಗಿ ಆತನು ಚಿತ್ತಯ್ಯನನ್ನು ಹಲವು ರೀತಿಯ ಪರೀಕ್ಷೆಗಳಿಗೆ ಒಡ್ಡುತ್ತಾನೆ. ಈ ಪರೀಕ್ಷೆಯಲ್ಲಿ ಚಿತ್ತಯ್ಯ ತನ್ನ ತಮ್ಮಂದಿರಾದ ಕಾಟಯ್ಯ, ಓಬಳನರಸಿಂಹರೊಂದಿಗೆ ಗೆಲ್ಲುತ್ತನಾದರೂ ಅವನ ಹೆಂಡತಿಯೊಡನೆ ಆತನ ಬದುಕು ನಡೆಯುವುದಿಲ್ಲ. ಕೊನೆಗೆ ಗಂಗೆಮಾಳಮ್ಮ ಚಿತ್ತಯ್ಯನನ್ನು ಬಿಟ್ಟು ಅರಸಿಕೆರೆ ಬಳಿಯ ಬೊಮ್ಮನಹಳ್ಳಿಗೆ ಬಂದು ನೆಲೆಸುತ್ತಾಳೆ. ಚಿತ್ತಯ್ಯ ಕಾಟಯ್ಯ ಓಬಳನರಸಿಂಹ ಕೆಲಕಾಲ ಚಿತ್ರಗಿರಿ ಪಟ್ಟಣ ಆಳಿ ಸತ್ತರು. ತದನಂತರ ಅವರನ್ನು ಕಾಡುಗೊಲ್ಲರ ದೇವತೆಗಳಾಗಿಸಿ ಪೂಜಿಸುತ್ತಾ ಬಂದರು (ಕೃಷ್ಣಮೂರ್ತಿ ಹನೂರು:೧೯೯೮: ೮೪೨-೮೪೩).

ಪಾತೇ ದೇವರೂ ಕೂಡ ಈಶ್ವರನ ಅನುಗ್ರಹದಿಂದ ಹುಟ್ಟಿದವನು ಎಂಬ ಬ್ರಹ್ಮಾಂಡದ ಪರಿಕಲ್ಪನೆಯಿದೆ. "ಪಾತೇ ದೇವರ ತಾಯಿ ದಾನಶಾಲಮ್ಮ ಉಳಿದೆಲ್ಲಾ

ಮಕ್ಕಳಿಗೂ ಒಂದು ಮೊಲೆಯಲ್ಲಿ ಹಾಲು ಕುಡಿಸಿದರೆ ಪಾತೇಲಿಂಗನಿಗೆ ಮಾತ್ರ ಒಂದು ಮೊಲೆಯಲ್ಲಿ ಹಾಲು ಕುಡಿಸುತ್ತಿದ್ದಳು. ಅಂತೆಯೇ ಪಾತೇಲಿಂಗನು ತುಂಬಾ ಪುಂಡುಕೋರನಾಗಿದ್ದ. ಪಾರ್ವತಿಯೇ ಕೊಂದು ಹೋಗಿ ಇವನನ್ನು ಸಾಕಿದರೂ ಅವಳ ಶಿಕ್ಷೆಗೂ ಬಗ್ಗದೆ ಪಾತೇಲಿಂಗ ಬೆಳೆದ. ಈಶ್ವರನನ್ನು ಗೆಲ್ಲುವಷ್ಟು ಪರಾಕ್ರಮಿಯಾಗಿ ಪಾತೇಲಿಂಗ ಬೆಳೆದ. ಇದರೊಂದಿಗೆ ಪಾತೇಲಿಂಗ ಅನೇಕ ಸಾಹಸಗಳನ್ನು ಮಾಡಿ ಈಶ್ವರನನ್ನು ಮೆಚ್ಚಿಸಿದ. ಈಶ್ವರನ ಮೂರನೆಯ ಉರಿಗಣ್ಣಿನ ಶಕ್ತಿ ದೇವರಿಗೆ ಬರುತ್ತದೆ. ಕರಡಿ ಬುಳ್ಳಪ್ಪನಿಂದಾಗಿ ಪಾತೇಲಿಂಗನು ದೇವರಾಗಿ ವೇದಾವತಿ ಮತ್ತು ಸುವರ್ಣಾವತಿ ನದಿಗಳು ಕೂಡುವ ಕೂಡಲಳ್ಳಿಯಲ್ಲಿ ಗುಬ್ಬ ಕಟ್ಟಿಸಿ ನೆಲೆಗೊಳ್ಳುತ್ತಾನೆ (ಕೃಷ್ಣಮೂರ್ತಿ ಹನೂರು:೧೯೯೮: ೮೪೩).

ಕೇತೇಲಿಂಗ ನೇರವಾಗಿ ಕೈಲಾಸದಿಂದಲೇ ಭೂಲೋಕಕ್ಕೆ ಬಂದವನು. ಜಂಗಮ ವೇಷ ಧರಿಸಿ ಭೂಲೋಕದಲ್ಲಿ ಭಿಕ್ಷೆ ಬೇಡುತ್ತಾ ತಿರುಗುತ್ತಿದ್ದ. ರೆಡ್ಡಿಗಳ ಅಹಂಕಾರವನ್ನು ತಗ್ಗಿಸುವುದರಿಂದ ಹಿಡಿದು ಕೇತೇಲಿಂಗನು ಅನೇಕ ಪವಾಡಗಳನ್ನು ಮಾಡುತ್ತಾನೆ ಎಂಬುದು ಕಾಡುಗೊಲ್ಲರ ಬ್ರಹ್ಮಾಂಡ ಕಲ್ಪನೆಯಾಗಿದೆ.



# ೪

# ಬಂಧುತ್ವ ಮತ್ತು ವಿವಾಹ

## ಕುಲ, ಬಳಿ, ಬೆಡಗು

ಕುಟುಂಬವು ಒಂದು ಸಾಮಾಜಿಕ ಸಂಸ್ಥೆಯಾಗಿದ್ದು, ಭಾರತೀಯ ಸಂದರ್ಭದಲ್ಲಿ ಮುಖ್ಯ ಸಾಮಾಜಿಕ ಘಟಕವಾಗಿದೆ. ಇಂಡಿಯಾದ್ಯಂತ ಬುಡಕಟ್ಟುಗಳು ಸಾಮಾನ್ಯವಾಗಿ ಪಿತೃ ಪ್ರಧಾನ ಕುಟುಂಬಗಳನ್ನ ಹೊಂದಿವೆ. ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳನ್ನ ಹೊರತುಪಡಿಸಿ ಮತ್ತು ಕೇರಳದ ನಾಯರ್‌ಗಳಲ್ಲಿ ಬಿಟ್ಟರೆ ಎಲ್ಲಾ ಕಡೆಗಳಲ್ಲಿ ಪಿತೃ ಪ್ರಧಾನ, ಪಿತೃವಂಶೀಯ ಮತ್ತು ಪಿತೃ ಸ್ಥಾನೀಯ ಕುಟುಂಬಗಳನ್ನ ನೋಡಬಹುದಾಗಿದೆ. ಅದರಂತೆಯೇ ದಕ್ಷಿಣ ಭಾರತದವರಾದ ಕಾಡುಗೊಲ್ಲರು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನ ಪಾಲಿಸಿಕೊಂಡು ಬಂದಿದ್ದಾರೆ. ಅಂದರೆ ಇಲ್ಲಿ ಬಂಧುತ್ವ ಮತ್ತು ಆಸ್ತಿಯ ಹಂಚಿಕೆ ಪುರುಷರ ಮೂಲಕ ಆಗುವುದು. ಜೊತೆಗೆ ಪುರುಷ ಕುಟುಂಬದ ಯಜಮಾನ ನಾಗಿರುತ್ತಾನೆ. ಕುಟುಂಬದ ಆಗು-ಹೋಗುಗಳಿಗೆಲ್ಲಾ ಇವನೇ ಜವಾಬ್ದಾರನಾಗಿರುತ್ತಾನೆ. ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯವಿರುವುದಿಲ್ಲ. ಆದರೆ ವಾಸ್ತವಿಕವಾಗಿ ಕಾಡುಗೊಲ್ಲರಲ್ಲಿ ಮಹಿಳೆಗೆ ಹೆಚ್ಚಿನ ಗೌರವವಿದೆ. ಪುರುಷನು ಮನೆಯ ಯಜಮಾನನಾದರೂ ಮನೆಯ ಜವಾಬ್ದಾರಿ ಮತ್ತು ಹೆಚ್ಚಿನ ಸ್ಥಾನಮಾನಗಳನ್ನ ಮಹಿಳೆಯರೇ ಹೊಂದಿರುತ್ತಾರೆ. ಇವರಲ್ಲಿ ಮಹಿಳೆಯವರನ್ನ ಕೀಳಾಗಿ ಕಾಣುವುದಿಲ್ಲ. ಇದು ಬುಡಕಟ್ಟು ಜನರ ಮುಖ್ಯವಾದ ಲಕ್ಷಣವಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ಇವರಲ್ಲಿ ವರದಕ್ಷಿಣೆ ಪದ್ಧತಿ ಇಲ್ಲದೇ ಇರುವುದು ಇದಕ್ಕೆ ಸಮರ್ಥನೆ ನೀಡುತ್ತದೆ. ಇಲ್ಲಿ ಶೋಷಣೆ ಇಲ್ಲವೆಂದಲ್ಲ. ಆದರೆ ಇತರೆ ಜಾತಿ-ಸಮುದಾಯಗಳಿಗೆ ಹೋಲಿಸಿದರೆ ತುಂಬಾ ಕಡಿಮೆ ಎಂದು ಹೇಳಬಹುದು.

ಕಾಡುಗೊಲ್ಲರಲ್ಲಿ ಹಿಂದೆ ಅವಿಭಕ್ತ ಕುಟುಂಬಗಳೇ ಜಾಸ್ತಿ. ಒಂದೇ ಸೂರಿನಲ್ಲಿ ಮೂರು ಅಥವಾ ನಾಲ್ಕು ತಲೆಮಾರಿನ ಜನರು ವಾಸಿಸುತ್ತಿದ್ದರು. ಇಂದಿಗೂ ರಾಜ್ಯದ ಕಾಡುಗೊಲರಲ್ಲಿ ಅವಿಭಕ್ತ ಕುಟುಂಬಗಳನ್ನ ಕಾಣಬಹುದಾಗಿದೆ. ಸಾಮಾನ್ಯವಾಗಿ ಇವರು ಕುರಿಸಾಕಣೆ, ಪಶುಪಾಲನೆ, ಮತ್ತು ಕೃಷಿಯನ್ನ ತಮ್ಮ ಕಸುಬುಗಳನ್ನಾಗಿ ಮಾಡಿಕೊಂಡಿರುವುದರಿಂದ ಇವುಗಳನ್ನ ಮುಂದುವರಿಸಲು ಹೆಚ್ಚಿಗೆ ಜನರ ಅವಶ್ಯಕತೆ ಇರುವುದರಿಂದಾಗಿ ಅವಿಭಕ್ತ ಕುಟುಂಬ ಪದ್ಧತಿ ಇಂದಿಗೂ ಉಳಿದುಕೊಂಡು ಬಂದಿದೆ.

ಜೊತೆಗೆ ಇವರಿಗೆ ಸಂಬಂಧಗಳಲ್ಲಿ ತುಂಬಾ ನಂಬಿಕೆ ಮತ್ತು ಭಾವನಾತ್ಮಕ ಗೌರವ ವಿರುವುದರಿಂದ ಇವರು ಒಟ್ಟಿಗೆ ಬದುಕಲು ಇಷ್ಟಪಡುತ್ತಾರೆ. ಇತ್ತೀಚೆಗೆ ವಿದ್ಯಾವಂತರು ನೌಕರಿಯಲ್ಲಿರುವವರು ನಗರಗಳಿಗೆ ವಲಸೆ ಹೋಗುವುದರಿಂದ ಅನಿವಾರ್ಯವಾಗಿ ವಿಭಕ್ತ ಕುಟುಂಬಗಳು ನಿರ್ಮಾಣವಾಗುತ್ತಿವೆ.ಇಂತಹ ಕುಟುಂಬಗಳಲ್ಲಿ ಗಂಡ-ಹೆಂಡತಿ, ಮದುವೆಯಾಗದ ಮಕ್ಕಳಿರುತ್ತಾರೆ. ಅಂದರೆ ಒಂದೇ ಪೀಳಿಗೆಯ ಜನರಿರುತ್ತಾರೆ. ಇತ್ತೀಚಿಗಿನ ದಿನಗಳಲ್ಲಿ ಆಧುನೀಕರಣ, ಶಿಕ್ಷಣ, ಸಾಂಪ್ರದಾಯಿಕ ಕಸುಬುಗಳ ನಾಶ, ನಗರೀಕರಣದಿಂದಾಗಿ ಇವರಲ್ಲಿ ವಿಭಕ್ತ ಕುಟುಂಬಗಳು ಹೆಚ್ಚುತ್ತಿವೆ. ಗ್ರಾಮೀಣ ಭಾಗದಲ್ಲಿಯೂ ಸಹ ವಿಭಕ್ತ ಕುಟುಂಬಗಳು ಹೆಚ್ಚಾಗುತ್ತಿದ್ದು, ಅವಿಭಕ್ತ ಕುಟುಂಬಗಳು ಕಡಿಮೆಯಾಗುತ್ತಿವೆ.

ಕಾಡುಗೊಲ್ಲರು ತಮ್ಮ ಬಂಧು-ಬಳಗದವರನ್ನ ಸಂಬಂಧಿಕ ಮತ್ತು ನೆಂಟರು (ಬೀಗರು) ಎಂದು ಎರಡು ವಿಧವಾಗಿ ವರ್ಗೀಕರಿಸುತ್ತಾರೆ. ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಎಲ್ಲಾ ಪುರುಷರನ್ನ ದಾಯಾದಿಗಳೆಂದೂ ಅಥವಾ ಅಣ್ಣ-ತಮ್ಮಂದಿರೆಂದೂ, ಇತರರನ್ನ ಬೀಗರೆಂದೂ ಕರೆಯಲಾಗುತ್ತದೆ. ಕುಲ ಹಾಗೂ ವಂಶದವರೆಲ್ಲಾ ದಾಯಾದಿಗಳಾದರೆ ಮದುವೆ ಮುಖಾಂತರ ಸಂಬಂಧ ಬೆಳೆಸಿದವರು ನೆಂಟರೆನಿಸಿಕೊಳ್ಳುತ್ತಾರೆ. ದಾಯಾದಿಗಳು ಸಮೀಪ ಅಂದರೆ ಒಂದೇ ವಠಾರಗಳಲ್ಲಿ ವಾಸಿಸುತ್ತಾ, ಮನೆ, ಜಮೀನು ಹಂಚಿಕೊಳ್ಳುವುದಲ್ಲದೆ ಹಬ್ಬ-ಹರಿದಿನ, ಮದುವೆ, ಮರಣ ಮುಂತಾದ ವಿಧಿಕ್ರಿಯೆಗಳಲ್ಲಿ ಸಾಮಾನ್ಯವಾಗಿ ಸಾಮೂಹಿಕವಾಗಿ ಪಾಲ್ಗೊಳುತ್ತಾರೆ. ಹಾಗೆಯೇ ಅವರು ನೆರೆಹೊರೆಯವರಾಗಿ ವಾಸಿಸುತ್ತಿರುವುದರಿಂದ, ಬೆಂಕಿ ಅಪಘಾತ, ಮುಂತಾದ ಕಷ್ಟಗಳು ಬಂದಾಗ ಬಂಧು ಬಳಗದವರ ನೆರವಿಗೆ ಧಾವಿಸುತ್ತಾರೆ.

ಧರ್ಮಾಚರಣೆಯ ವಿಷಯವಾಗಿ ಹೇಳುವುದಾದರೆ ದಾಯಾದಿಗಳು ಒಂದೇ ಕುಲ ಹಾಗೂ ವಂಶಕ್ಕೆ ಸೇರಿರುವುದರಿಂದ ಬುಡಕಟ್ಟು ದೇವರುಗಳನ್ನ ಹಾಗೂ ಜಾತ್ರೆ-ಹಬ್ಬಗಳನ್ನ ಒಟ್ಟಿಗೆ ಸೇರಿ ಆಚರಿಸುತ್ತಾರೆ. ಇಂತಹ ಜಾತ್ರೆ, ಹಬ್ಬ ಮತ್ತು ಮದುವೆಗಳಲ್ಲಿ ಇವರ ಸಂಬಂಧ ಅಂದರೆ ಬಂಧುತ್ವದ ಸಂಬಂಧ ಮಹತ್ವದ ಪಾತ್ರ ವಹಿಸುತ್ತದೆ. ಅಂದರೆ ಒಂದು ಊರಿನಲ್ಲಿ ಒಂದು ವಂಶ ಅಥವಾ ಕುಲಕ್ಕೆ ಸಂಬಂಧಿಸಿದ ವ್ಯಕ್ತಿಗಳಿದ್ದರೆ ಇನ್ನೊಂದು ಹಟ್ಟಿ ಅಥವಾ ಪ್ರದೇಶದಲ್ಲಿ ಅದೇ ಕುಲ ಅಥವಾ ವಂಶಕ್ಕೆ ಸೇರಿದ ವ್ಯಕ್ತಿಗಳಿರುತ್ತಾರೆ. ಮದುವೆ ಸಂದರ್ಭದಲ್ಲಿ ಇಂತಹ ವ್ಯಕ್ತಿಗಳು ಒಂದೆಡೆ ಸೇರಿದರೆ ಅವರು ಬೇರೆ ಊರು ಅಥವಾ ಹಟ್ಟಿಯವರಾದರೂ, ಕುಲಸಂಬಂಧಿ ದೃಷ್ಟಿಯಲ್ಲಿ ಆತ್ಮೀಯರಾಗಿ ಮಾತನಾಡುತ್ತಾರೆ. ಕೆಲವೊಮ್ಮೆ ಒಂದೇ ಕುಲದ ಜನರು ಇನ್ನೊಂದು ಕುಲದ ಜನರನ್ನ ವಿನೋದ (ತಮಾಷೆ) ಮಾಡುವುದು, ಛೇಡಿಸುವುದು, ತಮಾಷೆಗಾಗಿ ಪೀಡಿಸುವುದು, ನಮ್ಮ ಕುಲ ಉತ್ತಮವಾದುದು ನಿಮ್ಮ ಕುಲ ಕೆಟ್ಟದ್ದು ಹೀಗೆ ವಿನೋದಕ್ಕಾಗಿ ಮಾತನಾಡುತ್ತಾರೆ. ಉದಾಹರಣೆಗೆ ರಾಜ್ಯದ ಕಾಡುಗೊಲ್ಲ

ಬುಡಕಟ್ಟಿನಲ್ಲಿ ಕರಡಿಗೊಲ್ಲ ವಂಶಸ್ಥರು ಅಥವಾ ಕುಲದವರು ಅದೇ ಬುಡಕಟ್ಟಿನ ಇನ್ನೊಂದು ಕುಲವನ್ನ, ಅಂದರೆ ಕಂಬೇರಗೊಲ್ಲ ವಂಶಸ್ಥರನ್ನ ತಮಾಷೆ ಮಾಡುವುದುಂಟು. ಇಲ್ಲವೇ ತಮ್ಮ ಕುಲವೇ ಶ್ರೇಷ್ಠ ನಿಮ್ಮ ಕುಲವೇ ಕಡಿಮೆ ಮಟ್ಟದ್ದು ಎಂದು ಛೇಡಿಸುತ್ತಾರೆ. ಈ ಶ್ರೇಷ್ಠ ಮತ್ತು ಕನಿಷ್ಠ ಕುಲ ಭಾವನೆಗಳಿಗೆ ಸಮುದಾಯದ ಐತಿಹಾಸಿಕ-ಐತಿಹ್ಯಗಳು ಮತ್ತು ಪುರಾಣಗಳು ಆಧಾರವಾಗಿವೆ. ಅಂದರೆ ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪ ದನಗಾಹಿಯಾಗಿರುತ್ತಾನೆ. ಅಂತಹ ಸಂದರ್ಭದಲ್ಲಿ ಕಂಬೇರ ಗೊಲ್ಲರ ನಾಗಪ್ಪ ಜುಂಜಪ್ಪನಿಗೆ ಊಟದಲ್ಲಿ ವಿಷ ಬೆರೆಸಿದ ಒಂದು ಪ್ರಸಂಗ ಬರುತ್ತದೆ. ಆ ಪ್ರಸಂಗದಲ್ಲಿ ಕರಡಿಗೊಲ್ಲರು ಜುಂಜಪ್ಪನಿಗೆ ಹೀಗೆ ಹೇಳುತ್ತಾರೆ. "ಕಂಬೇರ ಕರಿನಾಗ ಇಕ್ಕವ್ನೆ ಉರಿಮದ್ದ ಜುಂಜಪ್ಪ ಉಣಬೇಡ ಕಣೋ". ಅಂದರೆ ಕಂಬೇರ ನಾಗಪ್ಪ ಊಟದಲ್ಲಿ ನಿನಗೆ ವಿಷ ಹಾಕಿದ್ದಾನೆ ನೀನು ಉಣ್ಣಬೇಡ ಎಂದು ಜುಂಜಪ್ಪನಿಗೆ ಹೇಳುತ್ತಾರೆ. ಇಂದಿಗೂ ಕರಡಿಗೊಲ್ಲರು ಕಂಬೇರಗೊಲ್ಲರನ್ನ ನೀವು ನಮ್ಮ ಜುಂಜಪ್ಪನಿಗೆ ಮದ್ದು ಅಥವಾ ವಿಷ ಹಾಕಿದ ಜನರು ಎಂದು ತಮಾಷೆಯಾಗಿ ಹಬ್ಬ-ಹರಿದಿನಗಳಲ್ಲಿ ಮದುವೆ-ಸಮಾರಂಭಗಳಲ್ಲಿ ಛೇಡಿಸುತ್ತಾರೆ.

ಇನ್ನು ಇವರ ಬಂಧುತ್ವ ಸಂಘಟನೆ ಹೇಗಿದೆ ಎಂದರೆ ಒಂದು ಹಟ್ಟಿಯ ಒಂದು ಕುಲಕ್ಕೆ ಸೇರಿದ ಒಬ್ಬ ಹೆಣ್ಣುಮಗಳು ಬೇರೆಲ್ಲೋ ದೂರದ ಹಟ್ಟಿಯ ಅದೇ ಕುಲಕ್ಕೆ ಸೇರಿದ ಹುಡುಗನಿಗೆ ತಂಗಿಯಾಗಬೇಕು. ಅಂದರೆ ಕರಡಿಗೊಲ್ಲರ ಹೆಣ್ಣುಮಗಳು ಬಹುದೂರ ನೂರಾರು ಮೈಲಿ ದೂರವಿರುವ ಅದೇ ಕರಡಿಗೊಲರ್ಲ ಹುಡುಗನಿಗೆ ತಂಗಿ ಇಲ್ಲವೇ ಅಕ್ಕ ಆಗಬೇಕು. ತಲೆಮಾರುಗಳಿಂದಲೂ ಈ ಬಂಧುತ್ವದ ನಿಯಮವನ್ನ ಕಾಪಾಡಿಕೊಂಡು ಬಂದಿದ್ದಾರೆ. ಹಾಗೆ ಇತರೆ ಕುಲದ ಅಂದರೆ ಅಜ್ಜಿಯವರ ಕುಲದ ಹೆಣ್ಣುಮಗಳಿಗೆ ಕರಡಿಗೊಲ್ಲ ಗಂಡುಮಕ್ಕಳನ್ನ ಹೊರತು ಪಡಿಸಿದರೆ ಮಿಕ್ಕೆಲ್ಲಾ ಕುಲದ ಗಂಡುಮಕ್ಕಳು ಅಣ್ಣ ತಮ್ಮಂದಿರಾಗಬೇಕು. ಬಂಧುತ್ವ ಸಂಬಂಧಿತ ನಿಯಮಗಳನ್ನ ವಿವಾಹ ಸಂಬಂಧಗಳನ್ನ ಬೆಳೆಸುವಾಗ ಕಟ್ಟು-ನಿಟ್ಟಾಗಿ ಪಾಲಿಸುತ್ತಾರೆ. ಎಷ್ಟೇ ವಿದ್ಯಾವಂತರಿರಲಿ, ನೌಕರಿಯಲ್ಲಿರಲಿ, ನಗರವಾಸಿಯಿರಲಿ ಈ ಬಂಧುತ್ವ ಸಂಬಂಧಿತ ನಿಯಮಗಳನ್ನ ಪಾಲಿಸಲೇಬೇಕಾಗುತ್ತದೆ. ಇದನ್ನ ಪಾಲಿಸುವುದರಿಂದಲೇ ಇವರಲ್ಲಿ ವರದಕ್ಷಿಣೆ ಪದ್ಧತಿ ಕಡಿಮೆ ಎಂದು ಹೇಳಬೇಕು. ಎಷ್ಟೋ ಸಂದರ್ಭಗಳಲ್ಲಿ ಈ ನಿಯಮಗಳನ್ನ ಗೊತ್ತಿಲ್ಲದೆಯೇ ಅಥವಾ ಪ್ರೇಮಿಸಿ ಮದುವೆಯಾಗಿ ನಿಯಮಗಳನ್ನ ಮುರಿದರೆ ಅವರನ್ನ ಸಮುದಾಯದಿಂದ ಮತ್ತು ಊರಿನಿಂದ ಬಹಿಷ್ಕರಿಸಲಾಗುತ್ತದೆ. ಇನ್ನೂ ಆಶ್ಚರ್ಯಕರ ಸಂಗತಿಯೆಂದರೆ ಕೆಲವು ಬಾರಿ ಕಾಡುಗೊಲ್ಲರ ಹುಡುಗನು ಬೇರೆ ಜಾತಿಯ ಹುಡುಗಿಯನ್ನ ಪ್ರೇಮಿಸಿ ಅಂತರ್ಜಾತಿ ವಿವಾಹ ಮಾಡಿಕೊಂಡರೆ ವಿದ್ಯಾವಂತ ತಂದೆ-ತಾಯಿಗಳು ಕೆಲ ಕಾಲದ ನಂತರ ಸಮ್ಮತಿ ಸೂಚಿಸಿ ಅವರನ್ನ ಮನೆಗೆ ಕರೆದುಕೊಳ್ಳುತ್ತಾರೆ. ಆದರೆ, ಅದೇ ಕುಲ ಅಥವಾ ಬೆಡಗಿನ ಹುಡುಗ-ಹುಡುಗಿಯರ ಮಧ್ಯೆ ವಿವಾಹವಾಗುವುದು ಮಹಾಪರಾಧ, ಅಣ್ಣ-ತಂಗಿಯರ ನಡುವಿನ

ಮದುವೆ ಎಂದು ಭಾವಿಸಿ ಅವರನ್ನ ಕುಲದಿಂದ ಉಚ್ಚಾಟಿಸಲಾಗುತ್ತದೆ. ಅಂದರೆ ಕುಲ ಸಂಬಂಧಿಗಳಲ್ಲಿ ಮದುವೆ ನಿಷಿದ್ಧ ಎಂದು ಅರ್ಥೈಯಿಸಲಾಗುತ್ತದೆ. ಕಾಡುಗೊಲ್ಲ ಸಮುದಾಯದಲ್ಲಿರುವ ಬಂಧುತ್ವಕ್ಕೆ ಸಂಬಂಧಿಸಿದ ನಿಯಮಗಳು ಬೇರೆಯವರಿಗೆ ಆಶ್ಚರ್ಯ ಎಂದು ಕಂಡರೂ ಸತ್ಯವಾಗಿವೆ. ಬುಡಕಟ್ಟುಗಳಲ್ಲಿ ಈ ರೀತಿಯ ಬಂಧುತ್ವದ ನಿಯಮಗಳು ಸಾಮಾನ್ಯವಾಗಿರುವವು. ಬದಲಾಗುತ್ತಿರುವ ಇಂತಹ ದಿನಗಳಲ್ಲಿಯೂ ಕಾಡುಗೊಲ್ಲರು ಈ ನಿಷಿದ್ಧಗಳನ್ನು ಉಳಿಸಿಕೊಂಡು ಬರುತ್ತಿರುವುದು ಅವರ ಸಂಸ್ಕೃತಿಯ ಹೆಮ್ಮೆಯ ವಿಷಯವಾಗಿದೆ.

**ಬಂಧುತ್ವ ಪದದ ಬಳಕೆ**

ಸಾಮಾನ್ಯವಾಗಿ ಕಾಡುಗೊಲ್ಲರು ತಂದೆ-ತಾಯಿಯವರನ್ನ, ಅಪ್ಪ-ಅಮ್ಮ, ಅಪ್ಪ-ಅವ್ವ, ಅಯ್ಯಾ-ಅಮ್ಮ, ಅಯ್ಯಾ-ಅವ್ವ, ಕೆಲವು ಸಾರಿ ತಂದೆಯನ್ನ ಅಣ್ಣ ಎಂದೂ ತಾಯಿಯನ್ನ ಅಕ್ಕ ಎಂದು ಸಂಬೋಧಿಸುತ್ತಾರೆ. ತಂದೆಯ ಅಣ್ಣ ಮತ್ತು ತಮ್ಮಂದಿರನ್ನ ದೊಡ್ಡಪ್ಪ ಮತ್ತು ಚಿಕ್ಕಪ್ಪ ಎಂದು ಕರೆಯುತ್ತಾರೆ. ಅದೇ ರೀತಿ ತಾಯಿಯ ಅಕ್ಕ ಮತ್ತು ತಂಗಿಯರನ್ನ ದೊಡ್ಡಮ್ಮ-ಚಿಕ್ಕಮ್ಮ ಎಂದು ಕರೆಯುತ್ತಾರೆ. ವ್ಯಕ್ತಿಯು ತನ್ನ ತಂದೆಯ ಅಕ್ಕ ಅಥವಾ ತಂಗಿ ಮಗಳನ್ನ ಸೋದರತ್ತೆಯ ಮಗಳು ಎಂದು ಸಂಬೋಧಿಸುತ್ತಾನೆ. ಅದೇ ರೀತಿ ಸ್ತ್ರೀಯು ತನ್ನ ತಾಯಿಯ ಅಣ್ಣನ ಅಥವಾ ತಮ್ಮನ ಮಗನನ್ನ ಸೋದರ ಮಾವ ಎಂದು ಕರೆಯುವ ವಾಡಿಕೆಯುಂಟು. ಸಾಮಾನ್ಯವಾಗಿ ವ್ಯಕ್ತಿಯ ಅಣ್ಣನ ಗಂಡು ಮಕ್ಕಳು ಸಹೋದರರಾಗುತ್ತಾರೆ. ಮಹಿಳೆಯ ಅಕ್ಕ ಅಥವಾ ತಂಗಿಯ ಮಕ್ಕಳು ಸಹೋದರಿಯರಾಗುತ್ತಾರೆ. ಇವರ ನಡುವೆ ಮದುವೆ ಸಂಬಂಧಗಳು ನಿಷಿದ್ಧ. ಆದರೆ ಒಬ್ಬ ವ್ಯಕ್ತಿಯು ತನ್ನ ಅಕ್ಕನ ಮಗಳನ್ನು ಇಲ್ಲವೇ ತನ್ನ ತಂದೆಯ ಅಕ್ಕನ ಅಥವಾ ತಂಗಿಯ ಮಗಳನ್ನ ಮದುವೆಯಾಗಬಹುದು. ಅದೇ ರೀತಿ ಸ್ತ್ರೀಯು ತನ್ನ ತಾಯಿಯ ಅಣ್ಣನ ಮಗನನ್ನ ಇಲ್ಲವೇ ತಮ್ಮನ ಮಗನನ್ನ ಮದುವೆಯಾಗಬಹುದು. ಕಾಡುಗೊಲ್ಲರು ಸಾಮಾನ್ಯವಾಗಿ ಹೆಚ್ಚಿಗೆ ತನ್ನ ಸೋದರತ್ತೆಯ ಮಗಳನ್ನೇ ಅಥವಾ ಮಗನನ್ನೇ ಇಲ್ಲವೇ ಪುರುಷರಾದರೆ ಅಕ್ಕನ ಮಕ್ಕಳನ್ನೇ ವಿವಾಹವಾಗುತ್ತಾರೆ. ಬಹುಶಃ ಆಸ್ತಿ ಪಾಲಾಗುವುದನ್ನ ತಡೆಯಲು, ರಕ್ತ ಪರಿಶುದ್ಧತೆಯನ್ನ ಕಾಪಾಡಲು ಮತ್ತು ಭದ್ರತೆಯ ದೃಷ್ಟಿಯಿಂದಲೂ ಈ ಸಂಪ್ರದಾಯವನ್ನ ಮುಂದುವರಿಸಿಕೊಂಡು ಬರುತ್ತಿರಬಹುದು.

ಕಾಡುಗೊಲ್ಲರಲ್ಲಿ ಈಗಾಗಲೇ ಹೇಳಿದ ಹಾಗೆ ಮುಖ್ಯವಾಗಿ ಚಿತ್ತಮುತ್ತಿ ಮತ್ತು ಚಂದಮುತ್ತಿ ಎಂಬ ಮುಖ್ಯ ಕುಲ / ಬಳಿ / ಪಂಗಡಗಳಿದ್ದು, ಇವುಗಳಲ್ಲಿ ಮತ್ತೆ ಉಪಪಂಗಡಗಳು ಕಂಡು ಬರುತ್ತವೆ. ಉದಾಹರಣೆಗೆ ಚಿತ್ತಮುತ್ತಿ ಕುಲದಲ್ಲಿ ಕರಡಿ ಗೊಲ್ಲರು ಮುಖ್ಯವಾದ ಗುಂಪಾದರೆ, ಚಂದಮುತ್ತಿ ಕುಲದಲ್ಲಿ, ಅಜ್ಜೋರು, ಕಹಳೆಯವರು, ಸೋಮನವರು, ಕಂಬೀರು ಮುಂತಾದ ಹತ್ತು ಹಲವಾರು ಗುಂಪುಗಳಿವೆ. ಮುಖ್ಯವಾಗಿ ಚಿತ್ತಮುತ್ತಿ ಮತ್ತು ಚಂದಮುತ್ತಿ ಕುಲಗಳಲ್ಲಿ ಬರುವ ಉಪಪಂಗಡದವರ

ನಡುವೆ ವಿವಾಹ ಸಂದರ್ಭ ಸಾಧ್ಯವಿದೆ ಅಥವಾ ವಿವಾಹ ಸಂಬಂಧವನ್ನು ಬೆಳೆಸಬಹುದು. ಆದರೆ ಅದೇ ಕುಲಬೆಡಿಯಲ್ಲಿ ಬರುವ ಉಪಪಂಗಡಗಳ ಮಧ್ಯೆ ವಿವಾಹ ನಿಷಿದ್ಧ. ಅಂದರೆ ಚಂದಮುತ್ತಿ ಕುಲದಡಿಯಲ್ಲಿ ಬರುವ ಹತ್ತಾರು ಪಂಗಡಗಳ ನಡುವೆ ವಿವಾಹ ಸಂಬಂಧ ನಿಷಿದ್ಧ. ಆದರೆ ಆ ಹತ್ತಾರು ಉಪಪಂಗಡದವರು ಚಿತ್ತಮುತ್ತಿ ಕುಲದಲ್ಲಿ ಬರುವ ಕರಡಿಗೊಲ್ಲರೊಂದಿಗೆ ವಿವಾಹ ಸಂಬಂಧ ಏರ್ಪಾಡಿಸಬಹುದು. ಆದರೆ ಕರಡಿಗೊಲ್ಲರು ಚಂದಮುತ್ತಿ ಕುಲದಲ್ಲಿ ಬರುವ ಯಾವುದೇ ಪಂಗಡದೊಂದಿಗೆ ಮದುವೆ ಸಂಬಂಧವನ್ನು ಏರ್ಪಾಡಿಸಬಹುದಾಗಿದೆ.

### ಸಂಗಾತಿಯ ಆಯ್ಕೆ, ತೆರ, ಮದುವೆ

ಕಾಡುಗೊಲ್ಲ ಸಮುದಾಯದಲ್ಲಿ ಸ್ತ್ರೀಗೆ ಅಂದರೆ ಹೆಣ್ಣಿಗೆ ಮಹತ್ವದ ಸ್ಥಾನಮಾನವಿದೆ. ಬುಡಕಟ್ಟಿನ ಸಮುದಾಯವಾದ್ದರಿಂದ ಇಲ್ಲಿ ಸ್ತ್ರೀಯು ಇತರೆ ಸಮುದಾಯದವರಂತೆ ಹೆಚ್ಚಿಗೆ ತಾರತಮ್ಯಕ್ಕೆ ಒಳಪಟ್ಟಿಲ್ಲ ಎಂದು ಹೇಳಬಹುದು. ಆದರೆ ಹೆರಿಗೆ, ಋತುಮತಿ, ಮುಂತಾದ ಜೀವನ ಕ್ರಿಯೆಗಳ ಸಂದರ್ಭದಲ್ಲಿ ಕಾಡುಗೊಲ್ಲ ಬುಡಕಟ್ಟು ಸಮುದಾಯದವರು ಕೆಲವು ನಿಷೇಧಗಳನ್ನು ಹೇರುವುದರಿಂದ ಸ್ತ್ರೀಯರು ಹಲವಾರು ಸಾಮಾಜಿಕ ನ್ಯೂನತೆಗಳಿಂದ ಬಳಲುತ್ತಿದ್ದಾರೆ. ಭಾರತದ ಬಹುತೇಕ ಬುಡಕಟ್ಟುಗಳಲ್ಲಿರುವಂತೆ ಕರ್ನಾಟಕದ ಕಾಡುಗೊಲ್ಲ ಬುಡಕಟ್ಟಿನಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಹೆಣ್ಣಿಗೆ ಮಹತ್ವದ ಪ್ರಾಶಸ್ತ್ಯವಿದೆ. ಈ ಸಮುದಾಯದಲ್ಲಿ ವಧುವಿಗೆ ತುಂಬಾ ಬೇಡಿಕೆಯಿದ್ದು, ಕೆಲವು ಸಂದರ್ಭಗಳಲ್ಲಿ ಗಂಡಸರಲ್ಲಿ ವಧುವಿಗೋಸ್ಕರ ಸ್ಪರ್ಧೆಯೇ ನಡೆಯುತ್ತದೆ. ಇವರಲ್ಲಿ ಏಕಪತ್ನಿತ್ವ ವಿವಾಹ ಪದ್ಧತಿ ಅನುಸರಣೆಯಲ್ಲಿದ್ದು, ಕೆಲವರು ಬಹುಪತ್ನಿತ್ವ ಪದ್ಧತಿಯನ್ನು ಪಾಲಿಸುತ್ತಿದ್ದರು. ಆದರೆ ಇವರಲ್ಲಿ ಬಹುಪತಿತ್ವ ಪದ್ಧತಿ ಜಾರಿಯಲ್ಲಿಲ್ಲ. ಇವರು ಪಾಲಿಸುವುದೂ ಇಲ್ಲ. ಸಂಗಾತಿ ಆಯ್ಕೆಗೆ ಸಂಬಂಧಿಸಿದಂತೆ ಹೆಣ್ಣಿಗೆ ಹೆಚ್ಚಿನ ಆಯ್ಕೆಗಳು ಇರುವುದಿಲ್ಲ.

ಆಸ್ತಿ, ಮದುವೆ, ಸಂಸ್ಕಾರ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಹೆಣ್ಣಿಗೆ ಮಹತ್ವದ ಸ್ಥಾನವಿದೆ. ಈಗಾಗಲೇ ಹೇಳಿದ ಹಾಗೆ ಮದುವೆಗೆ ಸಂಬಂಧಿಸಿದಂತೆ ಹೆಣ್ಣಿಗೆ ಮದುವೆಯ ಸಂದರ್ಭದಲ್ಲಿ ನಡೆಯುವ ಶಾಸ್ತ್ರೋಕ್ತಗಳಲ್ಲಿ ಬಹಳ ಪ್ರಾಮುಖ್ಯತೆ ಕೊಡಲಾಗುತ್ತದೆ. ಕಾಡುಗೊಲ್ಲರ ಮದುವೆಗಳಲ್ಲಿ ಹೆಣ್ಣೇ ಕೇಂದ್ರ ಬಿಂದು. ಯಾಕೆಂದರೆ ಹೆಣ್ಣನ್ನು ಪಡೆಯಬೇಕಾದರೆ ವರನು ನಾನಾ ರೀತಿಯ ಹರಸಾಹಸ ಮಾಡಬೇಕಾಗುತ್ತದೆ. ಭಾವೀ ಮಾವಂದಿರ ಮನೆಯಲ್ಲಿ ಕೆಲಸ ಮಾಡಿ, ಅಂದರೆ ಸೌದೆ ಒಡೆಯುವುದೂ ಸೇರಿದಂತೆ ಎಲ್ಲಾ ರೀತಿಯ ಕೆಲಸ ಮಾಡಬೇಕಾಗುತ್ತದೆ. ಒಂದು ಹೆಣ್ಣನ್ನು ಪಡೆಯಬೇಕಾದರೆ "ಹತ್ತಾರು ಜೊತೆ ಚಪ್ಪಲಿಗಳು" ಸವೆಯುತ್ತಿದ್ದವು ಎಂದು ಹಿರಿಯರು ತಮ್ಮ ಅನುಭವ ಹೇಳುತ್ತಾರೆ. ಅಂದರೆ ಬುಡಕಟ್ಟುಗಳಲ್ಲಿ ಮದುವೆಯೂ ಸೇರಿದಂತೆ ಸ್ತ್ರೀಗೆ ಕೌಟುಂಬಿಕ ಮತ್ತು ಸಾಮಾಜಿಕ ಸ್ಥಾನಮಾನ ದೊರೆಯುತ್ತಿತ್ತು.

**ತೆರ :** 'ತೆರ' ಎಂಬ ಕಲ್ಪನೆಯು ಕಾಡುಗೊಲ್ಲರ ಮದುವೆಗಳಲ್ಲಿ ಅನುಸರಿಸುವ

ಒಂದು ಮುಖ್ಯವಾದ ಪದ್ಧತಿ. 'ತೆರ' ಎಂದರೆ ಮದುವೆಯ ಸಂದರ್ಭದಲ್ಲಿ ವರನ ಕಡೆಯವರು ವಧುವಿಗೆ ಅಂದರೆ ಹೆಣ್ಣಿನ ಕಡೆಯವರಿಗೆ ಕೊಡುವ ವಧುದಕ್ಷಿಣೆಯೇ ಆಗಿರುತ್ತದೆ. ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಕೊಡುವ ತೆರವು ೧೨ ರೂಪಾಯಿಗಳಾಗಿರುತ್ತವೆ. ಇದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿರಬಹುದು. ತೆರದ ರೂಪದಲ್ಲಿ ಕೊಡುವ ವಧುದಕ್ಷಿಣೆಯು ಮದುವೆ ಸಂಬಂಧವನ್ನು ಬೆಸೆಯುವಲ್ಲಿ ಮತ್ತು ಏರ್ಪಡಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಇದು ಹೆಣ್ಣಿನ ಸ್ಥಾನಮಾನ ಮತ್ತು ಹೆಣ್ಣು ಹೆತ್ತವರ ಅಂತಸ್ತಿನ ಪ್ರತೀಕವಾಗಿತ್ತು. ಕಾಡುಗೊಲ್ಲರಲ್ಲಿ ಹೆಣ್ಣು ಹೆತ್ತರೆ ಮನೆಗೆ ಗೌರವ ತರುವ ವಿಷಯ ಮತ್ತು ತಂದೆ-ತಾಯಿಗಳಿಗೆ ಅಂತಸ್ತಿನ ವಿಷಯವಾಗಿರುತ್ತಿತ್ತು. ಹೆಣ್ಣು ಕೊಡುವ ತಾಯಿ ತಂದೆಯವರು ಯಾವುದೇ ಕೀಳರಿಮೆಯಿಲ್ಲದೆ ಹೆಣ್ಣಿನ ತಂದೆ ತಾಯಂದಿರು ಎಂದು ಗುರುತಿಸಿಕೊಂಡು ಕನ್ಯಾದಾನ ಮಾಡುತ್ತಿದ್ದರು. ಹೆಣ್ಣಿನ ತಂದೆ-ತಾಯಂದಿರಿಗೆ ಮದುವೆಯು ಒಂದು ರೀತಿಯ ಬೇಡಿಕೆಯ ವಿಷಯವಾಗಿರುತ್ತಿತ್ತು. ಇದಕ್ಕೆಲ್ಲಾ ಮುಖ್ಯ ಕಾರಣಗಳೆಂದು ಬುಡಕಟ್ಟುಗಳಾದ ಕಾಡುಗೊಲ್ಲರಲ್ಲಿ ಹೆಣ್ಣು ಮಕ್ಕಳಿಗಿದ್ದ ಸ್ಥಾನಮಾನ ಮತ್ತು ಹೆಣ್ಣುಗಳ ಸಂಖ್ಯೆ ಕಡಿಮೆ ಹಾಗೂ ಬೆಡಗುಗಳಲ್ಲಿಯ ವಿವಾಹಕ್ಕೆ ಸಂಬಂಧಿಸಿದಂತೆ ನಿಷೇಧ. ಬಡವರಿರಲಿ ಅಥವಾ ಶ್ರೀಮಂತರಿರಲಿ ತೆರ ಅಥವಾ ತೆರದ ಹಣ ಕೊಡುವುದು ಒಂದು ಮುಖ್ಯ ಸಂಪ್ರದಾಯವಾಗಿತ್ತು. ತೆರ ಕೊಡದಿದ್ದರೆ ದೊಡ್ಡ ಜಗಳವೇ ಆಗುತ್ತಿತ್ತು. ಎಷ್ಟೋ ಸಂದರ್ಭಗಳಲ್ಲಿ 'ತೆರ' ವಿಷಯಕ್ಕೆ ಸಂಬಂಧಿಸಿದಂತೆ ವಧು ಮತ್ತು ವರನ ಕಡೆಯವರಿಗೆ ಜಗಳವಾಗಿ ಮದುವೆ ಸಂಬಂಧಗಳು ಮುರಿದು ಬೀಳುತ್ತಿದ್ದವು. ಇದು ಕಾಡುಗೊಲ್ಲರಲ್ಲಿನ ಸಂಪ್ರದಾಯವನ್ನು ಎತ್ತಿ ತೋರಿಸುತ್ತದೆ. ಆದರೆ ದಿನ ಕಳೆದಂತೆಲ್ಲಾ ಅಥವಾ ಬದಲಾದ ಸನ್ನಿವೇಶದಲ್ಲಿ 'ತೆರ' ಎಂಬ ಕಲ್ಪನೆಯು ನಿಧಾನವಾಗಿ ಕಡಿಮೆಯಾಗತೊಡಗಿದೆ. ಕೇವಲ ಗ್ರಾಮೀಣ ಮತ್ತು ಆರ್ಥಿಕವಾಗಿ ಹಿಂದುಳಿದ ಕುಟುಂಬಗಳು ಸ್ವಲ್ಪ ಮಟ್ಟಿನ ಈ ಆಚರಣೆಯನ್ನು ಪಾಲಿಸಿಕೊಂಡು ಬಂದಿವೆ. ಇಂದು ತೆರಕ್ಕೆ ಬದಲಾಗಿ ವರದಕ್ಷಿಣೆ ಪದ್ಧತಿ ನಿಧಾನವಾಗಿ ಕಾಡುಗೊಲ್ಲರಲ್ಲಿ ಕಂಡು ಬರುತ್ತಿದೆ. ವರದಕ್ಷಿಣೆಯನ್ನು ಕೊಡಲು ಸಿದ್ಧರಾಗಿದ್ದಾರೆ. ತೆಗೆದುಕೊಳ್ಳುವವರು ತೆಗೆದು ಕೊಳ್ಳಲು ಇಷ್ಟಪಡುತ್ತಾರೆ. ಆದರೆ ಇತರೆ ಮುಂದುವರಿದ ಸಮುದಾಯಗಳಿಗೆ ಹೋಲಿಸಿದರೆ ಕಾಡುಗೊಲ್ಲರಲ್ಲಿ ವರದಕ್ಷಿಣೆ ಪದ್ಧತಿ ಕಡಿಮೆ ಎಂದೇ ಹೇಳಬೇಕು.

ಮದುವೆ : ಮದುವೆ ಸಾಮಾಜಿಕ ಜೀವನದಲ್ಲಿ ಒಂದು ಮುಖ್ಯವಾದ ಅಂಶವಾಗಿದೆ. ಬುಡಕಟ್ಟುಗಳಲ್ಲಿ ಮದುವೆ ಅಥವಾ ವಿವಾಹವು ಒಂದು ಪ್ರಮುಖ ಸಂಸ್ಥೆಯಾಗಿದ್ದು, ಹಲವಾರು ರೀತಿಯಲ್ಲಿ ಅನನ್ಯತೆಯನ್ನು ಪಡೆದುಕೊಂಡಿದೆ. ಬುಡಕಟ್ಟುಗಳಲ್ಲಿನ ಮದುವೆಯು ಇತರ ಸಮುದಾಯಗಳ ಮದುವೆಗಿಂತ ಭಿನ್ನವಾಗಿರುತ್ತದೆ. ಈ ಮಾತು ಕಾಡುಗೊಲ್ಲ ಬುಡಕಟ್ಟು ಸಮುದಾಯಕ್ಕೂ ಅನ್ವಯಿಸುತ್ತದೆ. ಇತರೆ ಬುಡಕಟ್ಟು ಗಳಲ್ಲಿರುವಂತೆ ಮದುವೆಗೆ ಸಂಬಂಧಿಸಿದಂತೆ ಅನೇಕ ಸಾಮಾಜಿಕ-ರೂಢಿ-

ನಿಯಮಗಳಿವೆ. ಮದುವೆಗೆ ಸಂಬಂಧಿಸಿದಂತೆ ಕಾಡುಗೊಲ್ಲ ಸಮುದಾಯದವರು ಏಕಪತ್ನಿ (monogamy) ವಿವಾಹ ಪದ್ಧತಿಯನ್ನು ಅನುಸರಿಸುತ್ತಾರೆ. ಇವರು ಬಂಧುತ್ವಕ್ಕೆ ಸಂಬಂಧಿಸಿ ದಂತೆ ಹೊರಬಾಂಧವ್ಯಕ್ಕೆ (exogamy) ವಿವಾಹ ಪದ್ಧತಿಯನ್ನು ಅನುಸರಿಸುತ್ತಾರೆ. ಕಾಡುಗೊಲ್ಲರು ಹಿಂದಿನ ಕಾಲದಲ್ಲಿ ಹೆಣ್ಣು ಮಕ್ಕಳನ್ನು ಕದ್ದೊಯ್ದು ಮದುವೆಯಾಗುತ್ತಿದ್ದರು. ಇದು ಇತ್ತೀಚೆಗೆ ಕಡಿಮೆಯಾಗಿದೆ. ಅಂತು ಮದುವೆಗೆ ಸಂಬಂಧಿಸಿದಂತೆ, ಮದುವೆ ಪ್ರಾರಂಭವಾದ ದಿನದಿಂದ ಸುಮಾರು ೧೫ ದಿನಗಳ ತನಕ ಹಲವಾರು ಸಂಪ್ರದಾಯ, ಆಚರಣೆ, ವಿಧಿ ವಿಧಾನ, ಶಾಸ್ತ್ರಗಳನ್ನು ಪಾಲಿಸಿಕೊಂಡು ಬರುತ್ತಾರೆ. ಹೆಚ್ ವಿ ನಂಜುಂಡಯ್ಯರವರು ಕಾಡುಗೊಲ್ಲರ ಮದುವೆಯ ಬಗ್ಗೆ ಈ ರೀತಿ ಹೇಳುತ್ತಾರೆ. Marriage among them is generally adult but infant marriage may take place. A woman should not die unmarried. Polygamy is recognised, but polyandry is unknown (Nanjundaiah, H V:1909:8).

ಪ್ರಸ್ತುತ ಅಧ್ಯಯನದ ಪ್ರಕಾರ ಆಯ್ಕೆಯಾದ ಮಾದರಿಗಳ ಜನಸಂಖ್ಯೆಯ ಪೈಕಿ ಶೇಕಡ ೪೯.೭೦ ರಷ್ಟು ಜನರು (೧೦೦೮) ವಿವಾಹಿತರಾಗಿದ್ದು, ಅವರ ಪೈಕಿ ಶೇಕಡ ೫೪.೧೬ ರಷ್ಟು ಮಹಿಳೆಯರಾಗಿದ್ದಾರೆ. ಹಾಗೆಯೇ ವಿವಾಹಿತರ ಪೈಕಿ ಶೇಕಡ ೪೫.೮೭ (೫೦೦) ಪುರುಷರಾಗಿದ್ದಾರೆ. ಅವಿವಾಹಿತರ ಪೈಕಿ (೪೬.೭೦%) ಶೇಕಡ ೫೧.೭೪ ರಷ್ಟು ಪುರುಷರು ಕಂಡು ಬಂದರೆ, ಶೇಕಡ ೪೦.೮೩ ರಷ್ಟು ಮಹಿಳೆಯರು ಕಂಡು ಬರುತ್ತಾರೆ. ಈ ಅಧ್ಯಯನದಿಂದ ಕಂಡು ಬರುವುದೇನೆಂದರೆ ವಿವಾಹಿತರು ಅವಿವಾಹಿತರು ಸಮಾನ ಪ್ರಮಾಣದಲ್ಲಿ ಕಂಡು ಬಂದರೂ ಲಿಂಗವಾರು ವಿಷಯಗಳಲ್ಲಿ ಪುರುಷರಿಗಿಂತ ಮಹಿಳೆಯರಲ್ಲಿ ಹೆಚ್ಚು ಜನರು ವಿವಾಹಿತರಾಗಿದ್ದಾರೆ. ಕಾರಣವೆಂದರೆ ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣು ಮಕ್ಕಳನ್ನು ಬೇಗ ಮದುವೆ ಮಾಡುತ್ತಾರೆ. ಹಾಗೆಯೇ ಇದಕ್ಕೆ ತದ್ವಿರುದ್ಧವಾಗಿ ಅವಿವಾಹಿತರಲ್ಲಿ ಪುರುಷರೇ ಮಹಿಳೆಯರಿಗಿಂತ ಅಧಿಕವಾಗಿರುವುದು ಪುರುಷರು ತಡವಾಗಿ ಮದುವೆಯಾಗುವುದನ್ನು ತೋರಿಸುತ್ತದೆ.

**ಕೋಷ್ಟಕ: ೪.೧ ವೈವಾಹಿಕ ಸ್ಥಾನಮಾನ**

| ಕ್ರ ಸಂ. | ವೈವಾಹಿಕ ಸ್ಥಾನಮಾನ | ಗಂಡು ಶೇಕಡಾವಾರು | ಹೆಣ್ಣು ಶೇಕಡಾವಾರು | ಒಟ್ಟು ಸಂಖ್ಯೆ ಶೇಕಡಾವಾರು |
|---|---|---|---|---|
| ೧ | ಅವಿವಾಹಿತ | ೫೧.೭೪ | ೪೦.೮೩ | ೪೬.೭೦ |
| ೨ | ವಿವಾಹಿತ | ೪೫.೮೭ | ೫೪.೧೬ | ೪೯.೭೦ |
| ೩ | ವಿಧುರ/ ವಿಧವೆ | ೨.೩೯ | ೫.೦೧ | ೩.೬೦ |
| ೪ | ಬೇರ್ಪಡೆ | ೦.೦೦ | ೦.೦೦ | ೦.೦೦ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

## ಮದುವೆಯ ಕ್ರಮ

**ಸಂಗಾತಿ ಆಯ್ಕೆ :** ಕಾಡುಗೊಲ್ಲರಲ್ಲಿ ಸಂಗಾತಿಗಳ ಆಯ್ಕೆಯ ವಿಷಯದಲ್ಲಿ ವಧು-ವರರಿಗೆ ಕಡಿಮೆ ಆಯ್ಕೆಗಳು ಇದ್ದು ಸಮುದಾಯದ ಹಿರಿಯರದೇ ಮುಖ್ಯ ಪಾತ್ರವಿರುತ್ತದೆ. ಮದುವೆಗೆ ಸಂಬಂಧಿಸಿದಂತೆ ಕಾಡುಗೊಲ್ಲರಲ್ಲಿ ವಿವಾಹದ ಸಂದರ್ಭದಲ್ಲಿ ಕುಲ ಅಥವಾ ಬೆಡಗು ಬಹಳ ಮಹತ್ವದ ಪಾತ್ರವಹಿಸುತ್ತದೆ. ಇವರಲ್ಲಿ ಚಿತ್ತಮುತ್ತಿ ಕುಲಕ್ಕೆ ಸೇರಿದ, ಕರಡಿಗೊಲ್ಲ ಬೆಡಗು ಮುಖ್ಯವಾದ ಹಾಗೂ ಜನಸಂಖ್ಯೆಯಲ್ಲಿ ಅಧಿಕವಾದ ಕುಲವಾಗಿದೆ. ಚಂದಮುತ್ತಿ ಕುಲಗಳ ಜನರು ತಮ್ಮ ತಮ್ಮಲ್ಲಿಯೇ ಹೆಣ್ಣು ತಂದುಕೊಳ್ಳುವ ಅಥವಾ ಮದುವೆ ಸಂಬಂಧವನ್ನು ಬೆಳೆಸುವ ಪರಿಪಾಠವಿಲ್ಲ. ಆದರೆ ಚಂದಮುತ್ತಿ ಕುಲಗಳ ಜನರು ಕರಡಿಗೊಲ್ಲ ಬೆಡಗಿನೊಂದಿಗೆ ವಿವಾಹ ಸಂಬಂಧ ಬೆಳೆಸಬೇಕು. ಹಾಗೆಯೇ ಕರಡಿಗೊಲ್ಲರು ಅವರವರಲ್ಲಿಯೇ ವಿವಾಹ ಸಂಬಂಧವನ್ನ ಬೆಳೆಸುವಂತಿಲ್ಲ. ಇವರು ಚಂದಮುತ್ತಿ ಬೆಡಗುಗಳ ಯಾವುದಾದರೊಂದು ಬೆಡಗಿನ ಜೊತೆ ಮದುವೆ ಸಂಬಂಧವನ್ನ ಬೆಳೆಸಬಹುದು. ಇಂತಹ ನಿಷಿದ್ಧವನ್ನ ಮುರಿದರೆ ಅಂತಹವರು ಸಾಮಾಜಿಕ ಬಹಿಷ್ಕಾರಕ್ಕೊಳಗಾಗುತ್ತಾರೆ. ಆದರೆ ಇತ್ತೀಚೆಗೆ ಗೊತ್ತಿಲ್ಲದೆಯೋ ಅಥವಾ ಕದ್ದೊಯ್ದೋ, ಇಲ್ಲವೆ ಬೆಡಗು ಗೊತ್ತಿಲ್ಲದೆ ಪ್ರೀತಿಸಿ ಮದುವೆ ಯಾಗುತ್ತಿರುವುದು ಕಂಡು ಬರುತ್ತದೆ. ರಾಜ್ಯದ ಕೆಲವು ಭಾಗಗಳಲ್ಲಿ ಹಟ್ಟಿ ಗೊಲ್ಲರು ಒಂದು ನಿರ್ದಿಷ್ಟ ಹಟ್ಟಿಯಲ್ಲಿಯೇ ಕೊಡು ತರುವ ಸಂಪ್ರದಾಯವನ್ನಿಟ್ಟುಕೊಂಡಿದ್ದಾರೆ. ಇದನ್ನ ವಿಲೇಜ್ ಎಕ್ಸೊಗಮಿ (ಊರ ಹೊರ ಬಾಂಧವ್ಯ) ಎಂದು ಕರೆಯುತ್ತಾರೆ. ಇತ್ತೀಚೆಗೆ ವಿದ್ಯಾವಂತ ಯುವಕ-ಯುವತಿಯರು ತಮ್ಮ ಸಂಗಾತಿಗಳ ಆಯ್ಕೆಯ ವಿಷಯದಲ್ಲಿ ಸ್ವಲ್ಪ ಮಟ್ಟಿನ ಸ್ವತಂತ್ರ್ಯ ಹೊಂದಿರುವುದು ಕಂಡು ಬರುತ್ತದೆ.

**ನಿಶ್ಚಿತಾರ್ಥ :** ಕಾಡುಗೊಲ್ಲ ಸಮುದಾಯದಲ್ಲಿ ನಿಶ್ಚಿತಾರ್ಥ ಸಂಪ್ರದಾಯವನ್ನ, ಮನೆ ನೋಡುವುದು, ಅರಿಶಿನ ಕುಂಕುಮ ಇಡುವುದು, ತಾಂಬೂಲ ಬದಲಾಯಿಸುವುದು ಎಂದು ಕರೆಯುತ್ತಾರೆ. ವರನ ಕಡೆಯವರು ಹಟ್ಟಿಯ ಗೌಡ-ಪೂಜಾರಿಯನ್ನೊಳಗೊಂಡಂತೆ ವಧುವಿನ ಮನೆಗೆ ಹೋಗಿ ಮದುವೆಯ ದಿನಾಂಕವನ್ನ ಗೊತ್ತು ಮಾಡುತ್ತಾರೆ. ಮದುವೆಯ ದಿನಾಂಕವು ಇವರಿಗೆ ಅನುಕೂಲವಾದ ದಿನವಾಗಿರುತ್ತದೆ. ಇತರೆ ಜಾತಿ-ಸಮುದಾಯದಲ್ಲಿರುವಂತೆ ಆಶಾಡ ತಿಂಗಳು ಕಾಡುಗೊಲ್ಲರ ಮದುವೆಗೆ ಅಡ್ಡಿ ಬರುವುದಿಲ್ಲ. ಬಹುತೇಕ ರಾಜ್ಯದ ಗ್ರಾಮೀಣ ಭಾಗದ ಕಾಡುಗೊಲ್ಲ ಜನತೆ ಪಂಚಾಂಗವನ್ನ ನೋಡಿ ಮದುವೆ ನಿಗದಿ ಮಾಡುವುದಿಲ್ಲ. ಅವರಿಗೆ ಅನುಕೂಲವಾದ ದಿನ ಅಥವಾ ಅವರ ಬುಡಕಟ್ಟು ದೇವರು ಅನುಮತಿ ಕೊಟ್ಟ ದಿನ ಮದುವೆಯ ದಿನವನ್ನ ನಿಗದಿಮಾಡುತ್ತಾರೆ. ಇವರು ಬ್ರಾಹ್ಮಣರು ಹೇಳುವ ದಿನಾಂಕವನ್ನ ನಂಬುವುದಿಲ್ಲ. ಇದಕ್ಕೆ ಒಂದು ಕಥೆಯೇ ಇದೆ. ಈ ಕಥೆಯ ಪ್ರಕಾರ ಬ್ರಾಹ್ಮಣರು ಗೊತ್ತು ಮಾಡುವ ದಿನಾಂಕದಂದು ಒಳ್ಳೆಯ ಅಂದರೆ ಶುಭದಿನವಾಗಿರಲಿಲ್ಲವಂತೆ. ಆದರೆ ಅವರೇ ಅಂದರೆ ಹಟ್ಟಿಯ ಪ್ರಮುಖರೇ ನಿಗದಿ ಮಾಡುವ ದಿನ ಶುಭವಾಗಿರುತ್ತದೆ

ಎಂಬ ನಂಬಿಕೆಯಿದೆ. ಇದು ಕೆಲವು ಸಂದರ್ಭಗಳಲ್ಲಿ ಸತ್ಯವೂ ಆಗಿದೆ. ನಿಶ್ಚಿತಾರ್ಥದ ದಿನದಂದು ವರ ನಿಶ್ಚಿತಾರ್ಥಕ್ಕೆ ಹೋಗುವಂತಿಲ್ಲ. ವರನು ಹೊಲದಲ್ಲಿ ಹೊಲ ಊಳಲೋ ಅಥವಾ ಕುರಿ ದನ ಕಾಯಲು ಹೋಗಿರುತ್ತಾನೆ. ನಿಶ್ಚಿತಾರ್ಥದ ಕಾರ್ಯವನ್ನ ಹಟ್ಟಿಯ ಮುಖಂಡರು- ಸಂಬಂಧಿಕರು ನೆರವೇರಿಸಿಕೊಂಡು ಬರುತ್ತಾರೆ. ಇತ್ತೀಚೆಗೆ ಸಾಮಾಜಿಕ ಬದಲಾವಣೆಯಿಂದಾಗಿ ನಗರವಾಸ್, ವಿದ್ಯಾವಂತರ ತಂದೆ-ತಾಯಂದಿರು ನಿಶ್ಚಿತಾರ್ಥಕ್ಕೆ ಯುವಕ-ಯುವತಿಯರನ್ನ ಕೂರಿಸಿ ಉಂಗುರ ಮತ್ತು ಹೂವಿನ ಹಾರವನ್ನ ಬದಲಾಯಿಸಿಕೊಳ್ಳುತ್ತಾರೆ.

"ವಿವಾಹಕ್ಕೆ ಮೊದಲು ಹೆಣ್ಣು ಗಂಡಿನವರ ನಡುವೆ ಒಪ್ಪಂದ ನಡೆಯಬೇಕು. ಒಂದು ಹಟ್ಟಿಯಿಂದ ಇನ್ನೊಂದು ಹಟ್ಟಿಗೆ ಹೆಣ್ಣು ನೋಡಲು ಹೋಗುವಾಗ ಶಕುನಗಳನ್ನು ಗಮನಿಸುವುದು ಕಾಡುಗೊಲ್ಲರಲ್ಲಿ ಹೆಚ್ಚು. ಐದು ಜನ ಗಂಡಸರು ಒಬ್ಬ ಹಿರಿಯ ಹೆಣ್ಣುಮಗಳೊಡನೆ ಹೆಣ್ಣು ನಿಶ್ಚಯಿಸಲು ಹೊರಡುತ್ತಾರೆ. ಈ ಹಿರಿಯ ಹೆಣ್ಣುಮಗಳು ಸುಣ್ಣದ ಬೊಟ್ಟು ಹಚ್ಚಿರುವ ಮಡಕೆಯನ್ನು ಹೊತ್ತು ಮುಂದೆ ನಡೆಯುತ್ತಾಳೆ. ಈ ಹಟ್ಟಿಗಳೇನೂ ಒಂದಕ್ಕೊಂದು ಹೆಚ್ಚು ದೂರದಲ್ಲಿರುವುದಿಲ್ಲ. ಸುಣ್ಣದ ಬೊಟ್ಟು ಹಚ್ಚಿದ ಮಡಕೆಯಲ್ಲಿ ಅಕ್ಕಿ, ವೀಳ್ಯದೆಲೆ, ಬಾಳೆಹಣ್ಣು ಇದ್ದು ಅದರ ಬಾಯನ್ನು ಬಟ್ಟೆಯಿಂದ ಮುಚ್ಚಿ ಕಟ್ಟಿರುತ್ತಾರೆ. ಗಂಡಿನ ಮನೆಯವರು ಹೆಣ್ಣಿನ ಮನೆಗೇ ಹೆಣ್ಣು ನೋಡಲು ಬರುವುದು ಚಿತ್ರದುರ್ಗದ ಮ್ಯಾಸ ಬೇಡ ಮತ್ತು ಕಾಡುಗೊಲ್ಲ ಬುಡಕಟ್ಟಿನ ಸಂಪ್ರದಾಯವಾಗಿದೆ. ಈ ಬುಡಕಟ್ಟು ವರ್ಗಗಳಲ್ಲಿ ಹೆಣ್ಣು ಹೆತ್ತವರಿಗೇ ಹೆಚ್ಚಿನ ಆದ್ಯತೆ ಇರುತ್ತದೆ. ಹೀಗಾಗಿ ಯೋಗ್ಯ ಕನ್ಯೆಯರು ಇರುವ ಹಟ್ಟಿಗೆ ಗಂಡಿನ ಕಡೆಯವರೆ ಹುಡುಕಿ ಬರುವುದು ಪದ್ಧತಿಯಾಗಿದೆ (ಕೃಷ್ಣಮೂರ್ತಿ ಹನೂರು:೧೯೯೮:೮೨೪-೮೨೫).

ಗಂಡಿನವರು ಬರುವ ವೇಳೆಗೆ ಹೆಣ್ಣಿನ ಮನೆಯವರು ತಮ್ಮ ಹಟ್ಟಿಯೊಳಗೆ ದೀಪದ ಹಣತೆಯನ್ನು ಹಚ್ಚಿ ಇಟ್ಟಿರುತ್ತಾರೆ. ಈ ದೀಪದ ಹಣತೆ ಕಾಡುಗೊಲ್ಲರಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಗಂಡಿನವರು ಕನ್ಯೆಯಿರುವ ಮನೆಗೆ ಬಂದಾಗ ಉರಿಯುತ್ತಿರುವ ದೀಪ ನೋಡಬೇಕು. ಅಂತೆಯೇ ಬೇಡ ನಾಯಕರು ಹೆಣ್ಣಿನ ಮನೆಗೆ ಬಂದಾಗ ಹೆಣ್ಣಿನವರು ಬಂದ ಉದ್ದೇಶವೇನು ಎಂದು ಕೇಳುತ್ತಾರೆ. ಗಂಡಿನವರು ನಿಮ್ಮ ಮನೆಯಲ್ಲಿ ಹಾಲು, ಅನ್ನ ಇದ್ದರೆ ಊಟ ಮಾಡಿ ಹೋಗೋಣವೆಂದು ಬಂದೆವು ಎನ್ನುತ್ತಾರೆ. ಪಶುಪಾಲನಾ ವೃತ್ತಿಯಲ್ಲಿರುವವರು ಅದಕ್ಕೆ ಸಂಬಂಧಿಸಿದ ಪರಿಭಾಷೆಯಲ್ಲೇ ಮಾತನಾಡುವುದು ಸಹಜವೇ ಎನಿಸುತ್ತದೆ (ಅವರೇ:೧೯೯೮:೮೨೫).

ಅಂತೆಯೇ ಕಾಡುಗೊಲ್ಲರಲ್ಲಿಯೂ ಹಸುಗಳ ಶಕುನ, ದೀಪದ ಶಕುನ ಬಹಳ ಮುಖ್ಯವಾದುದು. ಕೊಟ್ಟಿಗೆಯಲ್ಲಿ ದನಕರುಗಳು ಸಂತೋಷದಿಂದ ಕಿವಿ ನಿಮಿರಿಸಿ ಕೊಂಡು ಮೆಲುಕು ಹಾಕುತ್ತಿದ್ದರೆ ಒಳ್ಳೆಯದೆಂದು ಬಾವಿಸುವರು. ಗಂಡಿನ ಕಡೆಯವರು ಬರುವಾಗ ಹಚ್ಚಿಟ್ಟ ದೀಪ ರಾತ್ರಿಯಲ್ಲಿ ಆರದೆ ಉರಿದರೆ ಇದೀಗ ನೆರವೇರುತ್ತಿರುವ

ವಿವಾಹ ಸಂಬಂಧ ಚೆನ್ನಾಗಿರುತ್ತದೆಂದು ತಿಳಿಯುತ್ತಾರೆ. ಸಂಜೆಯ ಇಳಿಹೊತ್ತಿನಲ್ಲಿ ಬಂದ ಗಂಡಿನ ಕಡೆಯವರು ಹೆಣ್ಣಿನೊಂದಿಗೆ ಒಪ್ಪಂದದ ಮಾತುಕತೆ ನಡೆಸುತ್ತಾರೆ. ಈ ಒಪ್ಪಂದದ ಸಂದರ್ಭದಲ್ಲಿ ಎಲೆ ಅಡಿಕೆ ವಿನಿಮಯವೇ ಮುಖ್ಯವಾಗಿರುತ್ತದೆ. ಹೆಣ್ಣು ಗಂಡಿಗೆ ಒಡವೆಗಳ ವಿನಿಮಯದ ಮಾತುಕತೆಯೂ ನಡೆಯುವುದು. ಇತ್ತೀಚಿನ ದಿನಗಳಲ್ಲಿ ಹೆಣ್ಣು ಗಂಡಿನವರ ನಡುವೆ ಬುಡಕಟ್ಟು ವರ್ಗಗಳಲ್ಲಿ ಒಡವೆಗಳ ಮಾತುಕತೆ ಬರುತ್ತಿದೆಯೇ ಹೊರತು ಹಿಂದೆ ಈ ಪದ್ಧತಿ ಇರಲಿಲ್ಲ. ಚಿನ್ನ ಬೆಳ್ಳಿಯಿಂದ ಮಾಡಿದ ಒಡವೆಗಳ ಉಪಯೋಗವೇ ಅವರಿಗೆ ಹೆಚ್ಚು ತಿಳಿದಿರಲಿಲ್ಲ. ತಾಳಿಗೆ ಸಹ ಯಾವುದೇ ಲೋಹ ಉಪಯೋಗಿಸದೆ ಕಟ್ಟಾಣಿ ಮುತ್ತಿನ ಸರ ಉಪಯೊಗಿಸುತ್ತಿದ್ದರು. ಕಾಡುಗೊಲ್ಲ ಜನ ಒಪ್ಪಂದದ ಕ್ರಿಯೆ ನಡೆಯುವಾಗ ಬಹು ಸೂಕ್ಷ್ಮವಾಗಿ ಸುತ್ತಮುತ್ತಲಿನ ಶಕುನಗಳನ್ನು ಗಮನಿಸುತ್ತಿರುತ್ತಾರೆ. ಎಲ್ಲಕ್ಕಿಂತ ಹೆಣ್ಣಿನ ಮನೆಯವರಿಗೆ ಬೆಕ್ಕು ಕುಯಿಗುಟ್ಟುವುದಾಗಲೀ, ಮಡಕೆ ಬಿದ್ದು ಒಡೆಯುವುದಾಗಲೀ, ಹಾವು ಬೆಕ್ಕು ಅಡ್ಡ ಬರುವುದಾಗಲೀ ಇದ್ಯಾವುದು ಆಗಬಾರದು. ಇತ್ತ ಗಂಡಿನವರಿಗೂ ರಾತ್ರಿ ಮಲಗುವಾಗ ಕೆಟ್ಟ ಕನಸುಗಳು ಬೀಳಬಾರದು. ಹೀಗಾದರೆ ಹೆಣ್ಣು ಗಂಡಿನ ಕಡೆಯವರು ತಾವಾಡಿದ ಲಗ್ನದ ಮಾತು ಒಪ್ಪಂದಕ್ಕೆ ಬರುವಂತೆ ನೋಡಿಕೊಳ್ಳುತ್ತಾರೆ. ಇದರ ಜೊತೆಗೆ ಹೆಣ್ಣಿನ ಗುಣಲಕ್ಷಣಗಳನ್ನು ಚೆನ್ನಾಗಿ ಪರೀಕ್ಷಿಸುತ್ತಾರೆ. ಈ ಪರೀಕ್ಷೆಯನ್ನು ಗಂಡಿನ ಕಡೆಯವರು ನೇರವಾಗಿಯೇ ಅಥವಾ ಬೇರೆಯವರಿಂದ ಕೇಳಿ ತಿಳಿದುಕೊಳ್ಳಲೂಬಹುದು. ಹೆಣ್ಣನ್ನು ಪರೀಕ್ಷಿಸಿ ಗಂಡಿನ ಕಡೆಯವರು ಹೋದ ಮೇಲೆ ಮತ್ತು ಹೆಣ್ಣಿನ ಕಡೆಯವರು ಒಬ್ಬ ಮುತ್ತೈದೆ ತಲೆಯ ಮೇಲೆ ಬಿಳಿ ಸುಣ್ಣದ ಬೊಟ್ಟಿನ ಕರಗ ಹೊರಿಸಿಕೊಂಡು ಐದು ಜನ ಗಂಡಸರು ಗಂಡು ಇರುವಲ್ಲಿಗೆ ಬರುತ್ತಾರೆ. ಹೀಗೆ ಬರುವಾಗಲೂ ಹೆಣ್ಣಿನ ಕಡೆಯವರು ದಾರಿಯ ಎಲ್ಲಾ ಶಕುನಗಳನ್ನು ಗಮನಿಸುವರು (ಅವರೇ:೧೯೯೮: ೮೨೫–೮೨೬).

"ಕಾಡುಗೊಲ್ಲರಲ್ಲಿ ಮದುವೆ ಗಂಡಿನ ಮನೆಯಲ್ಲಿಯೇ ನಡೆಯಬೇಕು ಅಥವಾ ಹೆಣ್ಣಿನ ಮನೆಯಲ್ಲಿಯೇ ನಡೆಯಬೇಕು ಎಂಬ ಯಾವ ನಿರ್ಬಂಧವೂ ಇಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ನಡೆಸಬಹುದು. ಆದರೆ ಕಾಡುಗೊಲ್ಲರಲ್ಲಿ ಗಂಡಿನ ಮನೆಯವರು ಎಷ್ಟೇ ಬಡವರಿರಲಿ ಅಂತಸ್ತಿನ ದ್ಯೋತಕವಾಗಿ ಮದುವೆ ಗಂಡಿನ ಮನೆಯಲ್ಲಿಯೇ ನಡೆಸುತ್ತಿದ್ದರು. ಹೆಣ್ಣಿನ ಮನೆಯವರು ಎಷ್ಟೇ ಶ್ರೀಮಂತರಿರಲಿ ಹೆಣ್ಣನ್ನು ಗಂಡಿನ ಮನೆಗೆ ಕರೆತಂದು ಗಂಡಿನ ಊರಿನಲ್ಲಿಯೇ ಮದುವೆ ಮಾಡುತ್ತಿದ್ದರು. ಆದರೆ, ಇತ್ತೀಚೆಗೆ ಆಧುನಿಕ ಸಮಾಜದಲ್ಲಿ ಇತರೆ ಸಮುದಾಯಗಳಲ್ಲಿ ನಡೆದಂತೆ ಮದುವೆಗಳು ಹೆಣ್ಣಿನ ಮನೆಯಲ್ಲಿ ನಡೆಯುವುದನ್ನು ನೋಡಬಹುದಾಗಿದೆ. ನಿಶ್ಚಿತಾರ್ಥದ ಸಮಯದಲ್ಲಿ ಗಂಡಿನ ಮತ್ತು ಹೆಣ್ಣಿನ ಮನೆಯವರು ಕೂಡಿ ಮದುವೆಯ ದಿನಾಂಕವನ್ನು ಗೊತ್ತು ಮಾಡುತ್ತಾರೆ. ಇವರು ಮದುವೆಯ ದಿನಾಂಕವನ್ನು ಗೊತ್ತು ಮಾಡಲು ಪಂಚಾಂಗ ವನ್ನಾಗಲೀ ಅಥವಾ ಬ್ರಾಹ್ಮಣರನ್ನಾಗಲಿ ಅವಲಂಬಿಸುವುದಿಲ್ಲ. ಬದಲಾಗಿ ಅವರವರ ಅನುಕೂಲಕ್ಕೆ ತಕ್ಕಂತೆ ಮದುವೆಯ ದಿನಾಂಕವನ್ನು ನಿಗದಿ ಮಾಡುತ್ತಾರೆ. ಕಾಡುಗೊಲ್ಲರು

ಸಾಮಾನ್ಯವಾಗಿ ಆಶಾಡ ಮಾಸದಲ್ಲಿಯೂ ಮದುವೆ ಮಾಡುತ್ತಾರೆ. ಇವರಿಗೆ ಎಲ್ಲಾ ತಿಂಗಳುಗಳೂ ಶ್ರೇಷ್ಠವಾದವುಗಳು. ಆಶಾಡ ತಿಂಗಳಲ್ಲಿ ಏಕೆ ಮದುವೆ ಮಾಡುತ್ತಿರಿ ಎಂದು ಕೇಳಿದರೆ ಆಶಾಡ ತಿಂಗಳಲ್ಲಿ ಮದುವೆಯಾದರೆ ನಮಗೆ ಯಾವ ತೊಂದರೆಯೂ ಆಗುವುದಿಲ್ಲ. ಬದಲಾಗಿ ಮದುವೆಯಾದ ದಂಪತಿಗಳಿಗೆ ಮಕ್ಕಳಾಗುತ್ತವೆ. ವಂಶಾಭಿವೃದ್ಧಿಯೂ ಆಗುತ್ತದೆ ಎಂದು ಹೇಳುತ್ತಾರೆ. ಅಂದರೆ ಇವರು ಬುಡಕಟ್ಟು ಜನರಾದರೂ ವೈಚಾರಿಕತೆಯ ತಿಳುವಳಿಕೆಯಲ್ಲಿ ಮುಂದುವರಿದಿರುವುದನ್ನು ತೋರಿಸುತ್ತದೆ.

ಮದುವೆ ಗೊತ್ತು ಮಾಡುವ ಸಂದರ್ಭದಲ್ಲಿ ಅಂದರೆ ನಿಶ್ಚಿತಾರ್ಥದ ದಿನದಂದು ಹೆಣ್ಣಿಗೆ ಏನೇನು ಒಡವೆಗಳನ್ನು ಕೊಡಬೇಕೆಂದು ಗಂಡಿನವರನ್ನು ಹೆಣ್ಣಿನವರನ್ನು ಕೇಳುತ್ತಾರೆ. ಹೆಣ್ಣಿಗೆ ಸಾಮಾನ್ಯವಾಗಿ ಕಾಲಂದಿಗೆ, ಪಿಲ್ಲಿ, ತೋಳುಬಂದಿ ಮೊದಲಾದ ಒಡವೆಗಳನ್ನು ಕೇಳುತ್ತಾರೆ. ಗಂಡಿಗೆ ಮುಮ್ಮೈ ಬಿದ್ದು, ತೋಳಿಗೆ ಬಟ್ಟಲಿನ ಸಲಿಗೆ, ಕಿವಿಗೆ ಹತ್ತ ಕಡಗು ತಲೆಗೆ ಏಳು ಮೊಳದ ರುಮಾಲು, ಹೆಗಲ ಮೇಲಕ್ಕೆ ಕರಿಕಂಬಳಿ, ಕಾಲಿಗೆ ಮುಟ್ಟು ಮತ್ತು ಮೊಣಗಪ್ಪದ ಎಲೆ, ಅಡಿಕೆ ಚೀಲ ಕೊಡುತ್ತಾರೆ.

ನಿಶ್ಚಿತಾರ್ಥದ ಸಮಯದಲ್ಲಿ ಯಾವ ಅಪಶಕುನಗಳು ಆಗಬಾರದು. ಬೆಕ್ಕು ಕಡಿದಾಡುವುದು, ಹೆಣ್ಣಿನ ಮನೆಯಲ್ಲಿ ಮಾಂಸದಡಿಗೆ ಮಾಡುವುದು. ಮಡಿಕೆ ಸಾಲು ಉರುಳಿ ಬೀಳುವುದು, ರಾತ್ರಿ ಕನಸಿನಲ್ಲಿ ಹಾವು, ಸಾವು, ಮಾರಿ, ಕತ್ತೆ, ನಾಯಿ ಇವುಗಳನ್ನು ಕಾಣುವುದು. ಹಣತೆ ಆರಿಹೋಗುವುದು, ಮನೆಯಲ್ಲಿನ ಹಾಲಿನ ಮಡಕೆಯನ್ನು ಬೆಕ್ಕು ಕೆಡುವುದು, ಕಸದ ಡಬ್ಬ, ಅಥವಾ ಮಂಕರಿ ಅಡ್ಡ ಬರುವುದು. ಕಾಲಿ ಕೊಡ ಅಡ್ಡ ಬರುವುದು, ಮುಟ್ಟಾದ ಹೆಂಗಸರು ಆ ರಾತ್ರಿ ಹಟ್ಟಿಯೊಳಕ್ಕೆ ಬಂದಿರುವ ಅಪಶಕುನಗಳು ಆಗದೆ ಎಲ್ಲವೂ ಸರಿಯಾಗಿ ನಡೆದರೆ ಮದುವೆ ನಿಷ್ಕರ್ಷೆಯಾದಂತೆ (ಶಂಕರನಾರಾಯಣ, ತೀ ನಂ:೧೯೮೭:೧೫೭). ಇದರ ಜೊತೆಗೆ ಹೆಣ್ಣನ್ನು ಸರಿಯಾಗಿ ಪರೀಕ್ಷಿಸುತ್ತಾರೆ. ನೆಡಿ ಕಾಲು, ಅಂಡೆ ಕಾಲು, ದುಂಡು ಮುಖ, ಇವುಗಳು ಹೆಣ್ಣಿನಲ್ಲಿದ್ದರೆ ಅಂತಹ ಹೆಣ್ಣನ್ನು ಒಪ್ಪುವುದಿಲ್ಲ. ಈ ಗುಣಗಳು ಇಲ್ಲದಿದ್ದ ಹೆಣ್ಣನ್ನು ಗುರುತಿಸಲು ಜನರು ಹೆಣ್ಣಿನ ಎಲೆ ಅಡಿಕೆಗೆ ಒಂದಿಷ್ಟು ಸುಣ್ಣ ಬೇಕು ಎಂದು ಹೇಳಿ ಹೆಣ್ಣಿನಿಂದ ಸುಣ್ಣ ತರಿಸುವುದೂ ಉಂಟು. ಹೆಣ್ಣು ಕಡಿಮೆ ಪ್ರಮಾಣದಲ್ಲಿ ತಂದು ಕೊಟ್ಟರೆ ಹೆಣ್ಣು ಪರವಾಗಿಲ್ಲ ಸಂಸಾರ ಮಾಡುತ್ತಾಳೆ. ಬುದ್ಧಿವಂತಳು ಎಂದಾಗಿಯೂ, ಹೆಚ್ಚು ತಂದು ಕೊಟ್ಟರೆ ಕೈಹಿಡಿತ ಇಲ್ಲದಿರುವವಳು, ಸಂಸಾರ ಮಾಡಲಾರಳು ಎಂದೂ ತೀರ್ಮಾನಿಸುತ್ತಾರೆ. ಹೀಗೆ ಕಾಡುಗೊಲ್ಲರಲ್ಲಿ ನಿಶ್ಚಿತಾರ್ಥದ ಸಮಯದಲ್ಲಿ ಹಲವು ರೀತಿಯ ರೂಢಿ, ಸಂಪ್ರದಾಯ ಮತ್ತು ಕಟ್ಟುಪಾಡುಗಳನ್ನು ನಡೆಸಿಕೊಂಡು ಬರುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಈ ಸಮುದಾಯದ ಜನರು ನಿಧಾನವಾಗಿ ಈ ರೀತಿಯ ಸಂಪ್ರದಾಯಗಳನ್ನು ಕಡಿಮೆ ಮಾಡುತ್ತಾ ಬಂದಿದ್ದಾರೆ. ಯುವಕ, ಯುವತಿಯರಿಗೆ ನಿಶ್ಚಿತಾರ್ಥದ ಸಮಯದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಲಾಗುತ್ತಿದೆ. ಆದರೂ, ಇನ್ನೂ ಹಿಂದುಳಿದ ಪ್ರದೇಶಗಳಲ್ಲಿ ಅಥವಾ ಹಟ್ಟಿಗಳಲ್ಲಿ ಇವತ್ತಿಗೂ ಹಿಂದಿನ ಕಾಲದ

ಸಂಪ್ರದಾಯಗಳನ್ನು ನಿಶ್ಚಿತಾರ್ಥದ ಸಮಯದಲ್ಲಿ ಪಾಲಿಸುತ್ತಿರುವುದನ್ನು ನೋಡಬಹುದಾಗಿದೆ. ಕಾಡುಗೊಲ್ಲರಲ್ಲಿ ಮದುವೆಯ ಪ್ರಕ್ರಿಯೆಯು ನಿಶ್ಚಿತಾರ್ಥದೊಂದಿಗೆ ಪ್ರಾರಂಭವಾಗಿ ಮದುವೆ ಮುಗಿಯುವವರೆಗೂ ನಾನಾ ರೀತಿಯ ಶಾಸ್ತ್ರಗಳು, ಸಂಪ್ರದಾಯಗಳನ್ನು ಪಾಲಿಸುತ್ತಾರೆ. ಅಂದರೆ ಈ ಸಮುದಾಯದಲ್ಲಿ ಹಿಂದಿನ ದಿನಗಳಲ್ಲಿ ಮದುವೆ ಎಂದರೆ ಕೇವಲ ಎರಡು ಕುಟುಂಬ ಅಥವಾ ಗಂಡು ಹೆಣ್ಣಿನ ನಡುವೆ ನಡೆಯುವ ಮದುವೆಯಾಗಿರದೆ ಇಡೀ ಊರಿನ ಜನರು ಎಲ್ಲಾ ಕೆಲಸಗಳಲ್ಲಿ ಭಾಗಿಯಾಗಿ ಇಡೀ ವರ್ಷ ತಯಾರಿ ನಡೆಸಿ ಮದುವೆ ಕಾರ್ಯಗಳನ್ನು ಮಾಡುತ್ತಿದ್ದರು.

**ಕೊನೆ ಕಡಿಯುವ ಶಾಸ್ತ್ರ :** ಮದುವೆ ನಿಶ್ಚಿಯವಾದ ನಂತರ ಮದುವೆಯ ಶಾಸ್ತ್ರಗಳು ಒಂದೊಂದಾಗಿ ಪ್ರಾರಂಭವಾಗುತ್ತವೆ. ಮೊದಲನೆಯದಾಗಿ ಕೊನೆ ಕಡಿಯುವ ಶಾಸ್ತ್ರ ಪ್ರಾರಂಭ ಮಾಡುತ್ತಾರೆ. ಈ ಶಾಸ್ತ್ರವನ್ನು ಪ್ರಾರಂಭ ಮಾಡಿದರೆ ಮದುವೆಯ ಪ್ರಕ್ರಿಯೆ ಶುರುವಾದಂತೆಯೇ. ಅಲ್ಲಿಂದ ಮದುವೆ ಮನೆಯವರ ಮತ್ತು ಹಟ್ಟಿಯ ಜನರ ಸಂಭ್ರಮ ಶುರುವಾಗುತ್ತದೆ. ಕೊನೆ ಕಡಿಯುವ ಶಾಸ್ತ್ರವೆಂದರೆ ಮದುವೆಗೆ ಬೇಕಾಗುವ ಅಡಿಗೆ ತಯಾರಿಸಲು ಬೇಕಾದ ಕಟ್ಟಿಗೆ ಅಥವಾ ಸೌದೆಯನ್ನು ಒದಗಿಸುವುದು ಅಥವಾ ಸೌದೆಯನ್ನು ಒಡೆಯುವುದು ಎಂದರ್ಥ. ಅಂದರೆ ಮದುವೆಗೆ ಅಡಿಗೆಯು ಒಂದು ಮುಖ್ಯವಾದ ಭಾಗವಾದುದರಿಂದ ಅಡುಗೆ ಮಾಡಲು ಈಗಿನ ಹಾಗೆ ಮೊದಲು ಆಧುನಿಕ ರೀತಿಯ ಉಪಕರಣಗಳು ಇರಲಿಲ್ಲ. ಆದ್ದರಿಂದ ಅಡುಗೆ ತಯಾರಿಸಲು ಕಟ್ಟಿಗೆಗಳನ್ನು ಉರುವಲಾಗಿ ಬಳಸುತ್ತಿದ್ದರು. ಈ ಕಾರಣದಿಂದಾಗಿ ಮದುವೆಗೆ ಸೌದೆಯನ್ನು ಜನರೇ ಮನೆಗೊಬ್ಬರಂತೆ ತಾವೇ ತಾವಾಗಿ ಉತ್ಸುಕತೆಯಿಂದ ಮದುವೆಯ ಮನೆಗೆ ತರುತ್ತಿದ್ದರು. ಕೊನೆ ಕಡಿಯಲು ಒಂದು ದಿನ ನಿಗದಿ ಮಾಡುತ್ತಿದ್ದರು. ಆ ದಿನ ಬಂದೊಡನೆ ಹಟ್ಟಿಯ ಸುತ್ತಲಿನ ಯಾವುದಾದರೊಂದು ಮರದಲ್ಲಿ (ಮುಖ್ಯವಾಗಿ ಆಲದ ಮರ) ಸಾಂಕೇತಿಕವಾಗಿ ಒಂದು ಸಣ್ಣ ಅಥವಾ ದಪ್ಪನೆಯ ರಂಬೆಯನ್ನು ಕಡಿಯುತ್ತಿದ್ದರು. ಕಡಿಯುವುದಕ್ಕೆ ಮುಂಚೆ ಕೊಂಬೆ ಅಥವಾ ರೆಂಬೆ ಕಡಿಯಲು ಕೊಡಲಿ, ಕುಡುಗೋಲುಗಳನ್ನು ಗಂಡಿನ ಮನೆಯಲ್ಲಿ ಒಂದು ಮೂಲೆಯಲ್ಲಿ ಇಟ್ಟು ಅವುಗಳಿಗೆ ಅರಿಶಿನ ಕುಂಕುಮ ಮತ್ತು ಹೂವುಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ನಂತರ ಪೂಜಿಸಿದ ಕೊಡಲಿಗಳನ್ನು ಗಂಡಾಳುಗಳು ಅಂದರೆ ಪುರುಷ ಯುವಕರು ಹಟ್ಟಿಯ ಪೂರ್ವ ಭಾಗಕ್ಕೆ ಬಂದು ಹಟ್ಟಿಯ ಯಾರದೇ ಆದ ಜಮೀನಿನಲ್ಲಿರುವ ಮರದಲ್ಲಿ ಸಾಂಕೇತಿಕವಾಗಿ ಕೊಂಬೆಯನ್ನು ಕಡಿಯುತ್ತಿದ್ದರು. ಕೊಂಬೆ ಅಥವಾ ರೆಂಬೆಯನ್ನು ಕಡಿದ ಮೇಲೆ ಬಿದ್ದ ಕೊನೆಯನ್ನು ಕತ್ತರಿಸಿ ಮದುವೆ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ತದನಂತರ ಮದುವೆ ಪ್ರಾರಂಭವಾಗುವ ದಿನದವರೆಗೆ ಪ್ರತಿನಿತ್ಯ ಹಟ್ಟಿಯ ಮನೆಗಳ ಜನರು ಪ್ರತಿ ಮನೆಗೊಬ್ಬರಂತೆ ಮದುವೆ ಮನೆಗೆ ಬಂದು ಸೌದೆ ಒಡೆಯುತ್ತಾರೆ. ಸೌದೆ ಒಡೆಯಲು ದಳವಾಯಿ ಎಲ್ಲಾ ಮನೆಯವರಿಗೆ ಸುದ್ದಿ ಮುಟ್ಟಿಸುತ್ತಾನೆ. ಆಗ ಮನೆಯ ಯುವಕರು ಗಂಡು ಕೊಡಲಿಯನ್ನು ತೆಗೆದು

ಕೊಂಡು ಹಸಿ ಮರದ ಕೊಂಬೆಗಳನ್ನು ಸೀಳಾಗಿ ಒಡೆಯುತ್ತಾರೆ. ಆಗ ಸೌದೆ ಒಡೆದ ನಂತರ ಅವುಗಳನ್ನು ಒಣಗಿಸಿ ಒಂದೆಡೆ ಸೇರಿಸುತ್ತಾರೆ. ಸೇರಿಸಿದ ನಂತರ ಸೌದೆ ಒಣಗಿದ ಮೇಲೆ ಮದುವೆ ದಿನ ಆ ಸೌದೆಗಳನ್ನು ಉಪಯೋಗಿಸಿ ಅಡುಗೆ ತಯಾರಿ ಸುತ್ತಾರೆ. ಈ ಎಲ್ಲಾ ಕೆಲಸಗಳು ಹಟ್ಟಿಯ ಮುಖಂಡನ ನೇತೃತ್ವದಲ್ಲಿ ನಡೆಯುತ್ತದೆ. ಆದರೆ ಇತ್ತೀಚೆಗೆ ಈ ರೀತಿಯ ಸಮುದಾಯ ಸಹಭಾಗಿತ್ವದ ಸಾಮೂಹಿಕ ಸೌದೆ ಒಡೆಯುವ ಕೆಲಸವು ಕಣ್ಮರೆಯಾಗುತ್ತಿದೆ.

ಚಪ್ಪರ ಹಾಕುವ ಶಾಸ್ತ್ರ : ಮದುವೆಯ ದಿನ ಪ್ರಾರಂಭವಾದಾಗ, ಮೊದಲನೇ ಮದುವೆ ಶಾಸ್ತ್ರ ಪ್ರಾರಂಭವಾಗುವ ಮೊದಲು ಎರಡು ಮೂರು ದಿನಗಳಲ್ಲಿ ಚಪ್ಪರ ಹಾಕುವ ಶಾಸ್ತ್ರ ಮಾಡುತ್ತಾರೆ. ಅಂದರೆ ಕಾಡುಗೊಲ್ಲರು ಚಪ್ಪರ ಹಾಕಲು ಆಧುನಿಕ ರೀತಿಯ ಪೆಂಡಾಲ್‌ಗಳನ್ನು ಬಳಸದೇ ಪ್ರಕೃತಿಯಲ್ಲಿ ದೊರೆಯುವ ಗಿಡಮರಗಳನ್ನು ಉಪಯೊಗಿಸಿ ಚಪ್ಪರ ಹಾಕುತ್ತಾರೆ. ಚಪ್ಪರ ತಯಾರಿಸಲು ದೊಡ್ಡ ಮತ್ತು ಸಣ್ಣ ಪ್ರಮಾಣದ ಗಳ ಮತ್ತು ಕಡ್ಡಿಗಳನ್ನು ತರುತ್ತಾರೆ. ಇವುಗಳನ್ನು ಕಾಡಿನಲ್ಲಿ ಇಲ್ಲವೇ ಬೇರೆಯವರ ಮನೆಗಳಲ್ಲಿ ಸಂಗ್ರಹಿಸುತ್ತಾರೆ. ಗಳಗಳನ್ನು ಉದ್ದನೆಯ ಗುಂಡಿ ತೋಡಿ ನಾಲ್ಕು ಕಡೆ ಮತ್ತೆ ಸುತ್ತಲೂ ಚಪ್ಪಟೆಯಾಕಾರದಲ್ಲಿ ನೆಡುತ್ತಾರೆ. ಚಪ್ಪರದ ಮೇಲ್ಛಾವಣಿಗೆ ತೆಂಗಿನ ಗರಿಯಿಂದ ಹೊದಿಸುತ್ತಾರೆ. ಚಪ್ಪರದ ಕಂಬ ಅಥವಾ ಗಳಗಳ ಮೇಲ್ಕೈ ಕಾಣದಂತೆ ತೆಂಗಿನ ಗರಿಗಳನ್ನು ಹೆಣೆದು ಕಂಬದ ಸುತ್ತಲೂ ಸುತ್ತುತ್ತಾರೆ. ಮತ್ತೆ ಆ ಕಂಬಗಳಿಗೆ ಬಾಳೆ ಕಂದುಗಳನ್ನು ಕಟ್ಟುತ್ತಾರೆ. ಚಪ್ಪರದ ಚಾವಣಿಗೆ ಮಾವಿನ ಸೊಪ್ಪಿನ ಗುಂಚಲು ಗುಂಚಲು ಮಾಡಿ ನೇತು ಹಾಕುತ್ತಾರೆ. ಈಚೆಗದ ಹೂವಿನಿಂದ ತಯಾರಿಸಿದ ಹೂ ಗುಡ್ಡವನ್ನು ಚಪ್ಪರದ ಸುತ್ತಾ ಮತ್ತು ಮೇಲ್ಛಾವಣಿಗೆ ಕಟ್ಟುತಾರೆ. ಹಾಗೆಯೇ ಮುಹೂರ್ತಕ್ಕೆ ಎರಡು ಅತ್ತಿ ಮರದ ಸಣ್ಣ ಗಳಗಳನ್ನು ಮನೆಯ ಮುಂದೆ ಚಪ್ಪರದ ಮಧ್ಯದಲ್ಲಿ ನೆಡುತ್ತಾರೆ. ಚಪ್ಪರವು ದೊಡ್ಡದಾಗಿರಬಹುದು ಅಥವಾ ಚಿಕ್ಕದಾಗಿರಬಹುದು. ದೊಡ್ಡ ಚಪ್ಪರವನ್ನು ಹಾಕುವುದು ಗಂಡಿನ ಮನೆಯ ಅಥವಾ ಹೆಣ್ಣಿನ ಮನೆಯ ಅಂತಸ್ತಿನ ದ್ಯೋತಕವಾಗಿರುತ್ತದೆ. ಗಂಡಿನ ಮನೆಯವರು ಮದುವೆ ಮಾಡಿದರೆ ಚಪ್ಪರವು ತುಂಬಾ ಉದ್ದ ಅಥವಾ ದೊಡ್ಡದಾಗಿರುತ್ತದೆ. ಹೆಣ್ಣಿನ ಮನೆಯಲ್ಲಿ ಆರತಕ್ಷತೆ ಯಿದ್ದರೆ ಚಪ್ಪರವನ್ನು ಚಿಕ್ಕದಾಗಿ ಹಾಕುತ್ತಾರೆ. ಚಪ್ಪರವನ್ನು ಹಾಕಲು ಮದುವೆಯ ಮನೆಯವರು ಒಬ್ಬರೇ ಶ್ರಮಪಡಬೇಕಿಲ್ಲ. ಹಟ್ಟಿಯಲ್ಲಿರುವ ಮನೆಗೊಬ್ಬರಂತೆ ಸದಸ್ಯರು ಸ್ವಯಂ ಪ್ರೇರಿತವಾಗಿ ಬಂದು ಚಪ್ಪರ ತಯಾರಿಸುತ್ತಾರೆ. ಚಪ್ಪರ ತಯಾರಿಸುವಾಗ ಆ ಕೆಲಸವನ್ನು ಸಾಮೂಹಿಕವಾಗಿ ಸಂತೋಷದಿಂದ ಅನುಭವಿಸುತ್ತಾರೆ. ಆದರೆ ಇತ್ತೀಚೆಗೆ ಹಸಿರು ಚಪ್ಪರದ ಬದಲು ನಗರದಲ್ಲಿ ತಯಾರಿಸಿದ ಕೃತಕ ಚಪ್ಪರವನ್ನು ಬದಲಾವಣೆಯ ಸಂಕೇತವಾಗಿ ಬಳಸುವುದನ್ನು ಕಾಣಬಹುದು. ಆದರೂ ಸಾಂಕೇತಿಕ ವಾಗಿಯಾದರೂ ಸ್ವಲ್ಪ ಪ್ರಮಾಣದಲ್ಲಿ ಮದುವೆ ಮನೆಯ ಮುಂದೆ ಹಸಿರು ಚಪ್ಪರ ಹಾಕುವುದನ್ನು ತಮ್ಮ ಸಂಸ್ಕೃತಿಯ ದ್ಯೋತಕವಾಗಿ ಮುಂದುವರಿಸಿಕೊಂಡು ಬರುತ್ತಿದ್ದಾರೆ.

**ಅರುಣೆ ತರುವ ಶಾಸ್ತ್ರ :** ಅರುಣೆ ತರುವ ಶಾಸ್ತ್ರ ಕಾಡುಗೊಲ್ಲರ ಮದುವೆಗಳಲ್ಲಿ ಮುಖ್ಯವಾದಂತಹ ಶಾಸ್ತ್ರವಾಗಿದೆ. ಅರುಣೆ ಅಂದರೆ ಮಡಿಕೆ ಎಂದರ್ಥ. ಇವರ ಮದುವೆಗಳಲ್ಲಿ ಅರುಣೆಗೆ ಬಹಳ ಪ್ರಾಮುಖ್ಯತೆಯಿರುತ್ತದೆ. ಅರುಣೆಗಳನ್ನು ಇಡಲು ಮುಖ್ಯ ಚಪ್ಪರದ ಒಂದು ಮೂಲೆಯಲ್ಲಿ ಒಂದು ಸಣ್ಣ ಚಪ್ಪರವನ್ನು ಹಸಿರು ಎಲೆಗಳಿಂದ ನಿರ್ಮಿಸುತ್ತಾರೆ. ಈ ಚಪ್ಪರವನ್ನು "ಅರುಣೆ ಗುಡ್ಲು" ಎಂದು ಕರೆಯುತ್ತಾರೆ. ಅರುಣೆ ಗುಡ್ಲಿಗೆ ಅರುಣೆ ಇಡುವುದಕ್ಕೆ ಅರುಣೆ ತರುವವರ ತಂಡವು ತಯಾರಿ ನಡೆಸುತ್ತಾರೆ. ಒಂದು ಬುಟ್ಟಿಗೆ ಮೂರು ಸೇರು ಅಕ್ಕಿಯನ್ನೂ, ಇನ್ನೊಂದು ಐದು ಸೇರು ಅಕ್ಕಿ ನುಚ್ಚನ್ನು ಹಾಕುತ್ತಾರೆ. ಒಂದು ಬುಟ್ಟಿ ಅಥವಾ ಗುಡಾರಕ್ಕೆ ಒಂದು ಕಟ್ಟು ವೀಳ್ಯದೆಲೆ, ಎರಡು ಹಿಡಿ ಅಡಕೆ, ಒಂಬತ್ತು ಅಚ್ಚು ಬೆಲ್ಲ, ಒಂಬತ್ತು ಬೆಳ್ಳೊಳ್ಳಿ ಒಂಬತ್ತು ಅರಿಸಿನ ಕೊನೆ ಮುಂತಾದುವುಗಳನ್ನು ಹಾಕುತ್ತಾರೆ. ಜೊತೆಗೆ ಆ ಬುಟ್ಟಿಗೆ ಒಂದು ಸೇರು ಬೇಳೆ ಕಾಳು, ಒಂದು ತೆಂಗಿನಕಾಯಿ ಇಡುತ್ತಾರೆ. ಒಂದು ಕುಡಿಕೆ ಎಣ್ಣೆಯನ್ನು ತುಂಬಿ ಅದನ್ನು ಬುಟ್ಟಿಯಲ್ಲಿ ಇಡುತ್ತಾರೆ. ಇವಿಷ್ಟನ್ನು ಅರುಣೆ ತರುವವರು ತಲೆಯ ಮೇಲೆ ಹೊತ್ತುಕೊಂಡು ಹೋಗಬೇಕು. ಇವರಲ್ಲಿ ಕೆಲವು ಮಂದಿ ಪುರುಷರು ಮತ್ತು ಮಹಿಳೆಯರು ಇರುತ್ತಾರೆ. ಇವರು ಕಾಲ್ನಡಿಗೆಯಲ್ಲಿಯೇ ಹೋಗಬೇಕಾಗುತ್ತದೆ. ಅರುಣೆಗೆ ಹೋಗುವವರು ಪಕ್ಕದ ಊರಿನಲ್ಲಿರುವ ಕುಂಬಾರರ ಮನೆಗೆ ಹೋಗಿ ತಾವು ತೆಗೆದು ಕೊಂಡು ಹೋಗಿದ್ದ ವಸ್ತು ಅಥವಾ ಬುಟ್ಟಿಗಳಲ್ಲಿರುವ ಸರಕುಗಳನ್ನು ಸಾಂಕೇತಿಕ ವಾಗಿ ಮತ್ತು ಶಾಸ್ತ್ರೋಕ್ತವಾಗಿ ಕುಂಬಾರರಿಗೆ ಕೊಟ್ಟು ಅವುಗಳ ಬದಲಿಗೆ ಕುಂಬಾರರಿಂದ ಸಣ್ಣ ಮತ್ತು ದೊಡ್ಡ ಪ್ರಮಾಣದ ಮಡಿಕೆಗಳನ್ನು ತರುತ್ತಾರೆ.

ತಂದ ಮಡಿಕೆಗಳನ್ನು ಈಗಾಗಲೇ ತಯಾರಿಸಿದ ಅರುಣೆ ಗುಡ್ಲುವಿನಲ್ಲಿ (ಚಪ್ಪರ) ಇರಿಸುತ್ತಾರೆ. ಆ ಮಡಿಕೆಗಳ ಮೇಲೆ ಸುಣ್ಣ ಕೆಮ್ಮಣ್ಣಿನಿಂದ ಗೆರೆಗಳನ್ನು ಎಳೆಯುತ್ತಾರೆ. ಇದು ಬುಡಕಟ್ಟು ಚಿತ್ರಕಲೆಯನ್ನು ಬಿಂಬಿಸುವಂತಿರುತ್ತದೆ. ಈ ಮಡಿಕೆಗಳಿಗೆ ಐದು ಉತ್ತುತ್ತೆ ಕಾಯಿ, ಐದು ಅರಿಶಿನದ ಕೊನೆ, ಐದು ಬೆಲ್ಲದಚ್ಚು ಐದು ಬೆಳ್ಳುಳ್ಳಿ, ಐದು ಕೊಬ್ಬರಿ ಬಟ್ಟಲು ಇವೆಲ್ಲವನ್ನು ಹಾಕಿ ಅದರ ಮೇಲೆ ಅಕ್ಕಿಯನ್ನು ಮಡಿಕೆ ತುಂಬಾ ಹಾಕುತ್ತಾರೆ. ಒಂದು ವೀಳ್ಯದೆಲೆಯಲ್ಲಿ ಎಣ್ಣೆಯನ್ನು ಹಾಕಿ ಅದನ್ನು ಅಕ್ಕಿಯ ಮೇಲಿಟ್ಟು ಮಡಕೆಯ ಬಾಯನ್ನು ಬಿಳಿಯ ಬಟ್ಟೆಯಿಂದ ಕಟ್ಟುತ್ತಾರೆ. ಈ ರೀತಿ ತಯಾರಾದ ಮಡಕೆಯನ್ನು 'ಅರುಣೆ' ಎಂದು ಕರೆಯುತ್ತಾರೆ. ಇದಕ್ಕೆ ಪೂಜೆ ಮಾಡಿ ಅದನ್ನು ಅರುಣೆ ಗುಡ್ಲಿನಲ್ಲಿಟ್ಟು ಅದರ ಸುತ್ತ ಉಳಿದ ನಾಲ್ಕು ಮಡಿಕೆಗಳಿಗೂ ಸುಣ್ಣ ಬಳಿದು, ಹಸಿರು ಕೆಂಪು ಬಣ್ಣಗಳ ಗೆರೆಗಳನ್ನೆಳೆದು ಇಡುತ್ತಾರೆ. ಅರುಣೆ ಬಹಳ ಪವಿತ್ರವಾದುದು. ಅದಕ್ಕೆ ಯಾವ ರೀತಿಯ ಮೈಲಿಗೆಯೂ ಆಗಬಾರದೆಂಬ ಉದ್ದೇಶದಿಂದ ನಾಯಿ ಕಾಗೆ ಮೊದಲಾದುವು ಮುಟ್ಟದಂತೆ ನೋಡಿಕೊಳ್ಳಲು ಅಲ್ಲಿಯೇ ಕಾಯ್ದುಕೊಂಡಿರುವಂತೆ ಒಬ್ಬಳು ಅಜ್ಜಿಯನ್ನು ಅಲ್ಲೇ ಬಿಟ್ಟಿರುತ್ತಾರೆ (ಶಂಕರನಾರಾಯಣ,ಶೀ ನಂ:೧೯೮೭: ೧೫೩-೧೫೪). ಈ ಅರುಣೆಗಳು ಮದುವೆಯ ಉದ್ದಕ್ಕೂ ಪವಿತ್ರವೆನಿಸಿಕೊಳ್ಳುತ್ತವೆ.

ಅರುಣೆಗಳಿಗೆ ಎಷ್ಟು ಪ್ರಾಮುಖ್ಯತೆ ಎಂದರೆ ಒಂದು ಸಣ್ಣ ಅರುಣೆಗೋಸ್ಕರ ಮದುವೆ ಸಂದರ್ಭದಲ್ಲಿ ನ್ಯಾಯ ಪಂಚಾಯಿತಿಗಳು ಜರುಗುತ್ತಿದ್ದವು. ಇದು ಬುಡಕಟ್ಟು ಸಂಸ್ಕೃತಿಯ ಅನನ್ಯತೆಯನ್ನು ತೋರಿಸುತ್ತದೆ.

ಹಾಲೊತ್ತುವ ಶಾಸ್ತ್ರ : ಹಾಲೊತ್ತುವ ಶಾಸ್ತ್ರವು ಮದುವೆಯ ಮೊದಲನೇ ದಿನದ ಶಾಸ್ತ್ರವಾಗಿದ್ದು, ಗಂಡಿಗೂ ಮತ್ತು ಹೆಣ್ಣಿಗೂ ಮೊಟ್ಟ ಮೊದಲ ಶಾಸ್ತ್ರವಾಗಿದೆ. ಹಾಲೊತ್ತುವ ಶಾಸ್ತ್ರಕ್ಕೆ ಮದುವೆ ಮನೆಯವರು ತಯಾರಿ ನಡೆಸುತ್ತಾರೆ. ಊರಿನ ದಳವಾಯಿಯು ಹಾಲೊತ್ತುವ ಶಾಸ್ತ್ರವಿದೆ ದೇವಸ್ಥಾನದ ಹತ್ತಿರ ಎಲ್ಲರೂ ಬನ್ನಿ ಎಂದು ಮನೆ ಮನೆಗಳಿಗೆ ಸುದ್ದಿ ಮುಟ್ಟಿಸುತ್ತಾನೆ. ದೇವಸ್ಥಾನ ಪೂಜಾರಿ ಮತ್ತು ಊರಿನ ಪ್ರಮುಖರು ಕೂಡಿ ದೇವಸ್ಥಾನ ಮುಂಭಾಗ ಕರಿಕಂಬಳಿಯನ್ನು ಹಾಸಿ ಅದರ ಮೇಲೆ ಅಕ್ಕಿ ಕಾಳಿನಿಂದ ಹಸೆ ಬರೆಯುತ್ತಾರೆ. ಈ ಹಸೆಯು ಚಿತ್ತ ಚಿತ್ತಾರವಾಗಿದ್ದು ಬುಡಕಟ್ಟು ಕಲೆಯನ್ನು ನೆನಪಿಸುವಂತಿರುತ್ತದೆ. ಕರಿಕಂಬಳಿಯ ನಾಲ್ಕು ಕಡೆ ವೀಳ್ಯದೆಲೆ ಅಡಿಕೆ ಮತ್ತು ಬೆಲ್ಲದ ಉಂಡೆಗಳನ್ನು ಇಡುತ್ತಾರೆ. ಒಂದು ಕಳಶಕ್ಕೆ ಅಡಿಕೆಯ ಹೊಂಬಾಳೆ ಮತ್ತು ವೀಳ್ಯದೆಲೆಯನ್ನು ಇಟ್ಟು ಪೂಜೆ ಮಾಡುತ್ತಾರೆ. ಒಂದು ದೊಡ್ಡ ಮಂಗಳಾರತಿ ತಟ್ಟೆಗೆ ಅಕ್ಕಿ ಹಾಕಿ ಅದರೊಳಗೆ ಕಳಶ ಇಡುತ್ತಾರೆ. ಕರಿ ಕಂಬಳಿಯ ಮಧ್ಯಕ್ಕೆ ಒಂದು ಪವಿತ್ರವಾದ ಮಣೆಯನ್ನು ಇಡುತ್ತಾರೆ. ಗಂಡಿನ ಮನೆಯ ಮದುವೆಯಾಗಿದ್ದರೆ ಗಂಡನ್ನು ಆ ದೇವಸ್ಥಾನದ ಹತ್ತಿರ ಕರೆ ತಂದು ಅಲ್ಲಿ ನೆರೆದಿರುವ ಎಲ್ಲಾ ಹಿರಿಯರ ಕಾಲಿಗೆ ನಮಸ್ಕಾರ ಮಾಡುವಂತೆ ಹೇಳುತ್ತಾರೆ. ಗಂಡು ತನ್ನ ಮದುವೆಗೆ ಸಂಬಂಧಿಸಿದಂತೆ ಮೊದಲನೇ ಶಾಸ್ತ್ರವಾದ್ದರಿಂದ ಎಲ್ಲಾ ಹಿರಿಯರ ಕಾಲಿಗೆ ನಮಸ್ಕರಿಸಿ, ತಂದೆ ತಾಯಂದಿರ ಕಾಲಿಗೆ ನಮಸ್ಕರಿಸಿ ಮತ್ತು ಗೌಡ– ಪೂಜಾರಿಯ ಕಾಲಿಗೆ ನಮಸ್ಕರಿಸುತ್ತಾನೆ. ಎಲ್ಲರಿಗೂ ನಮಸ್ಕಾರಿಸಿದ ನಂತರ ವೀಳ್ಯದೆಲೆಯನ್ನು ಎರಡೂ ಕೈಗಳ ಬೊಗಸೆಯಲ್ಲಿ ಇಟ್ಟುಕೊಂಡು ಕರಿ ಕಂಬಳಿಯ ನಾಲ್ಕು ದಿಕ್ಕಿಗೂ ಪ್ರದಕ್ಷಿಣೆ ಹಾಕುತ್ತಾನೆ. ಅದಕ್ಕೆ ಒಬ್ಬರ ತೀರ್ಥವನ್ನು ಹಾಕುತ್ತಿರುತ್ತಾರೆ. ಹೀಗೆ ತೀರ್ಥವನ್ನು ನಾಲ್ಕು ದಿಕ್ಕಿಗೂ ಹಾಕಿ ಬಲಗಾಲ ಮುಂದಿಟ್ಟು ಕರಿ ಕಂಬಳಿಯ ಮಧ್ಯದಲ್ಲಿ ಹಾಕಿರುವ ಮಣೆಯ ಮೇಲೆ ಕೂರಿಸುತ್ತಾರೆ. ಆಗ ಸಮುದಾಯದ ಹಿರಿಯ ಮಹಿಳೆಯರು ಆ ಹಟ್ಟಿಯ ಅಥವಾ ಗಂಡಿನ ಕುಲ ಮತ್ತು ದೇವರ ಕುರಿತು ಸೋಬಾನೆ ಪದವನ್ನು ಹಾಡಲು ಪ್ರಾರಂಭ ಮಾಡುತ್ತಾರೆ. ಮೊದಲು ದೇವರ ಪೂಜಾರಿಯು ತಲೆಗೊತ್ತುವ ಶಾಸ್ತ್ರವನ್ನು ಪ್ರಾರಂಭ ಮಾಡುತ್ತಾನೆ. ಆಗ ಒಬ್ಬ ಮಹಿಳೆಯು ಒಂದು ಕಂಚಿನ ಗರಿಗಳದಲ್ಲಿ ನೀರು ಬೆರೆಸಿದ ಹಾಲನ್ನು ಹಿಡಿದುಕೊಂಡು ನಿಂತಿರುತ್ತಾಳೆ. ಪೂಜಾರಿ – ಗೌಡರಾದಿಯಾಗಿ ಒಬ್ಬರಾಗಿ ಅಲ್ಲಿ ಇಟ್ಟಿರುವ ಕಳಶಕ್ಕೆ ಅಕ್ಷತೆಯನ್ನು ಹಾಕಿ ಅಂಗೈಯಲ್ಲಿ ಹಾಲನ್ನು ಅದ್ದಿಕೊಂಡು ಗಂಡಿನ (ಹೆಣ್ಣಾಗಿದ್ದರೆ ಹೆಣ್ಣಿನ ತಲೆಗೆ) ತಲೆಗೆ ಮೂರು ಸಾರಿ ಮುಂದಿನಿಂದ ಹಿಂದಿನವರೆಗೆ ಒತ್ತುತ್ತಾರೆ. ಇದನ್ನೇ ಹಾಲೊತ್ತುವ ಶಾಸ್ತ್ರ ಎಂದು ಕರೆಯುತ್ತಾರೆ. ಪೂಜಾರಿ ಮತ್ತು ಗೌಡ ಹಾಲು ಹೊತ್ತಿದ ನಂತರ, ತಂದೆ ತಾಯಂದಿರು ಹಾಲೊತ್ತುತ್ತಾರೆ. ನಂತರ

ಸಂಬಂಧಿಕರು ಹಾಗೆಯೇ ಹಟ್ಟಿಯ ಜನರು ಒಬ್ಬೊಬ್ಬರಾಗಿ ಹಾಲೊತ್ತುವ ಶಾಸ್ತ್ರವನ್ನು ಮುಗಿಸುತ್ತಾರೆ. ಅತ್ತ ಕಡೆ ಹೆಣ್ಣಿನ ಊರಿನಲ್ಲಿಯೂ ಇದೇ ರೀತಿ ಹಾಲೊತ್ತುವ ಶಾಸ್ತ್ರವನ್ನು ಗಂಡಿಗೆ ಮಾಡಿದ ಹಾಗೆಯೇ ಮಾಡುತ್ತಾರೆ.

**ಎದುರುಗೊಳ್ಳುವ ಶಾಸ್ತ್ರ :** ಮದಲಿಂಗನ ಶಾಸ್ತ್ರವಾದ ಮೇಲೆ ಮಾರನೆಯ ದಿನ ಧಾರೆ ಶಾಸ್ತ್ರವಿರುತ್ತದೆ. ಅದಕ್ಕೆ ಮೊದಲು ಗಂಡಿನ ಮನೆಯಲ್ಲಿ ಮದುವೆಯಿದ್ದರೆ, ಹೆಣ್ಣಿನ ಮನೆಯವರು ತಮ್ಮ ಹಟ್ಟಿಯ ದೇವಸ್ಥಾನದ ಮುಂದ ಹೆಣ್ಣಿಗೆ ಹಾಲೊತ್ತುವ ಶಾಸ್ತ್ರ ಮುಗಿಸುತ್ತಾರೆ. ನಂತರ ಅಂದೇ ಗಂಡಿನ ಊರಿನ ಕಡೆ ಎತ್ತಿನ ಗಾಡಿಯಲ್ಲಿ ಪ್ರಯಾಣ ಬೆಳೆಸುತ್ತಾರೆ. ಸಂಜೆಯ ವೇಳೆಗೆ ಊರಿನ ಹೊರಗಡೆಯಿರುವ ಗುಡಿ ಶಾಲಾವತಾರ ಅಥವಾ ಯಾವುದಾದರೂ ಸಮುದಾಯ ಭವನವಿದ್ದರೆ ಹೆಣ್ಣು ಮತ್ತು ಹೆಣ್ಣಿನ ಜೊತೆ ಬಂದಿರುವ ಸಂಬಂಧಿಕರು ಹಾಗೂ ಊರಿನ ಜನರನ್ನು ಅಲ್ಲಿ ಬಿಡುತ್ತಾರೆ. ಆಗ ಹೆಣ್ಣಿನ ಕಡೆಯವರು ಯಾರೂ ಸಹ ಊರನ್ನು ಪ್ರವೇಶಿಸುವಂತಿಲ್ಲ. ಅದಕ್ಕೆ ಗಂಡಿನ ಕಡೆಯವರು ಔಪಚಾರಿಕವಾಗಿ ಆಹ್ವಾನಿಸಬೇಕಾಗುತ್ತದೆ. ಈ ಆಹ್ವಾನ ಹೇಗೆ ನಡೆಯುತ್ತದೆ ಎಂದರೆ ಗಂಡಿನ ಕಡೆಯವರು ಹೆಣ್ಣನ್ನು ಎದುರು ಗಾಣಲು ಅಂದರೆ ಹೆಣ್ಣನ್ನು ಹಟ್ಟಿಯ ಒಳಗೆ ಬರಮಾಡಿಕೊಳ್ಳಲು ವಾದ್ಯಗಳ ಸಮೇತ ಬರುತ್ತಾರೆ. ಹಾಗೆ ಬರುವಾಗ ಹೆಂಗಳೆಯರು ಆರತಿ ಸಮೇತ ಬರಬೇಕಾಗುತ್ತದೆ. ಜೊತೆಗೆ ಬರುವಾಗ ಹೆಣ್ಣಿನ ಸಂಬಂಧಪಟ್ಟ ಅಲಂಕಾರಿಕ ಸರಕು ಸರಂಜಾಮುಗಳನ್ನು ತರಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ, ಬಾಚಣಿಗೆ, ಸೀರೆ, ಕುಂಕುಮ, ಹೂವು, ಅಕ್ಕಿ ಮೊದಲಾದುವುಗಳು. ಗಂಡಿನ ಕಡೆಯವರು ಹೆಣ್ಣಿನ ಕಡೆಯ ಮುಖಂಡರನ್ನು (ಗೌಡ ಪೂಜಾರಿಯೂ ಸೇರಿದಂತೆ) ಸಾಲಾಗಿ ಕುಳ್ಳಿರಿಸಿ ಕೊರಳಿಗೆ ಹೂಮಾಲೆಯನ್ನು ಹಾಕುತ್ತಾರೆ. ನಂತರ ಬೆಲ್ಲದಿಂದ ತಯಾರಿಸಿದ ಶರಬತ್ತನ್ನು ಕೊಡುತ್ತಾರೆ. ಅಲ್ಲಿಯೂ ಸಹ ಒಂದು ಸಣ್ಣ ಪೂಜೆ ನಡೆಯುತ್ತದೆ. ಪೂಜೆ ನಡೆದು ಮದುವಣಗಿತ್ತಿಯನ್ನು ಎದುರುಗೊಂಡು ಊರಿನೊಳಕ್ಕೆ ವಾದ್ಯ ಮೇಳಗಳೊಂದಿಗೆ ಕರೆತರುತ್ತಾರೆ. ಹೆಣ್ಣಿನ ಅಕ್ಕ ಪಕ್ಕದಲ್ಲಿ ಹೆಂಗಳೆಯರು ಆರತಿಯನ್ನು ಹಿಡಿದಿರುತ್ತಾರೆ. ಒಂದು ರೀತಿಯ ಮೆರವಣಿಗೆಯೋಪಾದಿಯಲ್ಲಿ ಈ ಒಂದು ಕೆಲಸ ನಡೆದು ನಂತರ ಮದುಮಗಳನ್ನು ಯಾರಾದರು ಒಬ್ಬರು ಮನೆಗೆ ಅಥವಾ ಮದುವೆ ಮನೆಗೆ ಕರೆತರುತ್ತಾರೆ. ಮದುವೆ ಮಂಟಪಕ್ಕೆ ಕರೆ ತರದೆ ಬೇರೆಯವರ ಮನೆಯಲ್ಲಿ ವಧು ಮತ್ತು ವಧುವಿನ ಜೊತೆ ಬಂದಿರುವ ಸಂಬಂಧಿಕರನ್ನು ಅಲ್ಲಿ ಬಿಡುತ್ತಾರೆ. ಒಂದು ವೇಳೆ ಮದುವೆಯು ಹೆಣ್ಣಿನ ಮನೆಯಲ್ಲಿ ನಡೆದರೆ ಗಂಡಿನ ಮನೆಯವರು ಹಾಲೊತ್ತುವ ಶಾಸ್ತ್ರವನ್ನು ಮುಗಿಸಿಕೊಂಡು ವಧುವಿನ ಊರಿನ ಕಡೆ ಪ್ರಯಾಣ ಬೆಳೆಸುತ್ತಾರೆ. ಹಾಗೆಯೇ ಮದುವಣಗಿತ್ತಿಯ ಮನೆಯವರು ಈ ಹಿಂದೆ ಹೇಳಿದ ಹಾಗೆ ಗಂಡನ್ನು ಮತ್ತು ಗಂಡಿನ ಕಡೆಯವರನ್ನು "ಎದುರುಗೊಂಡು" ಊರಿನೊಳಗೆ ಬರಮಾಡಿಕೊಳ್ಳುತ್ತಾರೆ.

ಇದು ಕಾಡುಗೊಲ್ಲರಲ್ಲಿ ನಡೆಯುವ "ಎದುರುಗೊಳ್ಳು" ಶಾಸ್ತ್ರವಾಗಿದೆ. ಪ್ರಾದೇಶಿಕವಾಗಿ ಸ್ವಲ್ಪ ಮಟ್ಟಿಗೆ ಭಿನ್ನತೆ ಇದೆಯಾದರೂ ಹೆಚ್ಚು-ಕಡಿಮೆ ಈ ಸಮುದಾಯದ ಎಲ್ಲಾ ಜನರು ಈ ರೀತಿಯ ಎದುರುಗೊಳ್ಳುವ ಶಾಸ್ತ್ರವನ್ನು ಮುಗಿಸುತ್ತಾರೆ.

**ಮದುವೆ ಶಾಸ್ತ್ರಗಳಲ್ಲಿ ಮಹಿಳೆಯರು ಹಾಡುವ ಪದಗಳು**

ಒಂದೊಂದು ಚೆಂದದಲಿ ಲಿಂಗಾನ ನೆನೆದೇನು
ಮಂದಲಗಿರಿ ತುಳಸಿ ಮಾಲೆವರ । ಮೂಡಿಬರುವ
ಚಂದ್ರನ ಪಾದ ನೆನೆದೇನು ॥
ಯಾವ್ಯಾವ ಚಂದಾದ ದ್ಯಾವಾರ ನೆನೆದೇನು
ದೇವಗಿರಿ ತುಳಸಿ ಮಾಲೆವರ । ಮೂಡಿಬರುವ
ಸೂರಿದನ ಪಾದ ನೆನೆದೇನು ॥
ಹೊತ್ತು ಹುಟ್ಟೋ ಹೊತ್ತಲಿ ಅಪ್ಪಾನ ನೆನೆದೇನು
ಲಕ್ಕಸದಾವೀನ ಮೈಗಾರ । ಎತ್ತಯ್ಯನ
ಹೊತ್ತುಟ್ಟೋ ಹೊತ್ತಲಿ ನೆನೆದೇನು ॥
ಎಲ್ಲರಿಗಿನ್ನ ಬಲ್ಲಿದನ ನೆನೆದೇನ
ಕಲ್ಲೊತ್ತಿಲಿರುವ ಕದಲೀಯ । ಕಾಟಮಲಿಂಗನ
ಬಿಲ್ಲಿನ ಗೊಂಡೇವ ನೆನೆದೇನು ॥
ಯಾತ್ಯಾತಕ ಮುನ್ನ ಅತಾನ ನೆನೆದೇನು
ಕಾತೊತ್ತಿಲಿರುವ ಕರುಣೀಯ । ಜುಂಜಣ್ಣಾನ
ಬಾಕಿನ ಗೊಂಚೇವ ನೆನೆದೇನು
ಹಾಲು ತುಪ್ಪಗಳ ನಾರೇರು ಹಿಡಿದಾರೆ
ನಾರೇರು ಹಿಡಿದು ನಡೆದಾರೆ । ನಿಂಗಣ್ಣಾನ
ನಾರೇರು ಹಿಡಿದು ನಡೆದಾರೆ ॥
ಎತ್ತ ತುಪ್ಪಗಳ ನಿಸ್ತೇರು ಹಿಡಿದಾರೆ
ನಿಸ್ತೇರು ಹಿಡಿದು ನಡೆದಾರು । ಈರಣ್ಣಾನ
ಮುತ್ತಿನ ತ್ವಾರಣವು ಎದುರೀಗೆ ॥
ಹಾಲಾಗೋತ್ತಣ್ಣ ಬಾಗ್ಲಾಗೆ ಬಳುಕಾನೆ
ನಿವೇನು ಕೂಡಿರೆ ನಿಸ್ಯಾರು । ದೊಡ್ಡಣ್ಣಾಗ
ವರು ಅಂದಲವಾ ಕೂಡಿರಣ್ಣಾ ॥
ಅಗ್ಗವಣಿ ಮೀಲಾ ಬಾರೋ ದೊಡ್ಡೋರ ಮೊಮ್ಮಗನೆ
ಮೊಗ್ಗಲು ಚಿನ್ನಾದ ಕಟ್ಟೇಣೆಗಿಟ್ಟು । ಮುತ್ತಿನ ಚೆಂಡು
ಅಟ್ಯಾಡುತ ಬಾರೋ ಜಲುಪಾಕೆ ॥

ಅವಳಾದ ಹರಿನೀರು ಆಲೋದಪನ್ನೀರು
ದೊರೆಗಾಳಿರುವುದೇ ದೊಡ್ಡೇರಿ । ಪನ್ನೀರು
ಮರಿಯಾನೆ ಮೇಲೆ ತರಿಸ್ಯಾರೆ ॥
ಕೆಸರಿಲ್ಲದ ತಾವು ಕೆಸರ‍್ಯಾಕೆ ಆದಾವೆ
ಹೆಸರಿಗೆ ದೊಡ್ಡೋರ ಮಗ ಮಿಂದ । ಸಿರಿಯಣ್ಣನೆ
ಕುಸುಲದ ಚತ್ರಿಕೆ ನೆರಳಾಗಿ ॥
ಕಂಬಳಿಯಾ ಸೀರೆ ರಂಬೇಸರ ಕರಸೀರೆ
ದುಂಡುಮಲ್ಲಿಗೆ ಹರಡೀರಿ । ನಿಮ್ಮನಿಯ
ಕಂದಗೊಮಾರ ಮದುಮಗ ॥
ಜಾಡೀಯ ಹಾಸಿರೆ ಜಾಣೇರ ಕರಸೀರೆ
ಜಾಜಿಮಲ್ಲಿಗೆ ಹರಡೀರಿ । ಹರಡೀರಿ
ನಿಮ್ಮನಿಯ ಬಾಲಗೊಮಾರ ಮದುಮಗ ॥
ನೆಲಕ್ಕೆ ಹಸೆಯ ಬಲ್ಲಮ್ಮ ನೀ ಬರೆಯ
ಬೆಲ್ಲದಚ್ಚುಗಳ ಕೊರೆದಂಗೆ । ಹಸೆಯಮ್ಯಾಲೆ
ಮಲ್ಲಿಗದೂವು ಯಾರೆ ಬರದೋರು ॥
ಅಕ್ಕಿಯಸೆ ಬರೆದು ಪಕ್ಷಿ ಪಾತೂವಾಡಿ
ಉತ್ತಾರನಾದ ಕತೆಯೇಳಿ । ಈ ಪಸೆಯ
ಮತ್ಯಾವ ಜಾಣೆ ಬರೆದಾಳು ॥
ಚಪ್ಪರಕೋಗೋರು ವಪ್ಪಾವುಳ್ಳಾಳುಗಳು
ಚಪ್ಪಲಿಗೋಡಲಿ ಎಗಲಮೇಲೆ । ಕರಿಯಣ್ಣ
ವಪ್ಪಾವುಳ್ಳಾಳ ಕಳಿವ್ಯಾನೆ ॥
ಹಂದರಕೋಗ್ತೋರು ಅಂದವುಳ್ಳಣ್ಣಗಳು
ಗಂಡು ಗೋಡಲಿ ಅವರ ಹೆಗಲಮ್ಯಾಲೆ । ಕರಿಯಣ್ಣ
ಅಂದಾವುಳ್ಳಳ ಕಳಿವ್ಯಾನೆ ॥
ಅಂದಾಲದ ಮುಂದಾಕ ರಂಬೇಯ ಕರಸೀರೆ
ದುಂಡುಮಲ್ಲಿಗೆಯ ಮಡಿಸಿರೆ । ನಾವು ತಂದ
ಗಂಜೀಯ ಸೀರೆ ಉಡಿಸೀರೆ ॥
ಚಿಕ್ಕಪ್ಪ ತನಮಗಳ ರಟ್ಟು ಮ್ಯಾಲೆ ಕುಂಡಿರಿಸಿ
ಬೆಟ್ಟಿಲುವುದಕ ವರಸೊತ । ಎಣುಮಕ್ಕಳು
ವುಟುಬಾರದೇಳು ಜಲುಮಾಕಂದ ॥
ಅಂದರದ ಸುತ್ತ ಮುತ್ತ ದುಂಡು ಮತ್ತು ಚೆಲ್ಲೀದಂಗೆ
ಗಂಡನಡಗಡಿಗೆ ಸತಿಯೋಳು । ಕಂತ್ಯೆದಾಳೆ
ದುಂಡು ಮುತ್ತಿನ ರಾಸಿ ಹೊಯ್ದಂಗೆ ॥

ಬಂಟೇಯ ಮ್ಯಾಲೆ ಕೆಂಡ ಜಂಗಮ ಬಂದ
ಮಂಟಪದೊಳಗೆ ಸಿವಬಂದ । ಅವರಿಬ್ಬರಿಗೆ
ಸಂಪತ್ತಿಲ್ಲಿ ಧಾರೆಯರುದಾರೆ ॥
ಆ ಕೈಯ್ಯಾಗಳಾಲು ಈ ಕೈಗೆ ಹೊಯ್ಯಗ
ಸೂರಿದಗೆ ಬಾಸೆ ಕೊಡುವಾಗ । ತಾಯಿತಂದೆ
ಬಾಡ್ಯಾರೆ ಬಾಳೆಸುಳಿಯಂಗ ॥
ಅಂಗ್ಯೆಯ್ಯಾಗಳಾಲು ಮುಂಗ್ಯೆಗೆ ಹೊಯ್ಯಾಗ
ಚಂದನಿಗೆ ಭಾಷೆ ಕೊಡುವಾಗ । ತಾಯಿತಂದೆ
ಕಂದ್ಯಾರ ಬಾಳೆ ಸುಳಿಯಂಗೆ ॥

*(ಕೃಷ್ಣಮೂರ್ತಿ ಹನೂರು:೧೯೯೮: ೮೨೭-೮೨೮).*

**ಧಾರೆ :** ಮದಲಿಂಗನ ಶಾಸ್ತ್ರದ ನಂತರದ ಬಿಡದಿ ಮನೆಯಲ್ಲಿ ಗಂಡಿಗೆ, ಹೆಣ್ಣಿನ ಮನೆಯಲ್ಲಿ ಹೆಣ್ಣಿಗೆ ಅರಿಶಿನ ಎಣ್ಣೆ ಹಚ್ಚಿ ನೀರು ಹಾಕುತ್ತಾರೆ. ಹೆಣ್ಣಿಗೆ ಬಿಳಿ ಸೀರೆಯನ್ನು ಗಂಡಿಗೆ ಬಿಳಿ ಬಟ್ಟೆಯನ್ನು ತೊಡಿಸುತ್ತಾರೆ. ಹೆಣ್ಣಿನ ಮನೆಯಿಂದ ಹೆಣ್ಣನ್ನು, ಬಿಡದಿಯಿಂದ ಗಂಡನ್ನು ಮದುವೆಯ ಮನೆಗೆ ಕರೆತರುತ್ತಾರೆ. ಗಂಡನ್ನು ಗಂಡಿನ ಚಪ್ಪರದಲ್ಲಿ ಕೂರಿಸಿ ಹೆಣ್ಣನ್ನು ಚಪ್ಪರದ ಪಕ್ಕದಲ್ಲಿರುವ ಅರುಣೆ ಗುಡ್ಲಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಅವಳು ಅರುಣೆಯನ್ನು ಪೂಜೆ ಮಾಡಿ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಹೆಣ್ಣಿನ ಚಪ್ಪರದ ಕೆಳಗೆ ಇಡುತ್ತಾಳೆ. ಅರುಣೆಯ ಸುತ್ತ ನಾಲ್ಕು ಮಡಕೆಗಳನ್ನು ಇಡುತ್ತಾರೆ. ಹೆಣ್ಣನ್ನು ಚಪ್ಪರದಲ್ಲಿ ಕೂರಿಸಿ, ಅವಳಿಗೆ ಮೂರು ಹಸೆಯನ್ನು ಗಂಡಿಗೆ ನಾಲ್ಕು ಹಸೆಯನ್ನು ಹಚ್ಚುತ್ತಾರೆ. ಹೆಣ್ಣನ್ನು ಧಾರೆಯ ಹಸೆಯ ಮೇಲೆ ಕೂರಿಸಿ ಸಂಬಂಧಿಕರೆಲ್ಲರೂ ಅವಳ ತಲೆಗೆ ಹಾಲನ್ನು ಹಾಕುತ್ತಾರೆ. ಆ ನಂತರ ಗಂಡನ್ನು ಹೆಣ್ಣಿನ ಚಪ್ಪರಕ್ಕೆ ಕರೆತಂದು ಹೆಣ್ಣಿನ ಪಕ್ಕದಲ್ಲಿ ಕೂರಿಸುತ್ತಾರೆ. ಅಲ್ಲಿ ಸೇರಿದವರೆಲ್ಲರೂ ಬೀರಕ್ಕಿಯನ್ನು ಇಬ್ಬರ ಮೇಲೆ ಹಾಕುತ್ತಾರೆ. ಬೀರಕ್ಕಿ ಎಂದರೆ ಅಕ್ಕಿಯ ಕಾಳು ಅಥವಾ ಭತ್ತವಾಗಿರುತ್ತದೆ. ಹೆಣ್ಣಿನವರು ಗಂಡಿನವರ ಮೇಲೆ, ಗಂಡಿನವರು ಹೆಣ್ಣಿನವರ ಮೇಲೆ ಬೀರಕ್ಕಿಯನ್ನು ಬೀರುತ್ತಾರೆ. ಇದಾದ ನಂತರ ಪೂಜಾರಿ, ಗೌಡ ಮತ್ತು ಹಿರಿಯರು ಸೇರಿ "ಮೂರುಕಟ್ಟೆಯ ಮನೆಯವರು ಧಾರೆಗೆ ಅಪ್ಪಣೆ ಕೊಡಬೇಕು" "ಮೂರುಕಟ್ಟೆ ಮುನ್ನೂರು ಸಾವಿರ ಕುಲ ಹತ್ತು ಕುಲ ಸ್ವಾಮಿಗಳು ಗೌಡ ಪೂಜಾರ್‍ರೆ ಪಂಚಮುಖಿ ದೈವದವರೇ ತಾಳಿ ಕಟ್ಟೋಕೆ ಅಪ್ಪಣೆ ಕೊಡಿ ಸ್ವಾಮಿ" (ಕರಿನಾಗಪ್ಪ ಪೆನ್ನೋಬನಹಳ್ಳಿ ಗೊಲ್ಲರಹಟ್ಟಿ) ಎಂದು ಅಲ್ಲಿ ಸೇರಿದ್ದವರನೆಲ್ಲಾ ಕೇಳುತ್ತಾರೆ. ಗಂಡನ್ನು ಸೂರ್ಯನ ಕಡೆ ಮುಖ ಮಾಡಿ ಕೂರಿಸಿ ಅವನಿಗೆ ಹಾಲು, ನೀರು ಬಿಡುತ್ತಾರೆ. ಗಂಡಿನ ಕೈಯಿನ ಕೆಳಗೆ ಹೆಣ್ಣು ಬೊಗಸೆ ಒಡ್ಡಿರುತ್ತಾಳೆ. ತನ್ನ ಕೈಗೆ ಬಿಟ್ಟ ಹಾಲು ನೀರನ್ನು ಗಂಡು ಹೆಣ್ಣಿನ ಕೈಗೆ ಬಿಡುತ್ತಾನೆ. ಆನಂತರ ಹೆಣ್ಣು ತನ್ನ ಬೊಗಸೆಯ ಹಾಲು ನೀರನ್ನು ಗಂಡಿನ ಕೈಗೆ ಬಿಡುತ್ತಾಳೆ. ಆನಂತರ ಗಂಡು ಹೆಣ್ಣನ್ನು ಎಬ್ಬಿಸುತ್ತಾರೆ. ಅವರಿಬ್ಬರ

ಮಧ್ಯೆ ಬಿಳಿ ಪಂಚೆಯಿಂದ ತೆರೆಯನ್ನು ಹಿಡಿಯುತ್ತಾರೆ. ಸಮುದಾಯದ ಹಿರಿಯ ಮಹಿಳೆ ತಟ್ಟೆಯನ್ನು ಹೆಣ್ಣಿನ ತಲೆಯ ಮೇಲೆ ಹಿಡಿಯುತ್ತಾಳೆ. ಮೂವರು ಮುತ್ತೈದೆಯರು ಗಡಿಗೆಗಳಲ್ಲಿ ತುಂಬಿರುವ ನೀರನ್ನು ಎತ್ತಿ "ಸೋಬಾನ, ಸೋಬಾನ, ಸೋಭಾನ" ಎಂದು ಹೇಳುತ್ತಾ ಸ್ವಲ್ಪ ಸ್ವಲ್ಪವಾಗಿ ಹುಯ್ಯುತ್ತಾರೆ. ಹರಿವಾಣದ ಮೇಲೆ ಬಿದ್ದ ನೀರು ಹೆಣ್ಣಿನ ತಲೆಯ ಮೇಲೆ ಬೀಳುತ್ತದೆ. ಅನಂತರ ಅಲ್ಲಿ ಸೇರಿರುವ ಹಿರಿಯರೆಲ್ಲರೂ ಹಾಲನ್ನು ಹರಿವಾಣದ ಮೇಲೆ ಸುರಿಯುತ್ತಾರೆ. ಇದೇ ರೀತಿಯಲ್ಲಿ ಗಂಡನ್ನು ಮಣೆಯ ಮೇಲೆ ಕೂರಿಸಿ ಹಾಲು ತುಪ್ಪ ಹಾಕುತ್ತಾರೆ. ಇದಾದ ನಂತರ ಎಲೆ ಅಡಿಕೆ ಹೂವು ಹಣ್ಣುಗಳನಿಟ್ಟು ಬಂದು ಹರಿವಾಣದಲ್ಲಿ ತಾಳಿಯನ್ನಿಟ್ಟುಕೊಂಡು, ಅದನ್ನು ಎಲ್ಲರಿಂದಲೂ ಮುಟ್ಟಿಸಿ ಅದನ್ನು ವರನ ಕೈಗೆ ಕೊಡುತ್ತಾರೆ. "ಸೂರ್ಯ ಚಂದ್ರರ ಸಾಕ್ಷಿಯಾಣೆ, ಗುರುಹಿರಿಯರ ಪಾದಸಾಕ್ಷಿಯಾಣೆ, ನಮ್ಮ ತಂದೆ–ತಾಯಿ ಪಾದಸಾಕ್ಷಿಯಾಣೆ, ನಾನೇ ಗಂಡ ನೀನೇ ಹೆಂಡತಿ" ಎಂದು ಗಂಡು ಹೇಳುತ್ತಾನೆ. ಹಾಗೆಯೇ "ಸೂರ್ಯಚಂದ್ರರ ಸಾಕ್ಷಿಯಾಣೆ, ಗುರು ಹಿರಿಯರ ಪಾದಸಾಕ್ಷಿಯಾಣೆ, ನಮ್ಮ ತಂದೆ ತಾಯಿ ಪಾದ ಸಾಕ್ಷಿಯಾಣೆ, ನೀನೆ ಗಂಡ ನಾನೇ ಹೆಂಡತಿ" ಎಂದು ಹೆಣ್ಣು ಹೇಳುತ್ತಾಳೆ. ಅನಂತರ ಗಂಡು ತಾಳಿ ಕಟ್ಟುತ್ತಾನೆ. ತಾಳಿ ಕಟ್ಟಿದ ನಂತರ ಮದುವೆಗೆ ಬಂದಿರುವ ಸಂಬಂಧಿಕರು ಮುಹೂರ್ತದಲ್ಲಿ ಭಾಗವಹಿಸುತ್ತಾರೆ.

ಗಂಡನ್ನು ಹೆಣ್ಣನ್ನು ಧಾರೆಯಾದ ನಂತರ ಎದುರು ಬದುರು ಕೂರಿಸುತ್ತಾರೆ. ಅವರಿಬ್ಬರ ನಡುವೆ ಯಾರಾದರೂ ಒಬ್ಬ ಹೆಂಗಸು ಬಂದು ಹರಿವಾಣದಲ್ಲಿ ಅಕ್ಕಿಯನ್ನು ತುಂಬಿ ನಿಲ್ಲುತ್ತಾಳೆ. ಅನಂತರ "ಬಾರಯ್ಯ ಮದಲಿಂಗ ಬಲಗಾಲು ಮುಂದಿಕ್ಕಿ ಮುಂದೇನು ಕಂಡೆ" ಎಂದು ಹೆಣ್ಣು ಕೇಳುತ್ತಾಳೆ. "ತುಂಬಿದ ತೊರೆ ಕಂಡೆ" ಎಂದು ಮದಣಿಗ ಉತ್ತರಿಸುತ್ತಾನೆ. "ನೆತ್ತಿ ಮೇಲೇನು ಕಂಡೆ" ಎಂದಾಗ "ಮುಕ್ಕಣ್ಣೇಶ್ವರನ ಕಂಡೆ" ಎನ್ನುತ್ತಾನೆ. "ಎಡಕೇನು ಕಂಡೆ" ಎಂದಾಕೆ ಕೇಳಿದಾಗ "ಎಳಯನಾಗರನ್ನು ಕಂಡೆ" ಎನ್ನುತ್ತಾನೆ. "ಸೋಬಕ್ಕಾ ಸೊಬಾನ" ಎಂದು ಮಧ್ಯ ನಿಂತ ಹೆಂಗಸು ಹೇಳುತ್ತಾಳೆ. "ಹೀಗೆಯೇ ಬಾರಯ್ಯ ಮದಲಿಂಗ, ಬಲಗಾಲು ಮುಂದಿಕ್ಕಿ ಬಲಕೇನು ಕಂಡಯ್ಯ?" "ಬೊಮ್ಮ ದೇವರನ್ನು ಕಂಡೆ" ಒಟ್ಟಾರೆಯಾಗಿ ಇದನ್ನು ಈ ರೀತಿಯಾಗಿ ಹೇಳಬಹುದು "ಬಾರಯ್ಯ ಮದಲಿಂಗ ಬಲಗಾಲು ಮುಂದೂರಿ ಬಲಕ್ಕೇನು ಕಂಡೆ ಬೊಮ್ಮದೇವರ ಕಂಡೆ ಎಡಕ್ಕೇನು ಕಂಡೆ ಎಳೆಯ ನಾಗರ ಕಂಡೆ ತುಂಬಿದತೋರೆ ಕಂಡೆ ತುಂಬಿ ತೋರೆಯೊಳಗೆ ಗೋವು ಕಾಯೋ ಗೋವಿಂದನ ಕಂಡೆ"ಸೋಬಕ್ಕಿ ಸೋಬಾನೆ (ದೊಡ್ಡಕ್ಕ ಪೆನ್ನೋಬನಹಳ್ಳಿ ಗೊಲ್ಲರಹಟ್ಟಿ)ಈ ರೀತಿ ಮುಂದುವರೆಯುತ್ತದೆ. "ಹೆಣ್ಣಿಗೆ ಹೋಗುವಾಗ ಯಾರು ಯಾರು ಸಾಕ್ಷಿ" ಎಂದು ಅಕ್ಕಿ ಹಿಡಿದ ಹೆಂಗಸು ಕೇಳಿದಾಗ "ಒಕ್ಕಲು ಮಗನೇ ಸಾಕ್ಷಿ, ತೆಕ್ಕೆ ಒಳಗಿನ ಎತ್ತೇ ಸಾಕ್ಷಿ" ಎನ್ನುತ್ತಾನೆ. ಸೋಬಕ್ಕಿ ಸೋಬಾನೆ ಎಂದು ಹೆಂಗಸು ಹೇಳುತ್ತಾಳೆ. ಈ ರೀತಿ ಸಂಭಾಷಣೆ ಮುಂದು ವರಿಯುತ್ತದೆ(ಶಂಕರನಾರಾಯಣ, ತೀ ನಂ:೧೯೮೨:೧೫೫).

ಓದೋ ಅಕ್ಕಿ ಶಾಸ್ತ್ರವಾದ ನಂತರ ಮದುವೆ ಚಪ್ಪರದಲ್ಲಿ ಗಂಡು ಮತ್ತು ಹೆಣ್ಣನ್ನು ಗಂಡಿನ ಚಪ್ಪರದಲ್ಲಿ ಕೂಡಿಸುತ್ತಾರೆ. ಒಂದು ಕಣದಲ್ಲೋ ಕುರಿಹಟ್ಟಿಯಲ್ಲೋ ತಂಗಡೆ ಸೊಪ್ಪನ್ನು ಹಾಕಿ ಅದರ ಮೇಲೆ ಒಂದು ಹೊಸ ಮೊರವನ್ನು ಇಟ್ಟು ಭೂವಕ್ಕೆ (ಬೂವ-ಭೂಮ) ೧೦ ಸೇರು ಅಕ್ಕಿಯನ್ನು ಅಳೆಯುತ್ತಾರೆ. ಬೂವಕ್ಕೆ ಬೇಕಾದ ಮುದ್ದೆಗಳನ್ನು ತಯಾರಿಸಲು ಸಿದ್ಧವಾಗಿರುವ ವ್ಯಕ್ತಿಯ ಕೈಗೆ ಈ ಅಕ್ಕಿಯ ಜೊತೆಗೆ ಐದು ಅಚ್ಚು ಬೆಲ್ಲ, ಐದು ಬೆಳ್ಳುಳ್ಳಿ ಪಾಪು, ತುಪ್ಪ, ಜೇನುತುಪ್ಪ, ತೆಂಗಿನಕಾಯಿ ಇವುಗಳನ್ನು ಕೊಡುತ್ತಾರೆ. ಇವನು ಚಪ್ಪರದ ಮುಂಭಾಗದಲ್ಲಿ ಒಂದು ಜಾಗದಲ್ಲಿ ಒಲೆಯನ್ನು ಹೂಡಿ ಅನ್ನ ಮಾಡುತ್ತಾನೆ. ಅಗಸರ ಮನೆಯಿಂದ ಆಗ ತಾನೆ ತಂದ ಒಗೆದ ಬಿಳಿ ಬಟ್ಟೆಯನ್ನು ಹಾಸಿ ಅದರ ಮೇಲೆ ಅನ್ನವನ್ನು ಹಾಕಿ ಕಾಯಿತುರಿ, ಜೇನುತುಪ್ಪ, ಬೆಳ್ಳುಳ್ಳಿ ಮೊದಲಾದವನ್ನು ಸೇರಿಸಿ ಅನ್ನವನ್ನು ಮೇಣದಂತೆ ಮಿದಿಯುತ್ತಾನೆ. ಎರಡು ಬಾಳೆ ಪಾಕವನ್ನು ಮಾಡಿ ಆ ಮುದ್ದೆಯನ್ನು ತಿನ್ನುವವರಿಗೆ ತುಪ್ಪ ಮತ್ತು ಬೆಲ್ಲದ ಹಾಲನ್ನು ತಯಾರಿಸುತ್ತಾನೆ. ತಾಯಿ ಮುದ್ದೆ ಎಂದೂ ಉಳಿದೆರಡನ್ನೂ ಗೌಡಮುದ್ದೆ ಎಂದು ಕರೆಯುತ್ತಾರೆ. ಈ ಮುದ್ದೆಗಳು ಸಿದ್ಧವಾದ ನಂತರ ಚಪ್ಪರದಲ್ಲಿ ಗಂಡು ಹೆಣ್ಣನ್ನು ಕೂರಿಸಿ ಅವರೆದುರು ಎರಡು ತಾಯಿಮುದ್ದೆಗಳನ್ನು ತಂದಿಡುತ್ತಾರೆ. ಇದರಲ್ಲಿ ಒಂದನ್ನು ಗಂಡು ಇನ್ನೊಂದನ್ನು ಹೆಣ್ಣು ಮುಟ್ಟಿದ ನಂತರ, ಅದನ್ನು ಗಂಡಿನ ಮನೆಯವರಿಗೆ ಕೊಡುತ್ತಾರೆ. ಹಾಗೆಯೇ ಬೂವದ ಮುದ್ದೆಗಳನ್ನು ಗಂಡು ಹೆಣ್ಣು ಮುಟ್ಟಿದ ನಂತರ ಹೆಣ್ಣಿನವರಿಗೆ ಕೊಡುತ್ತಾರೆ. ಇವುಗಳನ್ನು ಪಡೆದ ಗಂಡಿನ ಕಡೆಯ ಮತ್ತು ಹೆಣ್ಣಿನ ಕಡೆಯ ಕೆಲವರು ಮರೆ ಮಾಡಿಕೊಂಡು ಊಟ ಮಾಡುತ್ತಾರೆ. ಗೌಡಮುದ್ದೆಗಳಿಗೆ ಹಳ್ಳಿಯ ಗೌಡನ ಬೆಳ್ಳಿ ಉಂಗುರದ ಮೊಹರನ್ನು ಒತ್ತುತ್ತಾರೆ. ಇದನ್ನು ತುಂಬ ಎಚ್ಚರಿಕೆಯಿಂದ ಮಿದ್ದಿ ಕಟ್ಟಿರಬೇಕಾಗುತ್ತದೆ. ಇದು ಸ್ವಲ್ಪವೂ ಬಿರುಕು ಬಿಟ್ಟಿರಕೂಡದು. ವೀಳ್ಯದೆಲೆಯನ್ನು ತೆಗೆದುಕೊಂಡು ಹಟ್ಟಿಯ ಗೌಡ ಆ ಮುದ್ದೆಯನ್ನು ಸವರುತ್ತಾನೆ. ಆಕಸ್ಮಾತ್ ಗೌಡಮುದ್ದೆ ಬಿರುಕು ಬಿಟ್ಟಿದ್ದರೆ ಆ ಮುದ್ದೆ ಮಾಡಿದವನು ಮೂರು ಹಣ ದಂಡ ಕೊಡಬೇಕಾಗುತ್ತದೆ. ಹಟ್ಟಿಯ ಗೌಡ "ಗೌಡನ ಮೊಹರು ಇದೆಯೇನೋ?" ಎಂದು ಮುದ್ದೆ ಮಾಡಿದವನನ್ನು ಕೇಳಿದಾಗ ಅವನು "ಗೌಡನ ಮೊಹರು ಒತ್ತಿದೆ" ಎನ್ನುತ್ತಾನೆ. ಗೌಡ ಮುದ್ದೆಯನ್ನು ಹಿಡಿದುಕೊಂಡು, ಅದನ್ನು ತಯಾರು ಮಾಡಿದವನು 'ಗೌಡ ಮುದ್ದೆ ಬರುತ್ತೆ, ಗೌಡ ಮುದ್ದೆ ಬರುತ್ತೆ, ದಾರಿ ಬಿಡಿ" ಎಂದುಹೇಳುತ್ತಾ ವಾದ್ಯ ಸಮೇತ ಹಟ್ಟಿಯ ದೇವಸ್ಥಾನದ ಮುಂದಕ್ಕೆ ಹೋಗಿ ಅಲ್ಲಿ ಕರಿಕಂಬಳಿ ಹಾಸಿ, ಗದ್ದುಗೆ ಮಾಡಿ, ಕಳಶ ಮತ್ತು ಪಂಚಾರತಿಯನ್ನಿಟ್ಟು, ಅಲ್ಲಿಯೇ ಗೌಡಮುದ್ದೆಯನ್ನಿಟ್ಟು ಅದಕ್ಕೆ ಕಾಯೊಡೆದು ಪೂಜೆ ಮಾಡಿ ಅದಕ್ಕೆ ಮೂರು ಬಾರಿ ಅಡ್ಡ ಬಿದ್ದು, ಯಾರಾದರೂ ಧೀರರೂ ಗೌಡ ಮುದ್ದೆಯನ್ನು ತಿನ್ನುತ್ತಾರೆ. ಗೌಡಮುದ್ದೆಯನ್ನು ತೀರಿಸಿದ ನಂತರದ ಗಂಡು ಹೆಣ್ಣಿನ ಸಮೇತ ಅಲ್ಲಿ ಸೇರಿದ್ದವರೆಲ್ಲರಿಗೂ ಕುಲದ ಊಟ ಆಗುತ್ತದೆ. ಈ ಧಾರೆಯ ಊಟಕ್ಕೆ ಸಾಮಾನ್ಯವಾಗಿ ಶಕ್ತ್ಯಾನುಸಾರ ಕುರಿಗಳನ್ನು ಕಡಿದಿರುತ್ತಾರೆ (ಅವರೇ:೧೫೫–೧೫೭).

ಧಾರೆಯ ಊಟ ಮುಗಿದ ನಂತರ ದೇವಸ್ಥಾನದ ಮುಂದೆ ಜಾಡಿಯನ್ನು (ಕರಿಯ ಕಂಬಳಿಯನ್ನು) ಹಾಸುತ್ತಾರೆ. ಒಂದು ಕಡೆ ಕರಿಯ ಕಂಬಳಿಯ ಗದ್ದುಗೆಯನ್ನು ಹೂಡಿ ಕಳಶ ಪಂಚಾರತಿಯನ್ನಿಟ್ಟು ಹರಿವಾಣದ ತುಂಬ ಅಡಕೆಯನ್ನು ಹುಯ್ಯುತ್ತಾರೆ. ಒಂದು ಗಡಿಗೆಗೆ ಅಡಿಕೆಯನ್ನು ತುಂಬಿ ಅದರ ಬಾಯಿಗೆ ಬಾಳೆಲೆಯನ್ನಿಟ್ಟು ಅದರ ಮೇಲೆ ಸೆಗಣಿಯನ್ನು ಮೆತ್ತಿ, ಕರೇಓಬೇನಹಳ್ಳೀ, ರಾಮನಹಳ್ಳಿ ಮತ್ತು ತಾಳಮಟ್ಟಿ ಈ ಮೂವರೂ ಕಟ್ಟೆಮನೆಗಳ ಗೌಡರ ಮುದ್ರೆಯುಂಗುರದಿಂದ ಮುದ್ರೆ ಒತ್ತುತ್ತಾರೆ.

ಇದಕ್ಕೆ ಮೂರು ಕಟ್ಟೆಯ ಮೊಹರು ಎನ್ನುತ್ತಾರೆ. ಇದನ್ನು ಯಾರು ಮುಟ್ಟುವಂತಿಲ್ಲ, ಒಡೆಯುವಂತಿಲ್ಲ. ಕರಿಯ ಕಂಬಳಿಯ ಮೇಲೆ ತಂದು ಅದನ್ನು ಕಳಶ ಪಂಚಾರತಿಗಳ ಎದುರಿನಲ್ಲಿಡುತ್ತಾರೆ. ಇವರ ಎದುರಿನಲ್ಲಿ ೧೬ ಸಾವಿರ ಎಲೆ, ೧೬ ಸೇರು ಅಡಿಕೆಯನ್ನಿಡುತ್ತಾರೆ. ಆನಂತರ ಹೆಂಗಸರು ಗಂಡಿನ ಮನೆದೇವರ ವೀಳ್ಯ, ತಾಳಿಮಟ್ಟೆಯ ವೀಳ್ಯ, ರಾಮನಹಳ್ಳಿಯ ವೀಳ್ಯ ಮತ್ತು ಗ್ರಾಮದ ಪಟೇಲರು ಶಾನುಭೋಗರಿಗೆ ಮತ್ತು ಹನ್ನೆರಡು ಕೈವಾಡದವರಿಗೆ ವೀಳ್ಯವನ್ನು ತೆಗೆದಿಡುತ್ತಾರೆ. "ಕುಲದ ಸ್ವಾಮಿ, ದೈವದ ಸ್ವಾಮಿ ಗೌಡ ಪೂಜಾರಪ್ಪಗಳು ಎಲ್ಲರೂ ಜಾಡಿ ಹಾಕುವುದಕ್ಕೆ ಅಪ್ಪಣೆ ಕೊಡಿ" ಎಂದು ಹೆಣ್ಣಿನ ತಂದೆ ಮೂರು ಸಾರಿ ಹೇಳುತ್ತಾನೆ. "ಅಪ್ಪಣೆ ಕೊಟ್ಟೆವು" ಎಂದು ಅಲ್ಲಿದ್ದವರು ಹೇಳುತ್ತಾರೆ. ಆನಂತರ ಜಾಡಿ (ಕಂಬಳಿ) ಹಾಕುವವರು ಮತ್ತು ಎತ್ತುವವರು ಕರಡಿಗೊಲ್ಲರ ವಂಶಸ್ಥರು ಮಾತ್ರ. ಜಾಡಿಯ ಮೇಲೆ ಇರುವ ನಾಲ್ಕೈದು ಕಟ್ಟು ವೀಳ್ಯದೆಲೆ, ಪಂಚೇರು ಅಡಿಕೆ, ಒಂದಿಷ್ಟು ಹೊಂಬಾಳೆ, ಹೂವು, ಎರಡು ತೆಂಗಿನಕಾಯಿ. ಇವೆಲ್ಲವು ಕರಡಿಗೊಲ್ಲರ ವಂಶಸ್ಥರಿಗೆ ಸೇರುತ್ತವೆ. ಅದರಿಂದ ಅಡಕೆಯನ್ನು ಸುರಿಯುವವರೂ ಅವರೇ. ಗಂಡಿನ ಕಡೆಯವರು ಈ ಸಂದರ್ಭದಲ್ಲಿ ಗುಡಿಕಟ್ಟಿಗೆ ೧೦ ಸೇರು ಅಕ್ಕಿ ಒಂದು ಕಟ್ಟು ವೀಳ್ಯದೆಲೆ, ಒಂದು ಸೇರು ಅಡಕೆ ಕೊಡಬೇಕು. ಅಲ್ಲಿ ಸೇರುವ ಎಲ್ಲರಿಗೂ ವೀಳ್ಯದೆಲೆ ಅಡಕೆ ಕೊಡುವ ಮೊದಲು ಕಟ್ಟೆ ಮನೆಗೆ, ದೇವರಿಗೆ, ಗ್ರಾಮದ ಗೌಡ ಶಾನುಭೋಗರಿಗೆ, ಹನ್ನೆರಡು ಕೈವಾಡದವರಿಗೆ ಗೌರವಾರ್ಥವಾಗಿ ವೀಳ್ಯವನ್ನು ಪ್ರತ್ಯೇಕವಾಗಿ ತೆಗೆದಿಟ್ಟು ನಂತರ ಕೊಡಬೇಕು (ಶಂಕರನಾರಾಯಣ,ತೀ ನಂ:೧೫೬-೧೫೭). ಆದರೆ, ಇತ್ತೀಚೆಗೆ ಜಾಡಿಯ ಶಾಸ್ತ್ರದಲ್ಲಿ ಮಹತ್ತರ ಬದಲಾವಣೆಗಳು ಗೋಚರಿಸುತ್ತಿದ್ದು, ಕೇವಲ ಇದನ್ನು ಸಾಂಕೇತಿಕವಾಗಿ ಮಾಡಲಾಗುತ್ತಿದೆ.

ಜಾಡಿ ಶಾಸ್ತ್ರ ಮುಗಿದ ನಂತರ ಮದುವೆ ಶಾಸ್ತ್ರಗಳು ಮುಗಿದಂತೆಯೇ. ಆದರೆ ಇವೆಲ್ಲವೂ ಗಂಡಿನ ಮನೆಯಲ್ಲಿ ಜರುಗುತ್ತದೆ. ಮೂಹೂರ್ತದ ದಿನ ಗಂಡು ಹೆಣ್ಣು ಗಂಡಿನ ಮನೆಯಲ್ಲಿಯೇ ಇರುತ್ತಾರೆ. ಮಾರನೆಯ ದಿನ ಹೆಣ್ಣಿನ ಮನೆಯಲ್ಲಿ ಆರತಕ್ಷತೆಯ ಕಾರ್ಯವನ್ನು ಇಟ್ಟುಕೊಂಡಿರುತ್ತಾರೆ. ಆರತಕ್ಷತೆಯ ಕಾರ್ಯಕ್ರಮಕ್ಕೆ ಗಂಡಿನ ಊರಿನವರು ಸಂಬಂಧಿಕರು ತೆರಳುತ್ತಾರೆ. ಹೆಣ್ಣಿನ ಮನೆಯಲ್ಲಿ ಸಂಜೆ ಆರತಕ್ಷತೆಯ ಕಾರ್ಯವನ್ನು ಹೆಣ್ಣಿನ ಮನೆಯವರು ನೆರವೇರಿಸಿಕೊಡುತ್ತಾರೆ. ಅಲ್ಲಿ ಹೆಣ್ಣಿನ ತಂದೆ-ತಾಯಂದಿರು ಅಳಿಯ ಮತ್ತು ಮಗಳನ್ನು ಮನೆ ತುಂಬಿಸಿಕೊಂಡು (ಆಹ್ವಾನಿಸಿಕೊಂಡು)

ಬರಮಾಡಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಗಂಡು ಹೆಣ್ಣಿನ ಮೆರವಣಿಗೆ ಏರ್ಪಡಿಸುತ್ತಾರೆ. ಮತ್ತು ಕೋಲಾಟ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ.

ಇತ್ತೀಚೆಗೆ ಮದುವೆಗೆ ಸಂಬಂಧಿಸಿದಂತೆ ಶಾಸ್ತ್ರಗಳಲ್ಲಿ ರೀತಿ–ನೀತಿಗಳಲ್ಲಿ ಗಣನೀಯ ಸಡಿಲಿಕೆ ಮತ್ತು ಬದಲಾವಣೆಗಳು ಗೋಚರಿಸುತ್ತವೆ. ಮದುವೆಯು ವಧುವಿನ ಮನೆಯಲ್ಲಿ ನಡೆಯುವುದನ್ನು ಕಾಣಬಹುದು. ವಿದ್ಯಾವಂತ, ನಗರವಾಸಿ ಯುವಕರು ಮತ್ತು ತಂದೆ–ತಾಯಂದಿರು ಮದುವೆಯನ್ನು ಕಲ್ಯಾಣ ಮಂಟಪಗಳಲ್ಲಿ ನೆರವೇರಿಸಿ ಕೊಡುವಂತೆ ವಧುವಿನ ಕಡೆಯವರಿಗೆ ಒತ್ತಾಯಿಸುವುದನ್ನು ಕಾಣಬಹುದು. ಅಲ್ಲದೆ ಘನತೆಯ ದೃಷ್ಟಿಯಿಂದ ಮತ್ತು ಅನುಕೂಲದ ದೃಷ್ಟಿಯಿಂದ ವಧುವಿನ ಕಡೆಯವರೂ ಸಹ ಮದುವೆಗೆ ಕಲ್ಯಾಣ ಮಂಟಪಗಳನ್ನೇ ಇಷ್ಟಪಡುತ್ತಾರೆ. ಈ ಕಲ್ಯಾಣ ಮಂಟಪಗಳಲ್ಲಿ ಮತ್ತು ನಗರ–ಪಟ್ಟಣಗಳ ಸಮುದಾಯ ಭವನದಲ್ಲಿ ಜರುಗುವ ಮದುವೆಗೆ ಇತ್ತೀಚೆಗೆ ಬ್ರಾಹ್ಮಣರನ್ನು ಪುರೋಹಿತ ಕಾರ್ಯವನ್ನು ನೆರವೇರಿಸಲು ಆಹ್ವಾನಿಸಿದರೂ ಪೂಜಾರಿಗಳನ್ನು ಮುಂದಿಟ್ಟುಕೊಂಡು ಮೂಹೂರ್ತ ಮಾಡಬೇಕು. ಮೊದಲು ಮದುವೆ ಮನೆಯವರು ಇತರ ಹಟ್ಟಿಗಳಲ್ಲಿರುವ ತಮ್ಮ ಸಂಬಂಧಿಕರಿಗೆ ಮತ್ತು ತಮ್ಮ ಸಮುದಾಯದವರಿಗೆ ಮಾತ್ರ ಮದುವೆಗೆ ಬರುವಂತೆ ಬಾಯಿ ಮಾತಿನಲ್ಲಿ ಆಹ್ವಾನಿಸುತ್ತಿದ್ದರು. ಆದರೆ ಈಗ ಬೇರೆ ಸಮುದಾಯದ ಜನರಿಗೂ ಆಹ್ವಾನ ಪತ್ರಿಕೆಯೊಂದಿಗೆ ಆಹ್ವಾನಿಸುತ್ತಾರೆ. ಊಟೋಪಚಾರ ಮದುವೆಯ ಉಡುಪುಗಳಲ್ಲಿಯೂ ಇಂದು ಹೆಚ್ಚಿನ ಬದಲಾವಣೆಗಳು ಕಂಡು ಬರುತ್ತಿವೆ. ಪಾಶ್ಚಾತ್ಯರ ಅನುಕರಣೆಯಾದ ರಿಸೆಪ್ಷನ್ (ಆರತಕ್ಷತೆ) ಕಾಡುಗೊಲ್ಲ ಸಮುದಾಯದಲ್ಲಿ ಇರಲಿಲ್ಲ. ಆದರೆ ಈಗೀಗ ಇದೂ ಕೂಡ ಇವರಿಂದ ಅನುಕರಣೆಯಾಗುತ್ತಿದೆ. ಒಟ್ಟಾರೆ ಇಂದು ಮದುವೆಗೆ ಸಂಬಂಧಿಸಿದಂತೆ ಪರಿವರ್ತನೆಗಳು ಕಾಡುಗೊಲ್ಲ ಸಮುದಾಯದಲ್ಲಿ ಕಂಡು ಬರುತ್ತಿವೆ.

೫

# ಆರಾಧನೆ, ಆಚರಣೆ, ನಂಬಿಕೆ

**ಜನನ, ನಾಮಕರಣ, ಋತುಮತಿ, ಸೀಮಂತ, ಮರಣ**

ಜನನಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲರಲ್ಲಿ ಹಲವು ಸಂಪ್ರದಾಯಗಳು, ರೀತಿ-ನೀತಿಗಳು, ರೂಢಿ-ಪದ್ಧತಿಗಳು ಸಾಮಾಜಿಕ ಕಟ್ಟು-ಕಟ್ಟಳೆಗಳು, ನಿಯಮಗಳಿವೆ. ಈ ಸಾಮಾಜಿಕ ನಿಯಮ ಅಥವಾ ಪದ್ಧತಿಗಳು ಬಹುಶಃ ಪ್ರಪಂಚದ ಯಾವುದೇ ಬುಡಕಟ್ಟು ಅಥವಾ ಜಾತಿಯಲ್ಲಿ ಕಟ್ಟು-ನಿಟ್ಟಾಗಿ ಆಚರಿಸುವುದಿಲ್ಲ ಎಂದರೆ ತಪ್ಪಾಗ ಲಾರದು. ಈ ಆಚರಣೆಗಳು ಕೆಲವೊಮ್ಮೆ ಅಮಾನವೀಯ ರೂಪತಾಳುತ್ತವೆ. ಜನನ ಕ್ರಿಯೆ ಒಂದು ಸ್ವಾಭಾವಿಕ, ಶಾರೀರಿಕ ಕ್ರಿಯೆಯಾಗಿದ್ದರೂ ಕಾಡುಗೊಲ್ಲರಲ್ಲಿ ಒಂದು ರೀತಿಯ ಮೂಢನಂಬಿಕೆಯ ಫಲಪ್ರದವಾದ ಜೀವನ ಕ್ರಿಯೆಯಾಗಿದೆ. 'ಜಗತ್ತೇ ಹುಬ್ಬೇರಿಸುವಷ್ಟು ಪ್ರಕೃತಿಯ ಸಿರಿಸಂಪತ್ತು, ಶ್ರೀಮಂತ ಸಾಂಸ್ಕೃತಿಕ ಪರಂಪರೆ ಹಿನ್ನೆಲೆ ಹೊಂದಿರುವ ಕರ್ನಾಟಕ ರಾಜ್ಯದಲ್ಲಿ ಮೂಕ ಪ್ರಾಣಿಯೂ ವಿಸ್ಮಯ ಪಡುವಂತಹ ದರಿದ್ರ ಸಂಪ್ರದಾಯಗಳು ಕಾಡುಗೊಲ್ಲರಲ್ಲಿ ಕಂಡು ಬರುತ್ತವೆ (ನಾಗರಾಜು, ಬಿ ವಿ:೯೮೮೮:೧)ಎಂಬುದಾಗಿ ಪತ್ರಕರ್ತ ನಾಗರಾಜು ಅವರು ಅಭಿಪ್ರಾಯಪಡುತ್ತಾರೆ. ಕಾಡುಗೊಲ್ಲ ಸಮುದಾಯದವರು ಬ್ರಾಹ್ಮಣೀಕರಿಸದ ಹಿಂದೂ ಸಂಪ್ರದಾಯವನ್ನು ಅನುಸರಿಸದೆ, ಬುಡಕಟ್ಟು ಸಮುದಾಯದವರ ಮುಖ್ಯ ಲಕ್ಷಣಗಳಾದ ಹೆತ್ತರೆ ಸೂತಕ, ಸತ್ತರೆ ಸೂತಕ, ಮೈನೆರೆದರೆ ಸೂತಕ ಹಾಗೂ ಮದುವೆಯಾದರೂ ಸೂತಕ ಎಂಬ ನಿಯಮವನ್ನು ಇಂದೂ ಸಹ ಕಟ್ಟುನಿಟ್ಟಾಗಿ ಅನುಸರಿಸುತ್ತಾರೆ. ಕಾಡುಗೊಲ್ಲ ಸಮುದಾಯದಲ್ಲಿ ಮಗು ಹೆರುವ ಕ್ರಿಯೆ ಅತ್ಯಂತ ಸೂತಕದ ವಿಚಾರ. ಬಸುರಿ ಹೆಂಗಸಿಗೆ ನೋವು ಕಾಣಿಸಿಕೊಂಡ ತಕ್ಷಣ ಅವಳನ್ನ ಹಟ್ಟಿಯಿಂದ ದೂರ ಕರೆದೊಯ್ಯ ಲಾಗುತ್ತದೆ. ಒಂದು ಪಕ್ಷ ಹಟ್ಟಿಯಲ್ಲೇ ಹೆರಿಗೆಯಾದರೆ ಆ ಮಗುವನ್ನು ಮರದಲ್ಲಿ ಹಾಕಿಕೊಂಡು ಬಾಣಂತಿಯೇ ಆ ಮಗುವನ್ನು ಹಿಡಿದುಕೊಂಡು, ಬಗ್ಗಿಕೊಂಡು, ಹಟ್ಟಿಯ ಹೊರಗೆ ಹೋಗಿ ಮಗುವಿನ ಹೊಕ್ಕಳಬಳ್ಳಿಯನ್ನು ಕೊಯ್ಯಬೇಕು. ಅಂದರೆ ಹೊಕ್ಕಳ ಬಳ್ಳಿಯನ್ನು ಕೊಯ್ದು ಮಗುವನ್ನು ತಾಯಿಯಿಂದ ಬೇರ್ಪಡಿಸುವವರೆಗೂ ಸೂತಕವಿಲ್ಲ ಎಂದು ಅವರ ನಂಬಿಕೆ. ನಂತರ ಈ ಸಮುದಾಯದವರೂ ಮಹಿಳೆಯನ್ನ ಮುಟ್ಟುವಂತಿಲ್ಲ. ಅವಳ ಸಹಾಯಕ್ಕೆ ಹೋಗುವಂತಿಲ್ಲ. ಸೂಲಗಿತ್ತಿಯು ಬಂದು

ಹೆರಿಗೆ ಮಾಡಿಸುತ್ತಾಳೆ. ಹಿಂದಿನ ಕಾಲದಲ್ಲಿ ಸೂಲಗಿತ್ತಿಯೂ ಸಹ ಅವಳ ಸಹಾಯಕ್ಕೆ ಹೋಗುವಂತಿರಲಿಲ್ಲ. ಬಸುರಿ ಹೆಂಗಸೇ ಹೆರಿಗೆ ಮಾಡಿಕೊಂಡು ಕರುಳ ಬಳ್ಳಿಯನ್ನ ಅವಳೇ ಕತ್ತರಿಸಿಕೊಳ್ಳಬೇಕಾಗಿತ್ತು. ಯಾರೂ ಸಹ ಅವಳ ನೆರವಿಗೆ ಹೋಗುವಂತಿರಲಿಲ್ಲ. ಈಗೀಗ ಸೂಲಗಿತ್ತಿ ಅಥವಾ ಸಮುದಾಯದ ಹಿರಿಯ ಮಹಿಳೆಯು ಹೆರಿಗೆ ಸಂದರ್ಭದಲ್ಲಿ ನೆರವಿಗೆ ಧಾವಿಸುತ್ತಾರೆ. ಇಂತಹ ಸಂದರ್ಭದಲ್ಲಿ ವೈದ್ಯರ ಇಲ್ಲವೆ ಆಸ್ಪತ್ರೆಯ ನೆನಪು ಮಾಡಿಕೊಳ್ಳುವುದಿಲ್ಲ. ಹೆರಿಗೆಯ ನಂತರ ಈ ಮುಂಚೆ ತಯಾರಿಸಿಟ್ಟಿದ್ದ ಗುಡಿಸಲಿಗೆ ತಾಯಿ ಮಗುವನ್ನು ಬಿಟ್ಟು, ೩ ದಿನಗಳ ಕಾಲ ಹಟ್ಟಿಯವರು ನೀರು ಕಾಯಿಸಿ ತಾಯಿ ಮಗುವಿಗೆ ದೂರದಿಂದ ಸುರಿಯುತ್ತಾರೆ. ಮತ್ತು ೩ ದಿನ ಮನೆಯವರು ಊಟ ಕೊಡುತ್ತಾರೆ. ನಂತರ ಎರಡು ತಿಂಗಳುಗಳ ಕಾಲ ಮಗು ಮತ್ತು ತಾಯಿಯನ್ನ ಹಟ್ಟಿಯಿಂದ ಹೊರಗಿಡುತ್ತಾರೆ. ಬಾಣಂತಿಯೇ ಅಡಿಗೆ ಮಾಡಿಕೊಂಡು ಊಟ ಮಾಡಬೇಕು, ಮಗುವಿಗೂ ನೀರು ಕಾಯಿಸಿಕೊಂಡು ಸ್ನಾನ ಮಾಡಿಸಬೇಕು. ಅವರನ್ನ ಯಾರೂ ಮುಟ್ಟುವಂತಿಲ್ಲ. ಅವರಿಬ್ಬರ ನೆರಳೂ ಸಹ ಬೇರೆಯವರ ಮೇಲೆ ಬೀಳುವಂತಿಲ್ಲ ಒಂದು ವೇಳೆ ಬೇರೆಯವರ ಮೇಲೆ ಬಿದ್ದರೆ ಅವರೂ ಸಹ ಮೈಲಿಗೆಯಾಗುತ್ತಾರೆ. ಅವರು ಮತ್ತೆ ಶುಚಿತ್ವ ಪಡೆದು ದೇವರಿಗೆ ದಂಡ ಕೊಡಬೇಕಾಗುತ್ತದೆ. ಹಟ್ಟಿಯ ಹೊರಗೆ ಮಗು ಮತ್ತು ಬಾಣಂತಿಯು ಎರಡು ತಿಂಗಳುಗಳ ಕಾಲ ಯಾರ ಸಹಾಯವಿಲ್ಲದೆ, ಮಳೆಯೆನ್ನದೆ, ಬಿಸಿಲೆನ್ನದೆ, ಗಾಳಿಯೆನ್ನದೆ ಮೂಕ ಪ್ರಾಣಿಗಳಂತೆ ಕಾಲ ತಳ್ಳಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಹುಟ್ಟಿದ ಮಕ್ಕಳು ವೈದ್ಯಕೀಯ ಸೌಲಭ್ಯವಿಲ್ಲದೆ ಸಾವನ್ನಪ್ಪಿದ ಪ್ರಸಂಗಗಳಿವೆ. ಈ ಸಂಶೋಧನೆಯಿಂದಲೂ ಅದು ದೃಢಪಟ್ಟಿದೆ.

ಮಗು ಮತ್ತು ಬಾಣಂತಿಯು ಎರಡು ತಿಂಗಳ ವನವಾಸದ ನಂತರ ಹಟ್ಟಿಯ ಪೂಜಾರಿಯ ಅಥವಾ ಗೌಡನ ನಿಯಮದಂತೆ ಸೂತಕವನ್ನು ಕಳೆದು ದೇವಸ್ಥಾನಕ್ಕೆ ಬಂದು ಮಗುವಿಗೆ ನಾಮಕರಣ ಮಾಡಿ, ಜನಿಗೆ ಕುರಿಯ ಹಾಲಿನಿಂದ ನಾಮಕರಣ ಮಾಡಿ ಮೈಲಿಗೆಯನ್ನ ಕಳೆದುಕೊಂಡು ಮನೆಗೆ ಹೋಗುತ್ತಾರೆ. ಇದೊಂದು ಅಮಾನವೀಯ ಪದ್ಧತಿಯಾಗಿದ್ದು, ಹೆರಿಗೆಯ ಸಂದರ್ಭದಲ್ಲಿ ಅದೆಷ್ಟೋ ಮಹಿಳೆಯರು ಸಾವನ್ನಪ್ಪಿದ ಪ್ರಸಂಗಗಳಿವೆ. ಈ ಪದ್ಧತಿ ಅಥವಾ ಆಚರಣೆಯನ್ನ ತೊಡೆದು ಹಾಕಲು ಯಾವುದೇ ಗಂಭೀರ ಪ್ರಯತ್ನ ನಡೆದಿಲ್ಲ. ಈಗಿನ ವಿದ್ಯಾವಂತ ಯುವಕರು ಈ ಪದ್ಧತಿಯನ್ನ ವಿರೋಧಿಸುವರಾದರೂ, ತಲೆ ತಲಾಂತರವಾಗಿ ಬೇರು ಬಿಟ್ಟಿರುವ ಈ ಆಚರಣೆಯನ್ನ ಹಟ್ಟಿಯ ಹಿರಿಯರು ಪ್ರೋತ್ಸಾಹಿಸುತ್ತಾ ನಡೆಸಿಕೊಂಡು ಬಂದಿದ್ದಾರೆ. ಎರಡು ತಿಂಗಳುಗಳ ಕಾಲ ಊರ ಹೊರಗಡೆ ಪ್ರತ್ಯೇಕವಾಗಿಡುವುದು ಶುಚಿತ್ವದ ದೃಷ್ಟಿಯಿಂದ ವೈಜ್ಞಾನಿಕವಾಗಿ ಸರಿಯಾಗಿದೆ ಎಂದು, ಕೆಲಸದ ಒತ್ತಡದಿಂದ ದೂರವಿದ್ದು, ವಿಶ್ರಾಂತಿ ದೃಷ್ಟಿಯಿಂದಲೂ ಇದು ಸರಿ ಎನಿಸಿದರೂ ಮಗುವಿನ ಆರೈಕೆ, ಆರೋಗ್ಯದ ದೃಷ್ಟಿಯಿಂದ ಮತ್ತು ಮಾನವೀಯ ದೃಷ್ಟಿಯಿಂದ ಮಗು ಮತ್ತು ಬಾಣಂತಿಯನ್ನ

ಹೊರಗಿಡುವುದು ಸರಿಯಾದ ಕ್ರಮವಲ್ಲ. ಎಷ್ಟೋ ಸಂದರ್ಭಗಳಲ್ಲಿ ಗುಡುಗು, ಮಳೆ, ಸಿಡಿಲು, ಬಿರುಗಾಳಿಯಿಂದ ಮಗು ಮತ್ತು ಬಾಣಂತಿಯ ಜೀವಕ್ಕೆ ಅಪಾಯವಾಗಿರುವುದು ಕಂಡುಬಂದಿದೆ. ಇತ್ತೀಚೆಗೆ ಸಮುದಾಯದ ವಿದ್ಯಾವಂತ ನಗರವಾಸಿ ಯುವಕರು ಮತ್ತು ಗ್ರಾಮೀಣ ಭಾಗದ ವಿದ್ಯಾವಂತ ಯುವಕರು ಈ ಆಚರಣೆಯ ಪರಿಣಾಮಗಳನ್ನ ಜನರಿಗೆ ಮನವರಿಕೆ ಮಾಡಿಕೊಡುತ್ತಾ, ಅಲ್ಲಲ್ಲಿ ಕೆಲವು ಜಾಗೃತಿ ಕಾರ್ಯಕ್ರಮಗಳನ್ನ ಹಮ್ಮಿಕೊಂಡು ಜನರಿಗೆ ಅರಿವು ಮೂಡಿಸಿ ಮಗು ಮತ್ತು ಬಾಣಂತಿಯನ್ನ ಹೊರಗಿಡುವ ದಿನಗಳನ್ನ ಕಡಿಮೆಗೊಳಿಸಿದ್ದಾರೆ. ಕೆಲವು ಸಮುದಾಯದ ರಾಜಕೀಯ ನಾಯಕರು ಬಲಾತ್ಕಾರವಾಗಿ ಇವರನ್ನು ಮನೆಗೆ ಕಳುಹಿಸಿದ್ದಾರೆ. ಆದರೆ ಅವರು ಹೋದ ಮೇಲೆ ಪುನಃ ಇವರ ಸಂಪ್ರದಾಯವನ್ನ ಮುಂದುವರಿಸಿದ್ದಾರೆ. ಇಲ್ಲಿ ನಾನು ಏನು ಹೇಳ ಬಯಸುತ್ತೇನೆ. ಅಂದರೆ ಈ ಆಚರಣೆಯನ್ನ ಬಲತ್ಕಾರದಿಂದ ತೊಲಗಿಸಲು ಸಾಧ್ಯವಿಲ್ಲ. ಜನರಿಗೆ ಮನವರಿಕೆ ಮಾಡುವುದರ ಮೂಲಕ ತೊಲಗಿಸಲು ಸಾಧ್ಯವಿದೆ. ಇದೇ ರೀತಿ ಕೆಲವೇ ಕೆಲವು ಸರ್ಕಾರೇತರ ಸಂಸ್ಥೆಗಳು ಕಾಡುಗೊಲ್ಲರಲ್ಲಿರುವ ಜನನಕ್ಕೆ ಸಂಬಂಧಿಸಿದ ಸೂತಕಗಳನ್ನ ನಿರ್ಮೂಲನ ಮಾಡಲು ಪ್ರಯತ್ನ ನಡೆಸಿವೆ. ಆದರೆ ಅವೆಲ್ಲವೂ ಬದ್ಧತೆಯ ಸ್ವಯಂ ಸಂಸ್ಥೆಗಳಾಗಿಲ್ಲದಿರುವುದು ವಿಷಾದದ ಸಂಗತಿ. ಹೆಚ್ ವಿ ನಂಜುಂಡಯ್ಯರವರು ಕಾಡುಗೊಲ್ಲರಲ್ಲಿ ಹೆರಿಗೆಯ ಸಂದರ್ಭದಲ್ಲಿ ರೂಢಿಯಲ್ಲಿರುವ ಸಂಪ್ರಾದಯಗಳ ಬಗ್ಗೆ ಈ ರೀತಿ ಹೇಳುತ್ತಾರೆ. The child birth is looked upon by Kadu Gollas with grate fear as of some impending evil and extremely dested owing to anxious days the woman in childbed has to spend (Nanjundaiah, H V: 1908:4).

ಈ ಸಂಬಂಧವಾಗಿ ದಿನಾಂಕ ೨೨.೧.೨೦೦೧ ರಂದು ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಮತ್ತು ರಾಜ್ಯ ಸಂಪನ್ಮೂಲ ಕೇಂದ್ರ ಮೈಸೂರು ಇವುಗಳು ಜಂಟಿಯಾಗಿ ಅಮಾನವೀಯ ಆಚರಣೆಗಳ ದಾಖಲಾತಿಯನ್ನು, ಕೈಗೊಂಡು, ಬೆಂಗಳೂರಿನಲ್ಲಿ ವಿಚಾರ ಸಂಕಿರಣವನ್ನ ಏರ್ಪಡಿಸಿದವು. ಈ ವಿಚಾರಸಂಕಿರಣದಲ್ಲಿ ತಜ್ಞರು, ಸಂಶೋಧಕರು, ಕಾನೂನು ತಜ್ಞರುಗಳು ಬುದ್ಧಿ ಜೀವಿಗಳು ಕಾಡುಗೊಲ್ಲರಲ್ಲಿ ಆಚರಣೆಯಲ್ಲಿರುವ ಜನನ, ಮುಟ್ಟಾಗುವಿಕೆ, ಮತ್ತು ಋತುಮತಿಯ ಸಂದರ್ಭದಲ್ಲಿ ಅನುಸರಿಸುವ ಸಂಪ್ರದಾಯಕ್ಕೆ ಸಂಬಂಧಿಸಿದ ಅಮಾನವೀಯ ಆಚರಣೆಯನ್ನ ಶಾಸನದ ಮೂಲಕ ನಿರ್ಮೂಲನ ಮಾಡಬಹುದೆಂದು ಸಲಹೆ ಇತ್ತರು. ಅನಕ್ಷರತೆ, ಅಜ್ಞಾನ, ಕಡು ಬಡತನ ಐಸೋಲೇಟೆಡ್ ಜೀವನದಿಂದ ಇಂತಹ ಅಮಾನವೀಯ ಆಚರಣೆಗಳು ರೂಢಿಯಲ್ಲಿವೆ. ಈ ಸಮುದಾಯದ ಕಲಿತ ಮತ್ತು ತಿಳುವಳಿಕೆಯಿರುವ ಹೆಣ್ಣು ಮಕ್ಕಳು ಮನಃಪೂರ್ವಕ ಒಪ್ಪದಿದ್ದರೂ, ಮೌನವಾಗಿ ಪ್ರತಿಭಟಿಸುತ್ತಾರೆ. ಶಿಕ್ಷಣ ಹಾಗೂ ಆರ್ಥಿಕ ಸ್ಥಿತಿ ಸುಧಾರಿಸುತ್ತಿರುವ ಹಟ್ಟಿಗಳಲ್ಲಿ ಈ ಪದ್ಧತಿಯು ಕ್ರಮೇಣವಾಗಿ ಸಡಿಲವಾಗುತ್ತಿದೆ.

ಆದರೂ ಈ ಪದ್ಧತಿಯನ್ನ ಬೇರು ಸಹಿತ ಕಿತ್ತೆಸೆಯಲು ಈ ಆಚರಣೆಗಳಿಂದಾಗ ಬಹುದಾದ ಅನಾಹುತಗಳ ಬಗ್ಗೆ ಸಮುದಾಯದ ಜನರಿಗೆ ವಿಶೇಷವಾಗಿ ಮಹಿಳೆಯರಿಗೆ ಸೂಕ್ತ ತಿಳುವಳಿಕೆ ನೀಡಿ ಅವರಲ್ಲಿ ಅರಿವು ಮೂಡಿಸುವುದು ಮುಖ್ಯವಾಗುತ್ತದೆ. ಇತ್ತೀಚೆಗೆ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನಲ್ಲಿ ಬರುವ ಕೆಲವು ಕಾಡುಗೊಲ್ಲರ ಹಟ್ಟಿಗಳಲ್ಲಿ ಸರ್ಕಾರದ ವತಿಯಿಂದ, ಹಟ್ಟಿಯ ಹೊರಗೆ ಪ್ರಸೂತಿ ಗೃಹ(ಬಾಣಂತಿಗೆ ವಾಸವಿರಲು)ಗಳನ್ನ ಕಟ್ಟಲಾಗಿವೆ. ಆದರೆ, ಈ ಯೋಜನೆ ಈಗಿರುವ ಪದ್ಧತಿಯನ್ನ ಹೋಗಲಾಡಿಸುವ ಬದಲು ಜೀವಂತವಾಗಿರಿಸುವುದರಲ್ಲಿ ಸಂದೇಹವಿಲ್ಲ.

ಋತುಮತಿ : ಸಾಮಾನ್ಯವಾಗಿ ಬುಡಕಟ್ಟು ಮತ್ತು ಹಿಂದುಳಿದ ಜಾತಿಗಳಲ್ಲಿ ಮೈನೆರೆದವರನ್ನು ೯ ದಿನ ಮತ್ತು ಮುಟ್ಟಾದವರನ್ನ ನಾಲ್ಕು ದಿನಗಳ ಕಾಲ ಮನೆಯ ಒಳಗೆ ಅಥವಾ ಹೊರಗೆ ಸೂತಕದ ಹೆಸರಿನಲ್ಲಿ ಪ್ರತ್ಯೇಕವಾಗಿಡುವುದನ್ನ ನಾವು ಕಾಣ ಬಹುದಾಗಿದೆ. ಆದರೆ, ಕಾಲಕ್ರಮೇಣ ಈ ಸೂತಕ ಕಡಿಮೆಯಾಗುತ್ತಿದ್ದು, ವಿದ್ಯಾವಂತರಲ್ಲಿ ಹೆಚ್ಚು ಕಡಿಮೆ ನಶಿಸಿ ಹೋಗಿದೆ. ಆದರೆ ಕಾಡುಗೊಲ್ಲ ಬುಡಕಟ್ಟಿನಲ್ಲಿ ಮಹಿಳೆಯು ಮೈನೆರೆದಾಗ ದೇವರು, ಹಟ್ಟಿ ಮತ್ತು ಮನೆಗಳಿಗೆ ಸೂತಕ ಎಂಬ ನಂಬಿಕೆಯಿದ್ದು, ಇಂತಹ ಹೆಣ್ಣು ಮಕ್ಕಳನ್ನ ಬಾಣಂತಿಯರಂತೆಯೇ ಹಟ್ಟಿಯ ಹೊರಗೆ ಸಾಂಕೇತಿಕವಾಗಿ ಹಸಿರು ಗುಡಿಸಲು ಕಟ್ಟಿ ಬಿಡುತ್ತಾರೆ. ಮೈನೆರೆದ ಹೆಣ್ಣುಮಗಳು ಬಿಸಿಲು, ಮಳೆ, ಗಾಳಿಯೆನ್ನದೆ, ಬಟ್ಟಂ ಬಯಲಿನಲ್ಲಿಯೋ ಅಥವಾ ಮರದ ಕೆಳಗೆ ಅನಾಥರಂತೆಯೇ ಇಲ್ಲವೇ ಪಕ್ಕದ ಊರಿನ ಮೇಲ್ಜಾತಿಯವರ ಮನೆಯ ವರಾಂಡಲ್ಲಿಯೋ ಕಾಲ ಕಳೆಯಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಬೇರೆ ಜಾತಿಯ ಯುವಕರು ಕಾಡುಗೊಲ್ಲ ಹೆಣ್ಣುಮಕ್ಕಳಿಗೆ ಲೈಂಗಿಕ ಕಿರುಕುಳ ಕೊಟ್ಟಿರುವ ಅನೇಕ ನಿದರ್ಶನಗಳಿವೆ. ಋತುಮತಿ ಯಾದ ಕಾಡುಗೊಲ್ಲ ಸಮುದಾಯದ ಹೆಣ್ಣುಮಕ್ಕಳು ಬೇರೆ ಜಾತಿಯವರ ಮನೆಯ ವರಾಂಡದಲ್ಲಿದ್ದರೆ ಅದು ಅವರಿಗೆ ಸೂತಕವೆನಿಸುವುದಿಲ್ಲ. ಆದರೆ, ಕಾಡುಗೊಲ್ಲ ಸಮುದಾಯದವರಿಗೆ ಸೂತಕವಾಗುತ್ತದೆ! ಋತುಮತಿ ಮತ್ತು ಮುಟ್ಟಾದ ಸಂದರ್ಭ ದಲ್ಲಿಯೂ ಬಾಣಂತಿಯರನ್ನ ನಡೆಸಿಕೊಂಡ ರೀತಿಯಲ್ಲಿಯೇ ನಡೆಸಿಕೊಳ್ಳುತ್ತಾರೆ. ಮೈನೆರೆದವರ ಮತ್ತು ಮುಟ್ಟಾದವರ ನೆರಳು ಯಾರ ಮೇಲು ಬೀಳುವಂತಿಲ್ಲ. ಊಟವನ್ನ ಕೊಡುವಾಗ ದೂರ ನಿಂತು ಕೈಗೆ ಹಾಕುತ್ತಾರೆ. ನೀರನ್ನು ಬೊಗಸೆಗೆ ಮೇಲಿನಿಂದ ಸುರಿಯುತ್ತಾರೆ. ದಿನನಿತ್ಯದ ಶುಚಿತ್ವದ ಬಗ್ಗೆ ಗತಿಯೇನು? ಎಂಬುದರ ಬಗ್ಗೆ ಯಾರು ಯೋಚಿಸುವುದಿಲ್ಲ. ಅಷ್ಟರ ಮಟ್ಟಿಗೆ ಸೂತಕದ ಹೆಸರಲ್ಲಿ ಮಡಿ ಮೈಲಿಗೆಯನ್ನ ಆಚರಿಸುತ್ತಾರೆ. ಮೈನೆರೆದ ಹೆಣ್ಣುಮಕ್ಕಳು ಶಾಲೆಯಲ್ಲಿ ಕಲಿಯುತ್ತಿದ್ದರೆ ಮೈನೆರೆದಂದಿನಿಂದ ಶಾಲೆಯನ್ನ ಮಧ್ಯಕ್ಕೆ ಬಿಡಿಸುತ್ತಾರೆ. ಈ ಕಾರಣದಿಂದಾಗಿಯೇ ಈ ಸಮುದಾಯದ ಹೆಣ್ಣುಮಕ್ಕಳು ಕಾಲೇಜು ವಿದ್ಯಾಭ್ಯಾಸವನ್ನೇ ನೋಡಿಲ್ಲ. ಮೈನೆರೆದ ತಕ್ಷಣ ಮನೆಯವರು ಎಷ್ಟೋ ಶ್ರೀಮಂತರಿರಲಿ, ಹತ್ತಿರದಲ್ಲಿ ಕಾಲೇಜು ಶಿಕ್ಷಣದ ಅವಕಾಶವಿರಲಿ ಹೆಣ್ಣುಮಕ್ಕಳು ಶಿಕ್ಷಣವನ್ನ ಮುಂದುವರಿಸುವಂತಿಲ್ಲ. ಇಂದು ಗ್ರಾಮೀಣ ಪ್ರದೇಶಗಳಲ್ಲಿ ಶಾಲೆ

ಬಿಡುತ್ತಿರುವವರಲ್ಲಿ (drop-outs) ಕಾಡುಡುಗೊಲ್ಲ ಸಮುದಾಯದ ಹೆಣ್ಣುಮಕ್ಕಳೇ ಅತೀ ಹೆಚ್ಚು ಎಂದು ಹೇಳಬಹುದು. ಮೈನೆರೆಯುವುದು ಒಂದು ಪ್ರಕೃತಿಯ ನಿಯಮ ವಾಗಿದ್ದರೂ, ಕಾಡುಗೊಲ್ಲ ಸಮುದಾಯದ ಹೆಣ್ಣುಮಕ್ಕಳಿಗೆ ಶಿಕ್ಷಣದ ದೃಷ್ಟಿಯಿಂದ ಇದು ಒಂದು ಶಾಪವಾಗಿ ಪರಿಣಮಿಸಿದೆ. ಎ ಎ ಡಿ ಲೂಯಿಸ್‌ರವರು ಕಾಡುಗೊಲ್ಲರ ಹೆಣ್ಣುಮಗಳ ಋತುಮತಿಯ ಸಂಪ್ರದಾಯವನ್ನು ಕುರಿತು ಈ ರೀತಿ ಹೇಳುತ್ತಾರೆ. Kadu Gollas observe the taboos connected with the menstrual flow. A girl on attaining puberty is segregated for 21 days in a far-away hut made exclusively of green grass and leaves (Luiz, A A D: 1963:88-89).

ಇತ್ತೀಚೆಗೆ ವಿದ್ಯಾವಂತ ನಗರವಾಸಿ ನೌಕರಿಯಲ್ಲಿರುವ ತಂದೆ-ತಾಯಿಗಳು ಇದನ್ನ ಒಂದು ಸೂತಕ ಎಂದು ಭಾವಿಸದೆ ತಮ್ಮ ಹೆಣ್ಣುಮಕ್ಕಳನ್ನ ಶಾಲಾ-ಕಾಲೇಜುಗಳಿಗೆ ಕಳುಹಿಸಲು ಪ್ರಾರಂಭಿಸಿದ್ದಾರೆ. ಆದರೆ ಅಂತಹವರ ಸಂಖ್ಯೆ ಕಡಿಮೆ. ಆದಾಗ್ಯೂ, ಕೆಲವು ಸಂಪ್ರದಾಯಸ್ಥ, ನಗರವಾಸಿ ಸಮುದಾಯದ ಜನರು ನಗರದಲ್ಲಿ ಮನೆ ನಿರ್ಮಿಸುವಾಗಲೇ ಮೈನೆರೆದ ಹೆಣ್ಣುಮಕ್ಕಳಿಗೋಸ್ಕರ ಮತ್ತು ಮುಟ್ಟಾದವರಿಗೆಂದೇ ಒಂದು ಪ್ರತ್ಯೇಕ ಕೊಠಡಿ ನಿರ್ಮಿಸುತ್ತಿರುವುದನ್ನ ನೋಡಿದರೆ ಇಂತಹ ಆಚರಣೆಗಳಿಗೆ ಮತ್ತು ಸೂತಕ ಮತ್ತು ಮಡಿ-ಮೈಲಿಗೆಗೆ ಕೊನೆ ಎಲ್ಲಿ ಎಂಬ ಭಾವನೆ ಉಂಟಾಗುತ್ತದೆ. ಬಹುಶಃ ಕಾಲವೇ ಇವೆಲ್ಲವನ್ನ ಬದಲಾಯಿಸಬೇಕು. ಇದೆಲ್ಲದಕ್ಕೂ ಶಿಕ್ಷಣವೇ ಒಂದು ತಾರಕ ಮಂತ್ರವಾಗಬೇಕು.

ನಾಮಕರಣ : ಕಾಡುಗೊಲ್ಲರಲ್ಲಿ ನಾಮಕರಣ ಕ್ರಿಯೆಯು ಒಂದು ಮುಖ್ಯವಾದ ಸಂಪ್ರದಾಯವಾಗಿದೆ. ಮಗು ಮತ್ತು ತಾಯಿ(ಬಾಣಂತಿ)ಯು ಎರಡು ತಿಂಗಳು ಹಟ್ಟಿಯ ಹೊರಗೆ ಕಾಲ ಕಳೆದು ಸೂತಕ ಕಳೆದು ಹಟ್ಟಿಯ ಒಳಗೆ ಪ್ರವೇಶಿಸಬೇಕಾಗುತ್ತದೆ. ಹಟ್ಟಿಯ ಒಳಗೆ ಪ್ರವೇಶಿಸುವ ದಿನ ಎಲ್ಲಾ ರೀತಿಯ ಸೂತಕವನ್ನು ಕಳೆಯಲಾಗುತ್ತಿದೆ. ನಂತರ ಸಂಜೆಯ ವೇಳೆಗೆ ತಮ್ಮ ಹಟ್ಟಿಯ ದೇವಸ್ಥಾನದಲ್ಲಿ ಪೂಜಾರಿಗೆ ಹೇಳಿ ವಿಶೇಷ ನಾಮಕರಣ ಪೂಜೆಯನ್ನು ಇಟ್ಟುಕೊಳ್ಳುತ್ತಾರೆ. ಆಗ ಹಟ್ಟಿಯ ಜನರು ಸಂಬಂಧಿಕರು ತಂದೆ ತಾಯಂದಿರು ದೇವಸ್ಥಾನದ ಹತ್ತಿರ ಬರುತ್ತಾರೆ. ಕಾಡುಗೊಲ್ಲರು ಕುರಿಗಳನ್ನು ಸಾಕುವುದರಿಂದ ಆ ಕುರಿಗಳಲ್ಲಿ ಒಂದು ಕುರಿಯನ್ನು 'ಜನ್ನಿಗೆ' ಕುರಿ ಎಂದು ನಾಮಕರಣ ಮಾಡಿರುತ್ತಾರೆ. ಆ ಜನ್ನಿಗೆ ಕುರಿಯು ಪವಿತ್ರವಾದುದು ಎಂಬುದಾಗಿ ಕಾಡುಗೊಲ್ಲರ ನಂಬಿಕೆ. ಹಾಗೆಯೇ ಜನ್ನಿಗೆ ಕುರಿಯ ಹಾಲು ಅಷ್ಟೇ ಪವಿತ್ರವಾದುದು. ಅಂದಿನ ದಿನ ಜನ್ನಿಗೆ ಕುರಿಯಿಂದ ಹಾಲನ್ನು ಕರೆದು ಹಾಲನ್ನು ದೇವಸ್ಥಾನಕ್ಕೆ ತರುತ್ತಾರೆ. ಆ ಹಾಲಿನೊಳಕ್ಕೆ ಸ್ವಲ್ಪ ಹಸುವಿನ ತುಪ್ಪವನ್ನು ಬೆರೆಸುತ್ತಾರೆ. ನಂತರ ದೇವರಿಗೆ ಪೂಜೆ ಮಾಡಲಾಗುತ್ತದೆ. ಪೂಜೆ ಮಾಡಿದ ನಂತರ ಪೂಜಾರಿಯು ಮೂರು ಹನಿ ಜನ್ನಿಗೆ ಕುರಿಯ ಹಾಲನ್ನು ಮಗುವಿನ ಬಾಯೊಳಕ್ಕೆ ಬಿಡುತ್ತಾನೆ.

ಬಿಡುವ ವೇಳೆಯಲ್ಲಿ ಮೊದಲೇ ನಿರ್ಧರಿಸಿದ್ದ ಹೆಸರನ್ನು ಮೂರು ಬಾರಿ ಮಗುವಿನ ಕಿವಿಯೊಳಗೆ ಪೂಜಾರಿಯು ಹೇಳುತ್ತಾನೆ. ಇಲ್ಲಿಗೆ ನಾಮಕರಣ ಸಂಪ್ರದಾಯ ಮುಗಿಯುತ್ತದೆ.

ಸಾಮಾನ್ಯವಾಗಿ ಕಾಡುಗೊಲ್ಲರು ಹೆಸರಿಡುವಾಗ ತಮ್ಮ ದೇವರುಗಳ ಅಥವಾ ಪೂರ್ವಿಕರ ಅಥವಾ ಸಾಂಸ್ಕೃತಿಕ ವೀರರ ಹೆಸರನ್ನಿಡುವುದು ವಾಡಿಕೆ. ಈ ಹೆಸರನ್ನಿಡುವಾಗ ದೊಡ್ಡ ಸಮಾರಂಭವನ್ನು ಏರ್ಪಡಿಸದೆ ಸರಳವಾಗಿ ಹೆಸರಿಡುವ ಕಾರ್ಯವನ್ನು ಮುಗಿಸಿ ಬಿಡುತ್ತಾರೆ.

ಎಲ್ ಕೆ ಎ ಅಯ್ಯರ್‌ರವರು ಕಾಡುಗೊಲ್ಲರ ಹೆಸರುಗಳನ್ನು ಹೀಗೆ ದಾಖಲಿಸಿದ್ದಾರೆ.

| | | |
|---|---|---|
| ಯರ್ರ | – | ಕೆಂಪು |
| ಕರಿಯ | – | ಕಪ್ಪು |
| ಕರಡಿ | – | ಕರಡಿ |
| ಮಂಗ | – | ಕೋತಿ |
| ಮಿಂಚ | – | ಬೆಳಕು |
| ಕೆಂಜೆದೆಯಾ | – | ಕೆಂಪು ಜೆಡೆಯವನು |
| ಕೆಂದ | – | ಕೆಂದ ಬಣ್ಣ |
| ಕಾಟಯ್ಯ | – | ಕಾಡು |
| ಹುಲಿಯ | – | ಹುಲಿ |
| ಗಿರಿಯ | – | ಬೆಟ್ಟ |
| ಜುಂಜಪ್ಪ | – | ಕಾಡುಗೊಲ್ಲರ ದೇವರು |
| ಚಿತ್ತಯ್ಯ | – | ಕಾಡುಗೊಲ್ಲರ ಪೂರ್ವಿಕ |

ಹೀಗೆ ಕಾಡುಗೊಲ್ಲರು ತಮ್ಮ ಮಕ್ಕಳಿಗೆ ಸರಳವಾದ ಹೆಸರುಗಳನ್ನಿಡುತ್ತಾರೆ. ಇನ್ನು ಮುಂತಾದ ಗಂಡಸರ ಹೆಸರುಗಳೆಂದರೆ, ಜುಂಜಯ, ಚಿತ್ತಯ್ಯ, ಕೆಂದಯ್ಯ, ಮಾರಣ್ಣ, ತಿಮ್ಮಣ್ಣ, ಕೆಂದಣ್ಣ, ಕರಿಯಣ್ಣ, ಈರಣ್ಣ, ಸಣ್ಣಯ್ಯ, ಹಾಲಪ್ಪ, ಭೂತಪ್ಪ, ಸಿದ್ಧಯ್ಯ ಉತ್ತಪ್ಪ, ಕರಿನಾಗಪ್ಪ, ಚಂಗಪ್ಪ, ಕ್ಯಾತಪ್ಪ, ಚಿಕ್ಕಣ್ಣ, ಜಡಿಯಪ್ಪ, ಲಕ್ಕಪ್ಪ, ಇತ್ಯಾದಿ. ಹೆಂಗಸರ ಹೆಸರುಗಳೆಂದರೆ ಮಾರಕ್ಕ, ತಿಮ್ಮಕ್ಕ, ಹಾಲಮ್ಮ, ಸಾಕಮ್ಮ, ಕೆಂದಮ್ಮ, ತಾಯಮ್ಮ, ಚೆನ್ನಮ್ಮ, ಚಿನ್ನಮ್ಮ, ಕಾಟಮ್ಮ, ಹಾಲಮ್ಮ, ಸಣ್ಣಲಮ್ಮ, ಕರಿಯಮ್ಮ, ಚಿತ್ತಮ್ಮ, ಶಿವಮ್ಮ ಜುಂಜಮ್ಮ ಇತ್ಯಾದಿ. ಇತ್ತೀಚೆಗೆ ಆಧುನೀಕರಣ ಮತ್ತು ನೆರೆಹೊರೆಯವರ ಸಮುದಾಯದ ಜನರ ಅನುಕರಣೆಯಿಂದಾಗಿ ಆಧುನಿಕ ಹೆಸರುಗಳು ಇಡಲು ಪ್ರಾರಂಭಿಸಿದ್ದಾರೆ.

ಸೀಮಂತ : ಕಾಡುಗೊಲ್ಲರಲ್ಲಿ ಸೀಮಂತದ ಕಾರ್ಯವು ಬಹಳ ವಿಜೃಂಭಣೆಯಿಂದ ನಡೆಯುವುದಿಲ್ಲ. ಗರ್ಭಿಣಿ ಹೆಂಗಸರಿಗೆ ಬೇಸರವಾಗದಂತೆ ನೋಡಿಕೊಳ್ಳುತ್ತಾರೆ. ಇವರಲ್ಲಿ ಯಾವುದೇ ಸಮಾರಂಭ ನಡೆಯದಿದ್ದರೂ, ಸಂಬಂಧಿಕರು, ನೆರೆಹೊರೆಯವರು

ಮತ್ತು ಹಟ್ಟಿಯ ಜನರು ಗರ್ಭಿಣಿ ಹೆಂಗಸರನ್ನು ತಮ್ಮ ಮನೆಗೆ ಕರೆದೊಯ್ದು ವಿವಿಧ ಭಕ್ಷ್ಯ ಭೋಜನ ಮಾಡಿ ರುಚಿಕರ ಮತ್ತು ಉತ್ಕೃಷ್ಟವಾದ ಆಹಾರ ನೀಡುತ್ತಾರೆ. ಒಬ್ಬೊಬ್ಬರೂ ಒಂದೊಂದು ದಿನದಂದು ಭೋಜನವೇರ್ಪಡಿಸುತ್ತಾರೆ. ಗರ್ಭಿಣಿ ಹೆಂಗಸು ಮಂಸಾಹಾರಿಯಾಗಿದ್ದರೆ, ಮಾಂಸಹಾರವನ್ನು ತಯಾರಿಸುತ್ತಾರೆ. ಇಲ್ಲ, ಸಸ್ಯಾಹಾರವನ್ನು ಮಾಡುತ್ತಾರೆ. ಹೀಗೆ ಹಟ್ಟಿಯ ಎಲ್ಲಾ ಜನರು ಗರ್ಭಿಣಿ ಸ್ತ್ರೀಯನ್ನು ಕರೆದು ಕಳುಹಿಸುತ್ತಾರೆ. ಜೊತೆಗೆ ಬೇರೆ ಹಟ್ಟಿಯ ಅಥವಾ ಊರಿನ ಸಂಬಂಧಿಕರು ಅಲ್ಲಿಂದಲೇ ಕೋಳಿ ತಂದು ಗರ್ಭಿಣಿ ಹೆಂಗಸಿನ ಮನೆಯಲ್ಲಿ ಅಡಿಗೆ ಮಾಡಿ ಊಟ ಬಡಿಸುತ್ತಾರೆ. ಈ ಒಂದು ಪದ್ಧತಿಯು ಮುಖ್ಯವಾಗಿ ಬುಡಕಟ್ಟುಗಳಲ್ಲಿ ಸಾಮುದಾಯಿಕ ಜೀವನವನ್ನು ತೋರಿಸುತ್ತದೆ. ಹಾಗೆ ಗರ್ಭಿಣಿ ಹೆಂಗಸಿಗೆ ಮನೆಯಲ್ಲಿಯೇ ಕುಳಿತು ಬೇಸರವಾಗದಿರಲಿ ಎಂದು ಊರಿನ ಜನರೆಲ್ಲಾ ಕರೆದು ಕಳುಹಿಸುತ್ತಾರೆ. ಆದರೆ ಇತ್ತೀಚೆಗೆ ಇತರೆ ಸಮುದಾಯದವರ ಸಂಪರ್ಕದಿಂದಾಗಿ ಕಾಡುಗೊಲ್ಲರಲ್ಲಿಯೂ ಸೀಮಂತ ಕಾರ್ಯವನ್ನು ಮಾಡುತ್ತಿದ್ದಾರೆ. ಆದರೂ, ಇದನ್ನು ಮಾಡುವವರು ತುಂಬಾ ವಿರಳವಾಗಿದ್ದು, ವಿದ್ಯಾವಂತ ಮತ್ತು ನಗರ ಸಮುದಾಯದ ಜನರಿಗೆ ಸೀಮಿತವಾಗಿದೆ ಎಂದು ಹೇಳಬಹುದು.

ಮರಣ : ಜೀವನ ಚಕ್ರದಲ್ಲಿ ಇದು ಕೊನೆಯ ಹಂತವಾಗಿದೆ. ವ್ಯಕ್ತಿಯು ಸತ್ತ ನಂತರ ಬುಡಕಟ್ಟುಗಳಲ್ಲಿ ಹಲವಾರು ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ. ಇದು ಭಾರತೀಯ ಸಮುದಾಯಗಳಲ್ಲಿ ಒಂದು ಸಮುದಾಯಕ್ಕಿಂತ ಇನ್ನೊಂದು ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಕಾಡುಗೊಲ್ಲರಲ್ಲಿ ವ್ಯಕ್ತಿಯು ಸತ್ತ ತಕ್ಷಣವೇ ವ್ಯಕ್ತಿಯ ಸಂಬಂಧಿಕರು ಮತ್ತು ಗ್ರಾಮದ ಜನರು ಸ್ವಯಂ ಇಚ್ಛೆಯಿಂದ ಸತ್ತ ವ್ಯಕ್ತಿಯ ಸಂಬಂಧಿಕರು ಯಾವ ಯಾವ ಹಟ್ಟಿಗಳಲ್ಲಿರುತ್ತಾರೋ ಅಲ್ಲಿಗೆ ಹೋಗಿ ಮಣ್ಣಿಗೆ ಬರುವಂತೆ ಸುದ್ದಿ ಮುಟ್ಟಿಸುತ್ತಾರೆ. ಸಂಬಂಧಿಕರು ಬಂದಾಗ ಶವಕ್ಕೆ ಮೈತೊಳೆದು ಪೂಜೆ ಮಾಡುತ್ತಾರೆ. ಬಿದಿರಿನ ಗಳಗಳಿಂದ ಅಥವಾ ಆಲದ ಮರದ ಗಳದಿಂದ ಚಟ್ಟ ತಯಾರಿಸಿ ಚಟ್ಟದ ಮೇಲೆ ಶವ ಮಲಗಿಸಿ, ಸೋದರಿಕೆ ಸಂಬಂಧಿಕರು ತಂದ ಹೊಸ ಬಟ್ಟೆಯಿಂದ ಮುಚ್ಚಿ ಇಬ್ಬರು ಮಾತ್ರ ಶವ ಹೋರುತ್ತಾರೆ. ಕೆಲವರು ಶವವನ್ನು ತಮ್ಮ ತಮ್ಮ ಜಮೀನಿನಲ್ಲಿ ಹೂಳುತ್ತಾರೆ. ಆದರೆ ಕೆಲವು ಕಡೆ ಒಂದು ನಿರ್ದಿಷ್ಟ ಜಾಗದಲ್ಲಿ ಅಥವಾ ಕೆರೆಯ ಅಂಗಳದಲ್ಲಿ ಹೂಳುವ ಪದ್ಧತಿಯನ್ನು ನೋಡಬಹುದಾಗಿದೆ. ಕಾಡುಗೊಲ್ಲರಲ್ಲಿ ಶವವನ್ನು ಹೂಳುವ ಪದ್ಧತಿ ಇದೆ. ಹೂಳುವ ಗುಂಡಿಗೆ ಮೂರು ಪ್ರದಕ್ಷಿಣೆ ಮಾಡಿಸಿ, ಮತ್ತೆ ನೀರು ತುಂಬಿದ ಘಟ ಒಡೆಸುವ ಆಚರಣೆಯನ್ನು ನೆರವೇರಿಸುತ್ತಾರೆ. ನಂತರ ಶವವನ್ನು ಪೂರ್ಣ ಬೆತ್ತಲೆಯಾಗಿಸಿ ತಲೆಯನ್ನು ಸೂರ್ಯ ಮೂಡುವ ದಿಕ್ಕಿಗೂ, ಕಾಲನ್ನು ಪಡುವಲ ಕಡೆಗೂ ಮಲಗಿಸಿ ನೆರೆದಿದ್ದ ಜನರೆಲ್ಲಾ ಹಿಡಿ ಮಣ್ಣು ಹಾಕುತ್ತಾರೆ. ಅನಂತರ ಗುಂಡಿಯನ್ನು ಪೂರ್ಣವಾಗಿ ಮುಚ್ಚಿ ಮೇಲೆ ಮುಳ್ಳ ಎಳೆದು, ಹಟ್ಟಿಯವರೆಲ್ಲಾ ಸಮೀಪದ ಕೆರೆ, ತೊರೆ ಅಥವಾ ದೋಣಿಗಳಲ್ಲಿ ಕೈಕಾಲು ತೊಳೆದು ಬರುವರು (ಕೃಷ್ಣಮೂರ್ತಿ ಹನೂರು:೧೯೯೮:೮೩೨).

ಕಾಡುಗೊಲ್ಲರಲ್ಲಿ ಮರಣ ಹೊಂದಿದ ಮನೆಯವರು ಹಲವು ರೀತಿಯ ಸೂತಕಗಳನ್ನು ಕಳೆಯಬೇಕಾಗುತ್ತದೆ. ಹೆಣವನ್ನು ಮಣ್ಣು ಮಾಡಿ ಬಂದ ನಂತರ ಸೆಗಣಿಯ ಮುದ್ದೆಗೆ ಒಂದೊಂದು ಕಳ್ಳಿಯನ್ನು ಅಂಟಿಸಿ ಹಟ್ಟಿಯೊಳಕ್ಕೆ ಹೋಗಿ ಸತ್ತ ವ್ಯಕ್ತಿಯ ಮನೆಯಲ್ಲಿ ಉರಿಯುತ್ತಿರುವ ಪಣತೆಗೆ ಕೈಮುಗಿದು ಆ ಕಳ್ಳಿಯನ್ನು ಮನೆಯೊಳಗೆ ಎಸೆಯುತ್ತಾರೆ.

ಮಾರನೆಯ ದಿನ ಅಗಸನನ್ನು ಕರೆಯಿಸಿ ಸತ್ತ ವ್ಯಕ್ತಿಯ ಮನೆಯನ್ನು ಸೆಗಣಿಯಿಂದ ಸಾರಿಸುತ್ತಾರೆ. ಮೊದಲನೆಯ ದಿನ ಶವದ ಮೇಲಿಡಲು ಮಡಕೆಯಲ್ಲಿ ಅನ್ನ ಮಾಡಿದ ವಿಧವೆಯನ್ನು ಕರೆಸುತ್ತಾರೆ. ಕುಂಬಾರರ ಮನೆಯಿಂದ ಒಂದು ಮಡಕೆಯನ್ನು, ಮುಚ್ಚಳವನ್ನು ತರಿಸುತ್ತಾರೆ. ವಿಧವೆ ಅಂಗೈಯಲ್ಲಿ ಮೂರು ಸಲ, ಮುಂಗೈಯಿಂದ ಮೂರು ಸಲ ಅಕ್ಕಿಯನ್ನು ಮಡಕೆಗೆ ಹಾಕಿ, ಅದಕ್ಕೆ ನೀರು ಹಾಕಿ, ಮಡಕೆಯನ್ನು ಕಲ್ಲುಗುಂಡಿನ ಒಲೆಯ ಮೇಲಿಟ್ಟು ಅಡುಗೆ ಮಾಡುತ್ತಾಳೆ. ಅಡುಗೆಯಾದ ನಂತರ ಅನ್ನವನ್ನು ಒಂದು ದೊಡ್ಡ ಅಡಿಕೆ ಪಟ್ಟೆಗೆ ಸುರಿಯುತ್ತಾಳೆ. ಅಂದು ಕ್ಷೌರಿಕನನ್ನು ಕರೆಸಿ, ಹೆಣವನ್ನು ಹೊತ್ತ ಇಬ್ಬರು ವ್ಯಕ್ತಿಗಳಿಗೂ ಕ್ಷೌರ ಮಾಡಿಸುತ್ತಾರೆ. ನೀರು ಹಾಕಿದ ಮೇಲೆ ಅಗಸರವನು ಅವರಿಗೆ ಗಂಜಲಿಯನ್ನು ಕುಡಿಸುತ್ತಾನೆ. ವಿಧವೆ ಅಡಿಕೆ ಪಟ್ಟೆಯಲ್ಲಿ ಸುರಿದ ಅನ್ನಕ್ಕೆ ಮೊಸರನ್ನ ಹಾಕಿ ಕಲಸಿ ಅದನ್ನು ತೆಗೆದುಕೊಂಡು ಸಮಾಧಿಯ ಬಳಿಗೆ ಹೋದಾಗ ಹಟ್ಟಿಯವರೆಲ್ಲಾ ಅವಳ ಹಿಂದೆಯೇ ಹೋಗುತ್ತಾರೆ. ಸಮಾಧಿ ಇನ್ನೂ ಸ್ವಲ್ಪ ದೂರವಿದೆ ಎನ್ನುವಾಗ ಅವಳು ಅಡಕೆ ಪಟ್ಟೆಯಲ್ಲಿದ್ದ ಅನ್ನವನ್ನು ನೆಲದ ಮೇಲೆ ಇಡುತ್ತಾಳೆ. ತೆಂಗಿನ ಕಾಯಿ ಒಡೆದು, ಊದುಕಡ್ಡಿಯನ್ನು ಹಚ್ಚಿ ಅದಕ್ಕೆ ಪೂಜೆ ಮಾಡುತ್ತಾಳೆ. ಅನಂತರ ಅವಳ ಹಿಂದೆ ಬಂದವರು ಒಬ್ಬೊಬ್ಬರು ಒಂದೊಂದು ಗೇಣಿನಷ್ಟು ದೂರ ಮುಂದಕ್ಕೆ ಇಟ್ಟ ಮೇಲೆ ಶವವನ್ನು ಹೊತ್ತ ಇಬ್ಬರೂ ಅದನ್ನು ಒಂದೊಂದು ಗೇಣಿನಷ್ಟು ದೂರ ಮುಂದಕ್ಕೆ ಇಡುತ್ತಾರೆ. ಅನಂತರ ಎಲ್ಲರೂ ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿರುತ್ತಾರೆ. ಆ ಸಮಯದಲ್ಲಿ ಕಾಗೆ ಬಂದು ಆ ಅನ್ನವನ್ನು ಮುಟ್ಟಿದರೆ ಸತ್ತ ವ್ಯಕ್ತಿಗೆ ಒಳ್ಳೆಯದೆಂದು ನಂಬುತ್ತಾರೆ. ಕಾಗೆ ಬರದಿದ್ದರೆ ಶವವನ್ನು ಹೊತ್ತವರು ಆ ಅನ್ನವನ್ನು ತೆಗೆದುಕೊಂಡು ಹತ್ತಿರದಲ್ಲಿರುವ ಹಳ್ಳಕ್ಕೋ, ಕೆರೆಗೋ ಬಿಟ್ಟು ಬಿಡುತ್ತಾರೆ. ಅನಂತರ ಎಲ್ಲರೂ ಹಟ್ಟಿಗೆ ಹಿಂತಿರುಗಿ ಬರುತ್ತಾರೆ (ಶಂಕರನಾರಾಯನ, ತೀ ನಂ:೧೯೮೬:೧೬೧). ಈ ಪದ್ಧತಿಯು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರಬಹುದಾದ ಸಾಧ್ಯತೆಯಿದೆ.

ಹೆಣ ಹೊತ್ತವರನ್ನು ಹಟ್ಟಿಯೊಳಕ್ಕೆ ಸೇರಿಸಿಕೊಳ್ಳುವ ಮೊದಲು ಒಂದು ಸಂಪ್ರದಾಯವನ್ನು ಆಚರಿಸುತ್ತಾರೆ. ಕಾಗೆಗೆ ಇಡಲು ಬೇಕಾದ ಅನ್ನವನ್ನು ಮಾಡಿದ ವಿಧವೆಯು ಮಡಕೆಗೆ ಒಂದು ಸೇರು ಅಕ್ಕಿಯನ್ನು ಹಾಕಿ ಅನ್ನ ಮಾಡುತ್ತಾಳೆ. ಎರಡು ತುದಿಗಳಲ್ಲಿಯೂ ಬಳೆ ಹಾಕಿರುವ ಒಂದು ಒನಕೆಯನ್ನು ಒಂದು ಬಟ್ಟಲು ಹರಳೆಣ್ಣೆಯನ್ನು ಒಂದು ಕೋಳಿಯ ಪುಕ್ಕವನ್ನು ತರುತ್ತಾಳೆ. ಒನಕೆಗೆ ಸುಣ್ಣವನ್ನು,

ಕೆಮ್ಮಣ್ಣನ್ನು ಬಳಿಯುತ್ತಾಳೆ. ಹೆಣ ಹೊತ್ತವರಲ್ಲಿ ಒಬ್ಬನನ್ನು ಒನಕೆಯ ಮೇಲೆ ಕೂರಿಸುತ್ತಾಳೆ. ಹೆಣ ಹೊತ್ತವರಲ್ಲಿ ಇನ್ನೊಬ್ಬ ಕೋಳಿಯ ಪುಕ್ಕವನ್ನು ಹರಳೆಣ್ಣೆಯಲ್ಲಿ ಅದ್ದಿ ಒನಕೆಯ ಮೇಲೆ ಕುಳಿತವನ ಹೆಗಲನ್ನು ಆ ಪುಕ್ಕದಿಂದ ಸವರುತ್ತಾನೆ. ಒನಕೆಯ ಮೇಲೆ ಕುಳಿತಿದ್ದವನು **"ಹೆಗಲು ಇಳಿಸಿಕೊಂಡೆ"** ಎಂದು ಹೇಳಿ, ಒನಕೆಯನ್ನು ಬಿಟ್ಟು ಮೇಲೇಳುತ್ತಾನೆ. ಆಗ ಇನ್ನೊಬ್ಬ ಒನಕೆಯ ಮೇಲೆ ಕುಳಿತುಕೊಳ್ಳುತ್ತಾನೆ. ಮೊದಲನೆಯವನು ಹರಳೆಣ್ಣೆಯಲ್ಲಿ ಕೋಳಿಯ ಪುಕ್ಕವನ್ನು ಅದ್ದಿ ಒನಕೆಯ ಮೇಲೆ ಕೂತವನ ಹೆಗಲ ಮೇಲೆ ಸವರುತ್ತಾನೆ **"ಹೆಗಲು ಇಳಿಸಿಕೊಂಡೆ'** ಎಂದು ಅವನು ಹೇಳಿ ಒನಕೆಯನ್ನು ಬಿಟ್ಟು ಮೇಲಕ್ಕೇಳುತ್ತಾನೆ. ಅನಂತರ ಆ ವಿಧವೆ ಅವರಿಬ್ಬರಿಗೂ ಊಟಕ್ಕೆ ಬಡಿಸಿ, ತಾನೂ ಊಟ ಮಾಡುತ್ತಾಳೆ. ಅಲ್ಲಿಗೆ ಮೂರು ದಿನದ ಸೂತಕ ಕಳೆಯುತ್ತದೆ. ಮೂವರೂ ಹಟ್ಟಿಯೊಳಕ್ಕೆ ಬರುತ್ತಾರೆ. ಅಂದು ಸಾಯಂಕಾಲ ಸತ್ತ ವ್ಯಕ್ತಿಯ ಮಕ್ಕಳು ಹಟ್ಟಿಯವರಿಗೆಲ್ಲಾ ಊಟಕ್ಕೆ ಹಾಕುತ್ತಾರೆ (ಅವರೇ:೯೮೨:೧೬೧).

ಒಂದು ತಿಂಗಳಾದ ಮೇಲೆ ಸತ್ತ ವ್ಯಕ್ತಿಯ ಮಕ್ಕಳು ಸಮಾಧಿಯ ಬಳಿಗೆ ಹಣ್ಣು ಹೂವು ಕಾಯಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಅವರೊಡನೆಯೇ ಹಟ್ಟಿಯ ಜನರೆಲ್ಲಾ ಹೋಗುತ್ತಾರೆ. ಮಕ್ಕಳು ಸಮಾಧಿಯ ಪೂಜೆ ಮಾಡಿದ ಮೇಲೆ ಎಲ್ಲರೂ ಒಂದೊಂದು ಹೂವನ್ನು ಒಂದೊಂದು ತೊಟ್ಟು ಹಾಲನ್ನು ಸಮಾಧಿಯ ಮೇಲೆ ಹಾಕುತ್ತಾರೆ. ಸತ್ತ ವ್ಯಕ್ತಿಯ ಮಕ್ಕಳು ಎರಡು ಚಿಕ್ಕ ಮಡಕೆಗಳಲ್ಲಿ ಸಮಾಧಿಯ ಮಣ್ಣನ್ನು ತುಂಬಿ ಒಂದು ಮಡಕೆಯ ಮಣ್ಣನ್ನು ನೀರಿಗೆ ಕದರುತ್ತಾರೆ. ಇನ್ನೊಂದು ಮಡಕೆಯ ಮಣ್ಣನ್ನು ತಮ್ಮ ಜಮೀನಿನಲ್ಲಿ ಗುಂಡಿ ತೋಡಿ ಅದರೊಳಕ್ಕೆ ಹಾಕಿ ಮಣ್ಣು ಮುಚ್ಚಿ, ಅದರ ಮೇಲೊಂದು ಕಲ್ಲು ನಟ್ಟು ಅದನ್ನು ಸಮಾಧಿಯೆಂದು ಪರಿಗಣಿಸುತ್ತಾರೆ (ಅವರೇ:೯೮೨:೧೬೧-೧೬೨).

ಇತ್ತೀಚಿನ ದಿನಗಳಲ್ಲಿ ೯ ಅಥವಾ ೨೧ ದಿನಗಳಲ್ಲಿ ಪುಣ್ಯತಿಥಿ ಮಾಡಿ ಸಾರ್ವಜನಿಕರಿಗೂ ಊಟ ಬಡಿಸುವ ಅನುಕರಣೆ ಮಾಡುತ್ತಿದ್ದಾರೆ. ಮತ್ತೆ ಕೆಲವು ಸಂಪ್ರದಾಯಗಳನ್ನು ನಿಧಾನವಾಗಿ ಕೈಬಿಡುತ್ತಿದ್ದಾರೆ. ಆದಷ್ಟು ಸರಳವಾಗಿ ಸತ್ತ ವ್ಯಕ್ತಿಯ ಕಾರ್ಯ ಮುಗಿಸುತ್ತಾರೆ. ಎಷ್ಟೇ ರೀತಿಯ ಬದಲಾವಣೆಗಳು ಶವ ಸಂಸ್ಕಾರದಲ್ಲಿ ಗೋಚರಿಸುವುದನ್ನು ನಾವು ಕಾಣಬಹುದಾಗಿದೆ.

**ಧಾರ್ಮಿಕ ವಿಧಿ ವಿಧಾನಗಳು, ದೇವರು, ಧಾರ್ಮಿಕ ಕೇಂದ್ರಗಳು**

ದೇವರು, ದಿಂಡ್ರು, ಧರ್ಮ, ಆಚರಣೆಗಳು, ರಾಜ್ಯದ ಗೊಲ್ಲ ಸಮುದಾಯದ ದಿನನಿತ್ಯದ ಜೀವನದಲ್ಲಿ ಹಾಸುಹೊಕ್ಕಾಗಿವೆ. ಅಂದ ಮಾತ್ರಕ್ಕೆ ಇವರು ಯಾವುದೇ ಧರ್ಮದ ಅನುಯಾಯಿಗಳಾಗುವುದಿಲ್ಲ. ಇವರು ತಮ್ಮದೇ ಆದಂತಹ ಬುಡಕಟ್ಟು ಧರ್ಮವನ್ನ ಪಾಲಿಸುತ್ತಾರೆ. ಅಂದರೆ ಗಿಡ-ಮರ, ಕಲ್ಲು, ಬೆಟ್ಟ, ಪ್ರಾಣಿ ಇತ್ಯಾದಿ ನಿಸರ್ಗದತ್ತವಾದ ಪ್ರಕೃತಿಯ ಆರಾಧಕರಾಗಿದ್ದಾರೆ. ಇವರು ನಾಗರೀಕ ಸಮಾಜದಿಂದ ಬಹುದೂರ ಕಾಡು-ಮೇಡುಗಳಲ್ಲಿ ನೆಲೆಸಿರುವುದರಿಂದ ಸಹಜವಾಗಿಯೇ ಪ್ರಕೃತಿಯ

ಪೂಜಕರಾಗಿರುವುದು ಇದಕ್ಕೆ ಸಮರ್ಥನೆಯಾಗುತ್ತದೆ. ಗೊಲ್ಲ ಸಮುದಾಯವು ತಮ್ಮ ಜೀವನವನ್ನ ಹಬ್ಬ ಮತ್ತು ಜಾತ್ರೆಗಳನ್ನ ಆಚರಣೆ ಮಾಡುವುದಕ್ಕೆ ಮುಡಿಪಾಗಿಡುತ್ತಾರೆಂಬುದು ಆಶ್ಚರ್ಯಕರವಾದರೂ ಸತ್ಯದ ಸಂಗತಿ. ತಮ್ಮ ಬುಡಕಟ್ಟು ದೇವರುಗಳಿಗೆ ಇಡೀ ಜೀವನವನ್ನ ಧಾರೆಯೆರೆಯುತ್ತಿರುವುದನ್ನ ನೋಡಿದರೆ ಇವರ ನಿಸ್ವಾರ್ಥ ಮನೋಭಾವನೆ ಅರ್ಥವಾಗುತ್ತದೆ. ಇವರು ತಮಗೆ ಒಂದೊತ್ತಿಗೆ ಊಟಕ್ಕೆ ಇಲ್ಲದಿದ್ದರೂ ತಮ್ಮ ದೇವರುಗಳಿಗೆ ಕಾಣಿಕೆ ಕೊಡುವುದನ್ನಾಗಲೀ, ಜಾತ್ರೆಗಳನ್ನ ಸಂಘಟಿಸುವುದಾಗಲೀ, ಹಬ್ಬಗಳನ್ನ ಆಚರಿಸುವುದನ್ನಾಗಲೀ ಮರೆಯುವುದಿಲ್ಲ. ಇವರು ಸಾಮಾನ್ಯವಾಗಿ ಹಟ್ಟಿಯಲ್ಲಿ ವಾಸದ ನೆಲೆಗಳನ್ನ ಹೊಂದಿರುವುದರಿಂದ ಇಡೀ ಹಟ್ಟಿಯ ಜನರು ಕೂಡಿ ಸಾಮೂಹಿಕವಾಗಿ ಜಾತ್ರೆ ಹಬ್ಬಗಳನ್ನ ಆಚರಿಸುತ್ತಾರೆ. ಎ ಎ ಡಿ ಲೂಯಿಸ್ ರವರು ಕಾಡುಗೊಲ್ಲರ ದೇವರುಗಳನ್ನು ಕರಿತು ಈ ರೀತಿ ಹೇಳಿದ್ದಾರೆ. "Their own deities are Muttappa, Kyatedavaru, Chikkanna swamy, Chitradevru and the favourit is Junjappa. Their chief place of worship is at Hagalavadi in the Gubbi taluk (Luiz, A A D: 1963:87). ಇದಕ್ಕೆ ಸಮರ್ಥನೆಯಂತೆ ನಂಜುಡಯ್ಯನವರು ಕಾಡುಗೊಲ್ಲರ ಬುಡಕಟ್ಟು ದೇವರುಗಳನ್ನು ಕುರಿತು ಈ ಕೆಳಗಿನಂತೆ ಹೇಳಿದ್ದಾರೆ. Their Tribal deities are Junjappa who is much respcted and Chikkannaswamy, kyatedevaru, Chitradevaru, and Butappa(Nanjundaiah: 1908:11-12).

ಕಾಡುಗೊಲ್ಲರ ಬುಡಕಟ್ಟು ದೇವರುಗಳು

**ಜುಂಜಪ್ಪ ಸ್ವಾಮಿ :** ರಾಜ್ಯದಾದ್ಯಂತ ಗೊಲ್ಲ ಸಮುದಾಯದ ಬುಡಕಟ್ಟು ದೇವರುಗಳನ್ನ ಕಾಣಬಹುದಾದರೂ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಗೊಲ್ಲ ಸಮುದಾಯದ ಬುಡಕಟ್ಟು ದೇವರುಗಳು ಅಧಿಕವಾಗಿ ಕಂಡು ಬರುತ್ತವೆ. ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿ ಗೊಲ್ಲ ಸಮುದಾಯದ ಬುಡಕಟ್ಟು ಧಾರ್ಮಿಕ ಕೇಂದ್ರವಿದ್ದು, ಇಲ್ಲಿ ಜುಂಜಪ್ಪ ಎಂಬ ಸಾಂಸ್ಕೃತಿಕ ವೀರನು ಗೊಲ್ಲ ಜನರ ಆರಾಧ್ಯ ದೈವವಾಗಿ ಪೂಜಿಸಲ್ಪಡುತ್ತಿದ್ದಾನೆ. ಈ ಜುಂಜಪ್ಪ ಸ್ವಾಮಿ ದೇವರನ್ನ ಶ್ರೀ ಕೃಷ್ಣನ ಪ್ರತಿರೂಪ ಎಂದು ಕರೆಯಲಾಗುತ್ತದೆ. ಜುಂಜಪ್ಪ ಸ್ವಾಮಿಗೆ ಇಡೀ ರಾಜ್ಯದಲ್ಲಿ ಅದರಲ್ಲಿಯೂ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಭಕ್ತರಿದ್ದಾರೆ (Devotee). ಜುಂಜಪ್ಪ ದೇವರು ಕಾಡುಗೊಲ್ಲರ ಒಂದು ಬೆಡಗಾದ ಕರಡಿಗೊಲ್ಲರ ಮನೆದೇವರಾಗಿದ್ದಾರೆ. ಜಿಲ್ಲೆಯ ಸುತ್ತಮುತ್ತಲಿನ ಇತರೆ ಸಮುದಾಯದವರೂ ಸಹ ಜುಂಜಪ್ಪ ಸ್ವಾಮಿಯ ಆರಾಧಕರಾಗಿದ್ದಾರೆ. ಸಾಮಾನ್ಯವಾಗಿ ನವೆಂಬರ್ ತಿಂಗಳ ಮಧ್ಯ ಭಾಗದಲ್ಲಿ ಹಾಗಲವಾಡಿಯಲ್ಲಿ ಜುಂಜಪ್ಪ ಸ್ವಾಮಿಯ ಬೃಹತ್ ದೀಪಾವಳಿಯ ಹಬ್ಬ ಜರುಗುತ್ತದೆ. ಇದನ್ನ ಗೊಲ್ಲ

ಸಮುದಾಯದವರು ಅವರ ಭಾಷೆಯಲ್ಲಿ "ಕಿರು ದೀವಣಿಗೆ" ಎಂದು ಕರೆಯುತ್ತಾರೆ. ಈ ಜಾತ್ರೆಗೆ ಗುಬ್ಬಿ ತಾಲ್ಲೂಕಿನ ಗೊಲ್ಲರು ಸೇರಿದಂತೆ ಅಕ್ಕಪಕ್ಕದ ಊರಿನ ಜನರು ಬಂದು ಸೇರುತ್ತಾರೆ. ಎರಡು ದಿನಗಳ ಕಾಲ ನಡೆಯುವ ಜುಂಜಪ್ಪನ ಜಾತ್ರೆಯಲ್ಲಿ ಗೊಲ್ಲ ಸಮುದಾಯದ ಜನರು ರಾತ್ರಿ ವೇಳೆ ಕೋಲಾಟ, ವಾದ್ಯಗಳೊಂದಿಗೆ ಜುಂಜಪ್ಪ ಸ್ವಾಮಿಯನ್ನು ಅಲಂಕರಿಸಿ ಮೆರವಣಿಗೆ ನಡೆಸುತ್ತಾರೆ. ಹರಕೆ ಮಾಡಿಕೊಂಡವರು ಬೆಳ್ಳಿಯಲ್ಲಿ ಹಾವು-ಚೇಳುಗಳನ್ನ ಮಾಡಿಸಿ ದೇವರಿಗೆ ಅರ್ಪಿಸುತ್ತಾರೆ. ಈ ರೀತಿ ಮಾಡಿದರೆ ಅವರ ಕಷ್ಟ ಕಾರ್ಪಣ್ಯಗಳು ನಿವಾರಣೆಯಾಗುತ್ತವೆ ಎಂಬ ನಂಬಿಕೆಯಿದೆ. ಜುಂಜಪ್ಪ ಸ್ವಾಮಿಯ ದೇವಾಲಯದ ಸುತ್ತ ಕಾರೆ ಮುಳ್ಳಿನ ಬೇಲಿಯನ್ನ ನಿರ್ಮಿಸಿ ದೇವಾಲಯದ ಗುಬ್ಬ(ಹೊದಿಕೆ)ವನ್ನು ಬಾಳೆ ಗಿಡದ ನಾರಿನಿಂದ (ಬಾಳೆ ಗೆಜ್ಜೆ) ಮಾಡಿರುತ್ತಾರೆ. ಆದರೆ ಇತ್ತೀಚೆಗೆ ಬದಲಾವಣೆಯಿಂದಾಗಿ ಇವರು ಇಟ್ಟಿಗೆ, ಕಲ್ಲು ಮರಳು, ಸಿಮೆಂಟ್‌ನಿಂದ ಕೂಡಿದ ಆಧುನಿಕ ಕಟ್ಟಡವನ್ನು ಕಟ್ಟಿದ್ದಾರೆ. ಇನ್ನೂ ಹಾಗಲಿವಾಡಿಯ ಜುಂಜಪ್ಪ ಸ್ವಾಮಿಯ ಹಟ್ಟಿಯಲ್ಲಿ ಜನರ ಸಾಮಾಜಿಕ-ಆರ್ಥಿಕ ಜೀವನವನ್ನು ನೋಡುವುದಾದರೆ, ಇಲ್ಲಿ ಜನರು ಶೈಕ್ಷಣಿಕವಾಗಿ ತುಂಬಾ ಹಿಂದುಳಿದವರಾಗಿದ್ದು, ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಇವರು ತಮ್ಮ ಇಡೀ ಜೀವನವನ್ನು ತಮ್ಮ ಆರಾಧ್ಯ ದೈವ ಜುಂಜಪ್ಪ ಸ್ವಾಮಿಗೆ ಮುಡಿಪಾಗಿಟ್ಟಿದ್ದಾರೆ. ಜುಂಜಪ್ಪ ಸ್ವಾಮಿಯ ಪೂಜಾರಿಯು (ಬೈಲಪ್ಪ) ಸ್ವಾಮಿಯ ಆರಾಧಕರಾಗಿದ್ದು, ಈ ಪೂಜೆಯಲ್ಲಿ ಇಡೀ ಕುಟುಂಬದ ಸದಸ್ಯರು ತೊಡಗಿಸಿಕೊಂಡಿದ್ದಾರೆ. ಜುಂಜಪ್ಪ ಸ್ವಾಮಿಯ ಪೂಜಾರಿಯು ಸಾಕ್ಷಾತ್ ಜುಂಜಪ್ಪ ಸ್ವಾಮಿಯ ಪ್ರತಿರೂಪದಂತೆ ಬಾಳಿ, ಬದುಕಿ, ನಡೆದುಕೊಂಡು ಜನರ ಮನದಾಳದಲ್ಲಿ ಪ್ರತ್ಯೇಕ ದೇವರಾಗಿದ್ದಾರೆ.

**ಚಿಕ್ಕಣ್ಣ ಸ್ವಾಮಿ ದೇವರು :** ತುಮಕೂರು ಜಿಲ್ಲೆಯ ಹೆಬ್ಬೂರಿನ ಸಮೀಪದಲ್ಲಿ ಚಿಕ್ಕಣ್ಣ ಸ್ವಾಮಿ ಗೊಲ್ಲರ ಹಟ್ಟಿಯಿದೆ. ಇದು ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳ ಮಧ್ಯೆ ಇರುವ ಪ್ರದೇಶವಾಗಿದ್ದು, ಇದು ಅಲ್ಲಿಂದ ಬೆಂಗಳೂರಿಗೆ ೪೫ ಕಿ.ಮೀ. ಮತ್ತು ತುಮಕೂರಿಗೆ ೨೦ ಕಿ.ಮೀ. ದೂರದಲ್ಲಿದೆ. ಚಿಕ್ಕಣ್ಣ ಸ್ವಾಮಿ ಹಟ್ಟಿಯನ್ನ ಚಿಕ್ಕಣ್ಣ ಹಟ್ಟಿ ಎಂದು ಕರೆಯಲಾಗುತ್ತದೆ. ಬೆಂಗಳೂರು ಮತ್ತು ತುಮಕೂರು ಜಿಲ್ಲೆಯ ಸುತ್ತ ಮುತ್ತಲಿನ ಗೊಲ್ಲ ಸಮುದಾಯದವರು ಚಿಕ್ಕಣ್ಣ ಸ್ವಾಮಿಯ ಆರಾಧಕರಾಗಿರುವುದರ ಜೊತೆಗೆ ಇತರೆ ಸಮುದಾಯದವರು ಅಧಿಕ ಸಂಖ್ಯೆಯಲ್ಲಿ ಭಕ್ತರಾಗಿದ್ದಾರೆ. ಚಿಕ್ಕಣ್ಣ ಸ್ವಾಮಿ ದೇವರೂ ಕೂಡ ಬುಡಕಟ್ಟು ದೇವರಾಗಿದ್ದು, ಇದಕ್ಕೆ ದೇವಾಲಯದ ರಚನೆ ಮತ್ತು ದೇವರ ಬಗ್ಗೆ ಇರುವ ನಂಬಿಕೆ, ಸಂಪ್ರದಾಯ ಮತು ಐತಿಹ್ಯಗಳು ಸಾಕ್ಷೀಕರಿಸುತ್ತವೆ. ಚಿಕ್ಕಣ್ಣ ಸ್ವಾಮಿ ದೇವಾಲಯದ ಸುತ್ತ ಕಾರೆ ಮುಳ್ಳಿನ ಬೇಲಿಯನ್ನ ಹಾಕಲಾಗಿದ್ದು, ದೇವಾಲಯದ ಗುಬ್ಬವನ್ನ ಬಾಳೆಕಂದಿನ ಎಲೆಗಳಿಂದ ಕಟ್ಟಲಾಗಿದೆ. ಜಾತ್ರಾ ಮಹೋತ್ಸವದ ಸಂದರ್ಭದಲ್ಲಿ ಬುಡಕಟ್ಟು ಜನರೆಲ್ಲಾ ಸೇರಿ ವಿಜೃಂಭಣೆಯಿಂದ ದೇವರನ್ನ ಪೂಜಿಸಿ ಮೆರವಣಿಗೆ ಮಾಡುತ್ತಾರೆ. ಈ ದೇವರಿಗೆ ತನ್ನದೇ ಆದ ವಾದ್ಯ

ವೃಂದವಿದ್ದು, ಪೂಜೆಯ ವೇಳೆ ಮತ್ತು ಹಬ್ಬ ಜಾತ್ರೆಗಳಲ್ಲಿ ವಾದ್ಯವನ್ನ ಬಾರಿಸಲಾಗುತ್ತದೆ. ಚಿಕ್ಕಣ್ಣ ಸ್ವಾಮಿ ದೇವರಿಗೆ ಅರ್ಪಿಸಿದ (ಬಿಟ್ಟ) ಬಸವ ಇದ್ದು ಇದನ್ನ ಪಟ್ಟದ ಬಸವ ಎಂದು ಕರೆಯುತ್ತಾರೆ. ಇದಕ್ಕೆ ಹಗ್ಗವಾಗಲೀ, ಮೂಗು ದಾರವಾಗಲೀ ಇರುವುದಿಲ್ಲ. ಪಟ್ಟದ ಬಸವ ಸ್ವತಂತ್ರವಾಗಿ ಹೊಲಗಳಲ್ಲಿ ಮೇಯುವಾಗ ಯಾರೂ ಸಹ ತೊಂದರೆ ಮಾಡುವುದಿಲ್ಲ. ದೇವರ ಬಸವ ನಮ್ಮ ಹೊಲದಲ್ಲಿ ಅಡ್ಡಾಡಿದರೆ ಅಥವಾ ಮೇಯ್ದರೆ ಅದು ನಮ್ಮ ಅದೃಷ್ಟ ಎಂದು ಜನರು ಭಾವಿಸುತ್ತಾರೆ. ಹಬ್ಬ ಅಥವಾ ಜಾತ್ರೆಗಳ ಸಂದರ್ಭದಲ್ಲಿ ಬಸವನನ್ನ ಹಿಡಿದು ತಂದು ಅದರ ಮೇಲೆ ದೊಡ್ಡ ಡೋಲು (ನಗರಿಕಾಯಿ) ಹಾಕಿ ಜೋರಾಗಿ ಬಾರಿಸುತ್ತಾರೆ. ಮಡಿ–ಮೈಲಿಗೆಯ ವಿಷಯದಲ್ಲಿ ಕಾಡುಗೊಲ್ಲ ಸಮುದಾಯ ತುಂಬಾ ಕಟ್ಟುನಿಟ್ಟು. ತಮ್ಮ ದೇವರಿಗೆ ಎಲ್ಲಿ ಮೈಲಿಗೆಯಾಗುತ್ತದೆಂಬ ಭಯದಿಂದ ತುಂಬಾ ಎಚ್ಚರಿಕೆ ವಹಿಸುತ್ತಾರೆ. ಋತುಮತಿಯಾದ ಮತ್ತು ಮುಟ್ಟಾದ ಹೆಂಗಸರು ಆ ಸಮಯದಲ್ಲಿ ದೇವಾಲಯದ ಸಮೀಪ ಬರುವಂತಿಲ್ಲ ಅವರ ನೆರಳು ದೇವರ ಮೇಲೆ ಬೀಳುವಂತಿಲ್ಲ. ಒಂದು ವೇಳೆ ಇವರ ನೆರಳು ದೇವಾಲಯದ ಮೇಲೆ ಬಿದ್ದರೂ ದೇವರಿಗೆ ಮೈಲಿಗೆಯಾಗುತ್ತದೆ ಎಂಬ ನಂಬಿಕೆಯಿದೆ. ಈ ಪ್ರಮುಖ ಧಾರ್ಮಿಕ ಕೇಂದ್ರ ಮತ್ತು ಬುಡಕಟ್ಟು ದೇವರುಗಳಲ್ಲದೆ, ಇನ್ನೂ ಕೆಲವು ಧಾರ್ಮಿಕ ಕೇಂದ್ರ ಮತ್ತು ಬುಡಕಟ್ಟು ದೇವರುಗಳನ್ನ ಕಾಣಬಹುದು. ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಹಾಲಣ್ಣನ ಗುಡ್ಡೆ, ಗುಬ್ಬಿ ತಾಲ್ಲೂಕಿನ ಬಿದರೆ ಹಟ್ಟಿಯ ಈರಮುದ್ದಪ್ಪ, ಜುಂಜಪ್ಪನಟ್ಟಿಯ ಜುಂಜಪ್ಪ, ಇರಕಸಂದ್ರದಟ್ಟಿಯ ಭೂತಪ್ಪ, ಶಿರಾ ತಾಲ್ಲೂಕಿನ ಬೇವಿನಹಳ್ಳಿ ಪಾವಗಡ ತಾಲೂಕು ಯರ್ರಮ್ಮನಹಳ್ಳಿ ಜಂಗಮರಹಳ್ಳಿ ಮತ್ತು ಆಂಧ್ರದ ನಿಜವಳ್ಳಿ, ಬೆಸ್ತರಹಳ್ಳಿ ಕಲ್ಯಾಣದುರ್ಗ ತಾಲೂಕು ಇನ್ನೂ ಮುಂತಾದವುಗಳು ಮುಖ್ಯ ಬುಡಕಟ್ಟು ದೇವರುಗಳ ತಾಣಗಳಾಗಿವೆ. ಇವುಗಳಲ್ಲಿ ಗುಬ್ಬಿ ತಾಲ್ಲೂಕಿನ ಹಾಗಲವಾಡಿಯ ಜುಂಜಪ್ಪ ಸ್ವಾಮಿಯು ಚೇಳೂರಿನ ಸುತ್ತಮುತ್ತಲಿನಲ್ಲಿ ತನ್ನ ಸಾಮ್ರಾಜ್ಯವನ್ನ ಹೊಂದಿ ಪಶುಪಾಲಕ ವೃತ್ತಿಯಲ್ಲಿ ತನ್ನದೇ ಆದ ಛಾಪು ಹೊತ್ತಿದ್ದನು ಎಂಬುದನ್ನ ಐತಿಹ್ಯಗಳು ಸಾರಿ ಹೇಳುತ್ತವೆ.

ರಾಜ್ಯದ ಚಿತ್ರದುರ್ಗ ಜಿಲ್ಲೆಯಲ್ಲಿಯೂ ಗೊಲ್ಲ ಸಮುದಾಯದ ಧಾರ್ಮಿಕ ಕೇಂದ್ರ ಮತ್ತು ಬುಡಕಟ್ಟು ದೇವರುಗಳನ್ನ ಕಾಣಬಹುದು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಹಿರಿಯೂರು ತಾಲ್ಲೂಕಿನ ಕರಿಹೋಬನ ಹಳ್ಳಿ ಮತ್ತು ತಾಳವಟ್ಟಿ, ಚಿತ್ರದುರ್ಗ ತಾಲ್ಲೂಕಿನ ರಾಮನಳ್ಳಿಗಳು ಪ್ರಮುಖವಾದವುಗಳು. ನಂದಿಹಳ್ಳಿ ಮತ್ತು ಕರಿಹೋಬನಹಳ್ಳಿ ಬೆಸ್ತರಹಳ್ಳಿ (ಕಲ್ಯಾಣದುರ್ಗ ತಾಲ್ಲೋಖ್)ಕಟ್ಟೆ ಮನೆಗಳು ಕಾಡುಗೊಲ್ಲರ ಪ್ರಮುಖ ಕಟ್ಟೆಮನೆಗಳು. ಕಾಡುಗೊಲ್ಲರು ಮುಖ್ಯ ಬುಡಕಟ್ಟು ದೇವರುಗಳ ಜೊತೆಗೆ ಅವರವರ ಹಟ್ಟಿಯಲ್ಲಿ ತಮ್ಮ ಕುಲಕ್ಕೆ ಸಂಬಂಧಿಸಿದ ದೇವರುಗಳನ್ನ ಪೂಜಿಸುತ್ತಾರೆ. ಈ ದೇವರುಗಳೂ ಈ ಸಮುದಾಯದ ಸಾಂಸ್ಕೃತಿಕ ವೀರರಾಗಿದ್ದು, ಮೂರು–ನಾಲ್ಕು ತಲೆಮಾರುಗಳ ಹಿಂದೆ ಸಮುದಾಯಕ್ಕೆ ಒಳ್ಳೆಯ ಕೆಲಸ ಮಾಡಿ ವೀರ ಮರಣವನ್ನಪ್ಪಿದವರಾಗಿದ್ದಾರೆ.

ಈ ರೀತಿ ಮರಣ ಹೊಂದಿದ ಸಮುದಾಯದ ಪೂರ್ವಿಕರನ್ನ ಗೊಲ್ಲಸಮುದಾಯ ಬೆತ್ತದ ಬುಟ್ಟಿ, ಮರದ ಪೆಟ್ಟಿಗೆ, ಗಣೆ, ಬಿಲ್ಲು, ಬಾಣ, ಬಾರು, ಅಲಗು, ಕತ್ತಿ, ಲಿಂಗ, ಕುದುರೆ, ಬಸವ, ಮುಂತಾದವುಗಳನ್ನ ದೇವರ ರೂಪದಲ್ಲಿ ಆರಾಧಿಸುತ್ತಾರೆ. ಬುಡಕಟ್ಟು ಸಮುದಾಯದ ಗೊಲ್ಲರು ಪೂಜಿಸುವ ಪುರುಷ ದೇವರುಗಳ ಹೆಸರೆಂದರೆ ಜುಂಜಪ್ಪ, ಎತ್ತಪ್ಪ, ಚಿತ್ತಪ್ಪ, ಹಾಲಪ್ಪ, ಚಿಕ್ಕಣ್ಣ ಸ್ವಾಮಿ,ಈರಣ್ಣ, ಸಿದ್ಧಯ್ಯ, ಕಾಟಪ್ಪ, ಈರಮುದ್ದಪ್ಪ, ನಾಗಪ್ಪ, ಭೂತಪ್ಪ, ಪಾತಪ್ಪ, ಕ್ಯಾತಪ್ಪ, ತಿಮ್ಮಪ್ಪ, ಚಿತ್ರದೇವರು, ನರಸಿಂಹದೇವರು, ಅಜ್ಜಪ್ಪ ಇತ್ಯಾದಿ. ಈ ಎಲ್ಲಾ ದೇವರುಗಳು ಶ್ರೀ ಕೃಷ್ಣನ ಪ್ರತಿರೂಪ ಎಂಬುದಾಗಿ ಇವರ ನಂಬಿಕೆ. ಸ್ತ್ರೀ ದೇವರುಗಳೆಂದರೆ ಮಾರಕ್ಕ, ತಿಮ್ಮಕ್ಕ, ಕರಿಯಮ್ಮ, ಬೇವಿನಳ್ಳೀಯಮ್ಮ, ಕೆಂಪಮ್ಮ ಇತ್ಯಾದಿ.

### ಸಾಂಸ್ಕೃತಿಕ ವೀರ ನಾಯಕರು

ಯಾವುದೇ ಬುಡಕಟ್ಟು ತಮ್ಮ ನಡುವೆಯೇ ಆಗಿ ಹೋದ ಸಾಂಸ್ಕೃತಿಕ ವೀರರನ್ನು ಅವರ ಮೇಲಿನ ದೀರ್ಘ ಕಥೆಗಳನ್ನು ಹೊಂದಿರುತ್ತವೆ. ಬುಡಕಟ್ಟು ಸಾಮಾನ್ಯವಾಗಿ ಶಿಷ್ಟ ಪರಂಪರೆಯ ದೇವತೆಗಳನ್ನು ಹೊಂದಿರುವುದಿಲ್ಲ. ರಾಮಕೃಷ್ಣರ ಕಲ್ಪನೆಗಿಂತ ಅವರಿಗೆ ಅವರ ನಡುವೆಯೇ ಆಗಿಹೋದ ವೀರರ ನೆನಪು ಹೆಚ್ಚು. ಈ ವೀರರ ನೆನಪನ್ನು ನಾನಾ ರೀತಿಯಲ್ಲಿ ಉಳಿಸಿಕೊಳ್ಳಲು ಪ್ರಯತ್ನ ಪಡುತ್ತಾರೆ. ಬುಡಕಟ್ಟಿನ ಹಟ್ಟಿಯವರೆಲ್ಲಾ ಆತನ ಹೆಸರನ್ನು ಇಟ್ಟುಕೊಳ್ಳುವುದರ ಮೂಲಕ, ಹಟ್ಟಿಯೊಳಗೆ ಗುಡಿ ಸ್ಥಾಪನೆಯ ಮೂಲಕ, ಹಾಡು, ಪುರಾಣ ಕಥೆ, ಅನೇಕ ಆಚರಣೆಗಳ ಮೂಲಕ ತಮ್ಮ ವೀರನ ನೆನಪನ್ನು ಉಳಿಸಿಕೊಳ್ಳುತ್ತಾರೆ. ಅವರಿಗೆ ತಮ್ಮ ವೀರನ ಪುರಾಣ ಕಥೆಯೇ ಇತಿಹಾಸ. ದಿನನಿತ್ಯ ಜರುಗುವ ಘಟನೆಗಳು ಇತಿಹಾಸವಲ್ಲ. ಕಾಡುಗೊಲ್ಲರ ಪ್ರಮುಖ ಸಾಂಸ್ಕೃತಿಕ ವೀರನಾದ ಜುಂಜಪ್ಪನ ಕಥೆಯ ಒಂದೊಂದು ಅಂಶವೂ ಅವರಿಗೆ ಸತ್ಯ ಘಟನೆ. ಹೀಗಾಗಿ ಬುಡಕಟ್ಟು ಅಥವಾ ಗ್ರಾಮೀಣ ಜನ ಇತಿಹಾಸ ಎಂದು ತಿಳಿದಿರುವ ಸಂಗತಿಗಳೇ ಶಿಷ್ಟರಿಗಿಂತ ಬೇರೆಯಾಗುತ್ತವೆ. ಹಾಗಾಗಿ ಕಾಡುಗೊಲ್ಲರ ಸಾಂಸ್ಕೃತಿಕ ವೀರರು ಸದಾ ಅವರ ನಡುವೆ ಬದುಕಿಯೇ ಇರುತ್ತಾರೆ. ಬದುಕಿ ಪೂಜೆ ಗೊಳ್ಳುತ್ತಿರುತ್ತಾರೆ. ಕಾಡುಗೊಲ್ಲರು ತಮ್ಮ ಪ್ರತಿಯೊಂದು ಆಗುಹೋಗುಗಳಿಗೂ ಜುಂಜಪ್ಪನ ಅನುಮತಿಯನ್ನು ಬೇಡುತ್ತಾರೆ (ಕೃಷ್ಣಮೂರ್ತಿ ಹನೂರು:೧೯೯೮:೮೪೧).

ಕಾಡುಗೊಲ್ಲರಲ್ಲಿ ಸಾಂಸ್ಕೃತಿಕ ವೀರರ ಸಂಖ್ಯೆ ಅಧಿಕ. ಪ್ರತಿಯೊಂದು ಹಟ್ಟಿಯಲ್ಲಿ ಸಾಂಸ್ಕೃತಿಕ ವೀರರನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸುತ್ತಾರೆ. ಆದರೆ ಪ್ರಮುಖ ಸಾಂಸ್ಕೃತಿಕ ವೀರರು ತಾವು ಮಾಡಿದ ಸಾಹಸಗಳಿಂದ ಪ್ರಸಿದ್ಧಿ ಪಡೆದು ಎಲ್ಲಾ ಭಾಗಗಳ ಜನರಿಗೂ ಚಿರಪರಿಚಿತರಾಗಿರುತ್ತಾರೆ. ಅಂತಹವರೆಂದರೆ, ಜುಂಜಪ್ಪ, ಎತ್ತಪ್ಪ, ಚಿತ್ತಪ್ಪ, ಕಾಟಪ್ಪ, ಚಿಕ್ಕಣ್ಣ ಸ್ವಾಮಿ ಮುಂತಾದವರು.

ಜುಂಜಪ್ಪ : ಜುಂಜಪ್ಪ ಕಾಡುಗೊಲ್ಲರ ಸಾಂಸ್ಕೃತಿಕ ವೀರನಾಗಿದ್ದು, ಹಲವಾರು ಸಾಹಸಗಳನ್ನು ಮಾಡಿ ಸಮುದಾಯದ ದೇವರಾಗಿ ಪೂಜಿಸಲ್ಪಡುತ್ತಿದ್ದಾನೆ. ಜುಂಜಪ್ಪನ

ನೆಲೆಗಳು ಶಿರಾ ತಾಲ್ಲೂಕಿನ ಬೇವಿನಹಳ್ಳಿ ಮತ್ತು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿವೆ. ಹಾಗಲವಾಡಿಯಲ್ಲಿ ಜುಂಜಪ್ಪನನ್ನು ವಿಜೃಂಭಣೆಯಿಂದ ಪೂಜಿಸಲಾಗುತ್ತದೆ. ಇದಕ್ಕೆ ಸಾವಿರಾರು ಮಂದಿ ಭಕ್ತರಿದ್ದಾರೆ. ಈ ಕೇಂದ್ರವು ಜುಂಜಪ್ಪ ಸ್ವಾಮಿ ಕೇಂದ್ರವಾಗಿ ಪ್ರಸಿದ್ಧಿಪಡೆದಿದೆ. ಜುಂಜಪ್ಪ ಸ್ವಾಮಿಯ ಮತ್ತೊಂದು ದೇವಾಲಯವು ಇದೇ ಗುಬ್ಬಿ ತಾಲ್ಲೂಕಿನ ಜುಂಜಪ್ಪನ ಹಟ್ಟಿಯಲ್ಲಿದೆ. ಇಲ್ಲಿಯೂ ಜುಂಜಪ್ಪ ಸ್ವಾಮಿಯು ಪೂಜಿಸಲ್ಪಡುತ್ತಿದ್ದಾನೆ. ಇದೇ ರೀತಿ ಜುಂಜಪ್ಪನ ನೆಲೆಗಳು ನೂರಾರು ಇವೆ ಎಂದರೆ ತಪ್ಪಾಗಲಾರದು.

ಕಥೆ, ಕಾವ್ಯಗಳಲ್ಲಿ ದನಗಾಯಿಯಾಗಿದ್ದ ಜುಂಜಪ್ಪನ ಸಾಹಸಗಳನ್ನು ವಿವರಿಸಲಾಗಿದೆ. ಜುಂಜಪ್ಪನ ಮೂರು ತಲೆಮಾರುಗಳ ಕಥೆ. ಜುಂಜಪ್ಪನ ತಾತ ದೇವರ ದಯಾಮಾರ, ಕೊರಿಕೆ ಜರಿಮಲೆ ಸೀಮೆಯ ಚಿಕ್ಕದ್ಯಾವರ ಹಟ್ಟಿಯಲ್ಲಿ ಬಕ್ಕದಲೆ ಚಿತ್ತಯ್ಯ, ಬರಿದಲೆ ಚಿತ್ತಯ್ಯ, ಮಾಪಲ್ಲಿ ಚಿತ್ತಯ್ಯ, ಪೂಜಾರಿ ಚಿತ್ತಯ್ಯ, ಘನಗುಡಿ ಚಿತ್ತಯ್ಯ, ದೇವರ ದಯಾಮಾರ ಎಂಬ ಏಳು ಜನ ಅಣ್ಣ ತಮ್ಮಂದಿರಿಗೆ ಬಡ ಚಿತ್ತಮ್ಮ ಒಬ್ಬಳೇ ತಂಗಿ. ಈ ತಂಗಿಗೆ ಒಬ್ಬಳೇ ಮಗಳು ಕರಿಬಕ್ಕ. ಈ ಕರಿಬಕ್ಕನನ್ನು ಏಳು ಜನ ಅಣ್ಣ ತಮ್ಮಂದಿರಲ್ಲಿ ಕೊನೆಯವನಾದ ದೇವರ ದಯಾಮಾರನಿಗೆ ಕೊಟ್ಟು ಮದುವೆ ಮಾಡಿದರು. ಅವನ ಮದುವೆಯ ದಿನವೇ ದನಗಳು ಗೂಡಿಗೆ ಹಿಂತಿರುಗಿ ಬಿಟ್ಟಿದ್ದರಿಂದ ಅವನು ಚಪ್ಪರದ ಮನೆಯಲ್ಲಿ ಬಿಟ್ಟು ಹೋಗಿದ್ದ ಕಠಾರಿಗೆ ಕರಿಬಕ್ಕನ್ನ ಮದುವೆ ಮಾಡಿದರು. ಸ್ವಲ್ಪ ಕಾಲದ ನಂತರ ದೇವರ ದಯಾಮಾರನಿಗೂ ಕರಿಬಕ್ಕನಿಗೂ ಒಂದು ಗಂಡು ಮಗುವಾಯಿತು. ಮಗುವಾದ ನಂತರ ಇವರಿಬ್ಬರೂ ತೀರಿಕೊಂಡರು. ಈ ಮಗುವನ್ನು ಬಡ ಚಿತ್ತಮ್ಮನೇ ಸಾಕಬೇಕಾಗಿ ಬಂತು. ಈ ಮಗುವೇ ಕೆಂಗುರಿ ಮಲ್ಲಪ್ಪನೆಂದಾಯಿತು. ಈ ಮಗು ತನ್ನ ತಾಯಿ ಹಾಗೂ ದೊಡ್ಡಪ್ಪಂದಿರ ಮನೆಗೆ ಬಂದ ಮೇಲೆ ಅವರ ಸ್ಥಿತಿಗತಿಗಳು ಉತ್ತಮವಾದವು. ಕೆಂಗುರಿ ಮಲ್ಲೇಗೌಡ ಬೆಳೆದು ದೊಡ್ಡವನಾದ ಮೇಲೆ ಚಿನ್ನಮ್ಮನೊಡನೆ ಮದುವೆಯಾಯಿತು. ಚಿನ್ನಮ್ಮ ಜುಂಜಪ್ಪನಿಗೆ ಜನ್ಮ ನೀಡಿದಳು. ಜುಂಜಪ್ಪ ತನ್ನ ಜೀವನದಲ್ಲಿ ಅನೇಕ ಸಾಹಸಗಳನ್ನು ಮಾಡಿ ಕಾಡುಗೊಲ್ಲರ ನಡುವೆ ತಾನು ಆರಾಧ್ಯ ದೈವವೆನಿಸಿಕೊಂಡ. ಈತನ ಏಳಿಗೆಯನ್ನು ಸಹಿಸಲಾಗದ ದಾಯಾದಿಗಳು ಜುಂಜಪ್ಪನ ಬದುಕಿನಲ್ಲಿ ಅನೇಕ ಅಡೆತಡೆಗಳನ್ನು ಒಡ್ಡುತ್ತಾರೆ (ಅವರೇ:೧೯೯೮:೮೪೧-೮೪೨).

**ಚಿತ್ತಯ್ಯ (ಚಿತ್ರದೇವರು)** : ಚಿತ್ತಯ್ಯ ಎಂಬ ಸಾಂಸ್ಕೃತಿಕ ವೀರನು ಕಾಡುಗೊಲ್ಲ ಸಮುದಾಯದ ದೇವರಾಗಿ ಪೂಜಿಸಲ್ಪಡುತ್ತಿದ್ದಾನೆ. ಚಿತ್ತಯ್ಯ ಎಂಬ ಈ ಐತಿಹಾಸಿಕ ಪುರುಷನನ್ನು ಚಿತ್ರದೇವರು ಎಂಬ ಹೆಸರಿನಿಂದ ಪೂಜಿಸುತ್ತಾರೆ. ಈ ಚಿತ್ರದೇವರ ಮೂಲ ನೆಲೆ ಹೊಳಲ್ಕೆರೆ ತಾಲ್ಲೂಕಿನ ಚಿತ್ರಹಳ್ಳಿ. ಸಾಮಾನ್ಯವಾಗಿ ಕಾಡುಗೊಲ್ಲರಲ್ಲಿ ಬರುವ ಕರಡಿಗೊಲ್ಲರು ಚಿತ್ರದೇವರನ್ನು ಪೂಜಿಸುತ್ತಾರೆ. ಕರಡಿಗೊಲ್ಲರಲ್ಲಿ ತಾಳಿಕಟ್ಟುವ ಗೊಲ್ಲರು ತಾಳಿಕಟ್ಟದ ಗೊಲ್ಲರು ಎಂಬ ವಿಭಾಗಗಳಿದ್ದು, ತಾಳಿ ಕಟ್ಟುವ ಗೊಲ್ಲರು

ಪಾವಗಡ ಪನೋಬನಹಳ್ಳಿ ಗೊಲ್ಲರಹಟ್ಟಿ, ಜಡೇನಹಳ್ಳಿ, ಕೆಂಚಮ್ಮನಹಳ್ಳಿ, ಆಂಧ್ರದ ನಿಜವಳ್ಳಿ ಕಲ್ಯಾಣದುರ್ಗ ಮುಂತಾದ ಸ್ಥಳಗಳಲ್ಲಿ ವಾಸವಿದ್ದು, ತಾಳಿ ಕಟ್ಟುವ ಗೊಲ್ಲರು ನಂದೀಹಳ್ಳಿ ಬುಡಕಟ್ಟಿಗೆ ಸೇರಿದವರಾಗಿದ್ದು, ಇವರು ಹಿರಿಯೂರು ತಾಲ್ಲೂಕಿನಲ್ಲಿ ಚಿತ್ರದೇವರನ್ನು ತಮ್ಮ ಮುಖ್ಯ ದೇವರಾಗಿ ಪೂಜಿಸುತ್ತಿದ್ದಾರೆ. ಅಲ್ಲದೆ ಹಿರಿಯೂರು ತಾಲ್ಲೂಕಿನ ವೇಣುಕಲ್ಲುಗುಡ್ಡ, ಶಿರಾ ತಾಲೂಕಿನ ಕಳೂರಳ್ಳಿ, ಹತ್ತಿಕೆರೆಕಲ್ಲು, ಇನ್ನು ಮುಂತಾದ ಹಟ್ಟಿಗಳಲ್ಲಿ ಚಿತ್ತಯ್ಯ ಎಂಬ ಹೆಸರಿನ ಚಿತ್ರದೇವರನ್ನು ಕಾಣಬಹುದು. ಸಾಮಾನ್ಯವಾಗಿ ಚಿತ್ರದೇವರ ಕಥೆಯು ಬುಡಕಟ್ಟಿನಲ್ಲಿರುವ ಜಗತ್ತಿನ ಉಗಮದ ಕಥೆಯನ್ನು ಹೇಳುತ್ತದೆ.

**ಎತ್ತಪ್ಪ** : ಎತ್ತಪ್ಪನು ಕಾಡುಗೊಲ್ಲ ಸಮುದಾಯದ ಸಾಂಸ್ಕೃತಿಕ ವೀರನಾಗಿದ್ದು, ಎತ್ತಪ್ಪ ದೇವರ ನಾಮಾಂಕಿತದಿಂದ ಪೂಜಿಸಲ್ಪಡುತ್ತಿದ್ದಾನೆ. ಎತ್ತಪ್ಪ ದೇವರ ನೆಲೆಗಳು ಹಲವು ಕಡೆ ಇದ್ದು, ಮುಖ್ಯವಾಗಿ ಚಳ್ಳಕೆರೆ ತಾಲ್ಲೂಕಿನ ತಳಕಿನ ಗುಡ್ಡದ ಮೇಲಿದೆ. ಅಲ್ಲದೆ ಇದೇ ದೇವರನ್ನು ಹಿರಿಯೂರು ತಾಲ್ಲೂಕಿನ ವೇಣುಕಲ್ಲು ಗುಡ್ಡದಲ್ಲಿ ಪೂಜಿಸಲಾಗುತ್ತಿದ್ದೆ. ಎತ್ತಪ್ಪನ ಎರಡನೆಯ ಮುಖ್ಯ ನೆಲೆ ಎಂದರೆ ಆಂಧ್ರ ಪ್ರದೇಶದ ಗುಂಟಕಲ್ಲಿನ ಸಮೀಪದ ಗೊಲ್ಲರಹಟ್ಟಿಯಾಗಿದೆ. ಚಳ್ಳಕೆರೆ ತಾಲ್ಲೂಕಿನ ಕಾಟಪ್ಪನ ಹಟ್ಟಿಯಲ್ಲಿ ಮತ್ತು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿ ಜುಂಜಪ್ಪನ ಹಟ್ಟಿಯಲ್ಲಿ ಎತ್ತಪ್ಪನನ್ನು ಪೂಜಿಸುತ್ತಾರೆ.

ಜುಂಜಪ್ಪನಂತೆ ಎತ್ತಪ್ಪನೂ ಕಾಡುಗೊಲ್ಲರ ಸಾಂಸ್ಕೃತಿಕ ಪುರುಷ ಎಂದು ಕೃಷ್ಣಮೂರ್ತಿ ಹನೂರು ಅಭಿಪ್ರಾಯಪಡುತ್ತಾರೆ. ಇವನೂ ಜುಂಜಪ್ಪನಂತೆ ಈಶ್ವರನ ವರದಿಂದ ಹುಟ್ಟಿ ಬರುತ್ತಾನೆ. ಈ ಎತ್ತಪ್ಪ ಅಂಬೆರಾಯ, ತುಂಬೆರಾಯ ದನಗಳನ್ನು ಕಾಯ್ದುಕೊಂಡು ಇರುತ್ತಾನೆ. ಈತನಿಗೆ ಗೆಜ್ಜೆ ಕಾಲ ಮಲ್ಲಮ್ಮನೊಡನೆ ಮದುವೆಯಾಗಿ ಸಂಸಾರ ಮಾಡುತ್ತಾನೆ. ಬಡತನ ಬರುತ್ತದೆ. ಇದು ದೇವತೆಯ ಈಶ್ವರನ ಹಣೆಯಿಂದ ಮೂರು ಬೆವರ ಹನಿ ಉದುರಿದಾಗ ಕಾಟಯ್ಯ, ಚಿತ್ತಯ್ಯ ಮತ್ತು ಓಬಳನರಸಿಂಹ ಹುಟ್ಟಿದರು ಎಂಬ ಪ್ರತೀತಿ ಇದೆ. ಅದರಂತೆ ಈ ಮೂವರು ಚಿತ್ರಗಿರಿ ಎಂಬ ಪಟ್ಟಣ ಕಟ್ಟಿ ಅಲ್ಲಿ ಈ ಮೂವರು ಸುಖವಾಗಿ ವಾಸವಿದ್ದರು. ಚಿತ್ತಯ್ಯ ಬ್ರಾಹ್ಮಣರ ಮಹಿಳೆಯಾದ ಗಂಗೆಮಾಳಮ್ಮನನ್ನು ಪ್ರೀತಿಸಿ ಮದುವೆಯಾಗುತ್ತನಾದರೂ, ಇದು ಅವಳ ತಂದೆ ಹಾರುವವರ ಬೊಮ್ಮಯ್ಯನಿಗೆ ಇಷ್ಟವಿರಲಿಲ್ಲ. ಇದರಿಂದ ಚಿತ್ತಯ್ಯನನ್ನು ಹಲವು ರೀತಿಯ ಪರೀಕ್ಷೆಗಳಿಗೆ ಗುರಿಪಡಿಸುತ್ತಾನೆ. ಇಂತಹ ಪರೀಕ್ಷೆಯಲ್ಲಿ ಚಿತ್ತಯ್ಯ ತಮ್ಮ ತಮ್ಮಂದಿರೊಡಗೂಡಿ ಗೆಲುವು ಸಾಧಿಸುತ್ತನಾದರೂ ಅವನ ಮಡದಿಯೊಂದಿಗೆ ಸಂಸಾರ ನಡೆಯುವುದಿಲ್ಲ. ಕೊನೆಗೆ ಗಂಗಮಾಳಮ್ಮ ಚಿತ್ತಯ್ಯನನ್ನು ಬಿಟ್ಟು ಅರಸೀಕೆರೆ ಬಳಿಯ ಬೊಮ್ಮನಹಳ್ಳಿಗೆ ಬಂದು ನೆಲೆಯಾಗುತ್ತಾಳೆ. ಅವಳ ಮರಣದ ನಂತರ ಅವಳನ್ನು ದೇವತೆಯೆಂದು ಪೂಜಿಸಲು ಪ್ರಾರಂಭಿಸಿ ದೇವಾಲಯ ನಿರ್ಮಿಸಲಾಯಿತು. ಅದೇ ರೀತಿ ಚಿತ್ತಯ್ಯ, ಕಾಟಯ್ಯ, ಮತ್ತು ಓಬಳನರಸಿಂಹ ಚಿತ್ರಗಿರಿ ಪಟ್ಟಣವನ್ನು ಆಳಿ ಅಲ್ಲಿಯೇ ಸತ್ತರು, ಅವರನ್ನೂ ತಮ್ಮ ಆರಾಧ್ಯ ದೇವರುಗಳಾಗಿ ಪೂಜಿಸುತ್ತಾರೆ.

## ಪವಾಡಗಳು

ಕಾಡುಗೊಲ್ಲ ಸಮುದಾಯದಲ್ಲಿ ಪವಾಡಗಳ ಬಗ್ಗೆ ಇತ್ತೀಚೆಗೆ ಯಾವುದೇ ವಿದ್ಯಮಾನಗಳು ಇಲ್ಲದಿದ್ದರೂ, ಸಮುದಾಯದ ಪೌರಾಣಿಕ ಮತ್ತು ಐತಿಹಾಸಿಕ ವಿದ್ಯಮಾನವನ್ನು ಅವಲೋಕಿಸಿದರೆ ಹಿಂದೆ ಸಾಂಸ್ಕೃತಿಕ ವೀರರು ಪವಾಡ ಪುರುಷರಾಗಿದ್ದರು ಎಂಬುದಕ್ಕೆ ಹಲವಾರು ಉಲ್ಲೇಖಗಳಿವೆ. ಜುಂಜಪ್ಪ ಒಬ್ಬ ಮಹಾನ ಪುರುಷನಾಗಿದ್ದು, ಹುಲ್ಲುಗಾವಲುಗಳಿಗೆ ತನ್ನ ಪಶುಗಳನ್ನು ಮೇಯಿಸಲು ಹೋದಾಗ ಮಾಡುವ ಹೋರಾಟಗಳು ಕಾಡುಗೊಲ್ಲ ಸಮುದಾಯದ ವೀರಗಾಥೆಯ ಪವಾಡವನ್ನು ತೋರಿಸುತ್ತದೆ. ಇಲ್ಲಿ ಜುಂಜಪ್ಪನಂತೆ, ಬಡಮ್ಮೈಲ, ಚಿತ್ತಪ್ಪ, ಕಾಟಪ್ಪ ಚಿಕ್ಕಣ್ಣಸ್ವಾಮಿ ಸೇರಿದಂತೆ ಹಲವಾರು ಸಾಂಸ್ಕೃತಿಕ ವೀರರ ಪವಾಡಗಳನ್ನು ಕಾಣಬಹುದು. ಈಗಲೂ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಚೇಳೂರು ಸುತ್ತಮುತ್ತಲಿನಲ್ಲಿ ಬಡಮ್ಮೈಲನ ಬಗ್ಗೆ ಪವಾಡಗಳಿವೆ. ಚೇಳೂರು ಎಂಬಲ್ಲಿ ಜುಂಜಪ್ಪ ಹುಲ್ಲುಗಾವಲಿನಲ್ಲಿ ದನಗಳನ್ನು ಮೇಯಿಸುವಾಗ ಬಡಮ್ಮೈಲ ಎಂಬ ಎತ್ತು ಕಾರಣಾಂತರಗಳಿಂದಾಗಿ ಚೇಳೂರು ಬಾಗಿಲನ್ನು ಮುರಿದ ಅಲ್ಲಿಂದ ಹಾರಿ ಸುಮಾರು ೧೦ ಕೀ.ಮೀಟರ್‌ವರೆಗೆ ಸಣ್ಣಮ್ಮನ ಹಳ್ಳಿಯಲ್ಲಿ ಮಂಡಿಗಾಲೂರಿ ನಿಂತನು ಎಂಬುದಾಗಿ ಪವಾಡ ಹೇಳುತ್ತದೆ. ನಂತರ ಆ ಸ್ಥಳ ಪೂಜಾಸ್ಥಳವಾಗಿ ಇವತ್ತಿಗೂ 'ಬಸವಣ್ಣ'ನ ಜಾತ್ರೆ ವರ್ಷಕ್ಕೊಮ್ಮೆ ಯುಗಾದಿಯ ದಿನದಂದು ನಡೆಯುತ್ತದೆ. ಹೀಗೆ ಕಾಡುಗೊಲ್ಲ ಸಮುದಾಯದಲ್ಲಿ ಹತ್ತು ಹಲವು ಪವಾಡಗಳನ್ನು ಕಾಣಬಹುದು.

## ಶಕ್ತಿ ಆಚರಣೆ, ಹಬ್ಬಗಳು

ಗೊಲ್ಲಸಮುದಾಯವು ಬುಡಕಟ್ಟು ಹಬ್ಬಗಳ ಜೊತೆಗೆ ನಾಡಹಬ್ಬ ಮತ್ತು ರಾಷ್ಟ್ರೀಯ ಹಬ್ಬಗಳನ್ನ ಆಚರಿಸುತ್ತಾರೆ. ಮೊದಲು ಕೇವಲ ಬುಡಕಟ್ಟು ಹಬ್ಬಗಳನ್ನ ಆಚರಿಸುತ್ತಿದ್ದರು. ಆದರೆ ಇತ್ತೀಚೆಗೆ ಬದಲಾವಣೆಯಿಂದಾಗಿ ಗಣೇಶನ ಹಬ್ಬ, ದೀಪಾವಳಿ, ಯುಗಾದಿ, ವರಮಹಾಲಕ್ಷ್ಮಿ, ಬಸವ ಜಯಂತಿ, ಆಯುಧ ಪೂಜೆ ಇತ್ಯಾದಿ ಹಬ್ಬಗಳನ್ನ ಆಚರಿಸಲು ಪ್ರಾರಂಭಿಸಿದ್ದಾರೆ. ಆದರೂ, ದೀಪಾವಳಿ, ಯುಗಾದಿ ಮತ್ತು ಬಸವ ಜಯಂತಿ ಹಬ್ಬಗಳನ್ನ ಆಚರಿಸುವಾಗ ತಮ್ಮ ಸಮುದಾಯದ ಸಂಪ್ರದಾಯದಂತೆ ಆಚರಿಸಿ ತಮ್ಮ ಸಮುದಾಯದ ಸಂಸ್ಕೃತಿಯನ್ನ ಉಳಿಸಿಕೊಂಡು ಬಂದಿರುವುದನ್ನ ಕಾಣಬಹುದು. ದೀಪಾವಳಿ ಹಬ್ಬದಲ್ಲಿ ದೀಪಗಳನ್ನ ಹಚ್ಚುವುದಕ್ಕೆ ಮಹತ್ವ ಕೊಟ್ಟರೂ, ಬುಡಕಟ್ಟು ದೇವರನ್ನ ಶೃಂಗರಿಸಿ ವಾದ್ಯಗಳೊಂದಿಗೆ ದೇವರಿಗೆ ಆರತಿಯನ್ನ ಬೆಳಗಲಾಗುತ್ತದೆ. ಹೆಂಗಳೆಯರು ಹೂವಿನಿಂದಲಂಕೃತವಾದ ಆರತಿಯನ್ನ ಪೂಜಿಸಿಕೊಂಡು ಊರಿನ ಮಧ್ಯ ಭಾಗದಲ್ಲಿರುವ ದೇವಾಲಯದ ಸುತ್ತ ಮೆರವಣಿಗೆ ಬರುತ್ತಾರೆ. ಮೆರವಣಿಗೆಯ ನಂತರ ತಮ್ಮ ಆರತಿಗಳನ್ನ ದೇವರಿಗೆ ಸಮರ್ಪಿಸುತ್ತಾರೆ. ದೀಪಾವಳಿ ಹಬ್ಬವನ್ನ ರಾತ್ರಿಯಿಡೀ ಆಚರಿಸುತ್ತಾರೆ. ಇಲ್ಲಿ ಆಧುನಿಕತೆಯ ಪಟಾಕಿ, ಸಿಡಿ ಮದ್ದುಗಳ ಆರ್ಭಟ ಇರುವುದಿಲ್ಲ. ಆದರೆ ಇತ್ತೀಚೆಗೆ ಹಟ್ಟಿಗಳಲ್ಲಿ ಯುವಕರು ಸಾಮಾನ್ಯವಾಗಿ

ನಗರದಲ್ಲಿ ದೀಪಾವಳಿ ಹಬ್ಬವನ್ನ ಆಚರಿಸುವಂತೆ ಪಟಾಕಿಗಳೊಂದಿಗೆ ಹಬ್ಬವನ್ನ ಆಚರಿಸುತ್ತಾರೆ.

ಯುಗಾದಿ ಹಬ್ಬವು ಇತರೆ ಸಮುದಾಯದವರಿಗೆ ಇದ್ದಂತೆ ಗೊಲ್ಲ ಸಮುದಾಯ ದವರಿಗೆ ಹೊಸ ವರ್ಷದ ಆರಂಭದ ದಿನವಾಗಿದ್ದರೂ, ಈ ಹಬ್ಬವನ್ನ ವಿಶೇಷವಾಗಿ ಆಚರಿಸುತ್ತಾರೆ. ಹಬ್ಬದ ದಿವಸ ಇವರು ತಮ್ಮ ತಮ್ಮ ಹಟ್ಟಿಗಳಲ್ಲಿರುವ ಬುಡಕಟ್ಟು ದೇವರುಗಳನ್ನ ಶೃಂಗರಿಸಿ ವಿಶೇಷವಾಗಿ ಪೂಜಿಸುತ್ತಾರೆ. ಅದರಲ್ಲಿಯೂ ತಮ್ಮ ಸಾಂಸ್ಕೃತಿಕ ವೀರರಿಗೆ ಆಭರಣಗಳಿಂದ ಶೃಂಗರಿಸಿ ರಾತ್ರಿ ಇಡೀ ಕೋಲಾಟ, ವಾದ್ಯ, ಡೋಲು ಗಳೊಂದಿಗೆ ಮೆರವಣಿಗೆ ಮಾಡುತ್ತಾರೆ. ಗೊಲ್ಲರು ಆಚರಿಸುವ ಹಬ್ಬಗಳಲ್ಲಿ ಕಾರಹುಣ್ಣಿಮೆ (ಕಾರಬ್ಬ)ಯು ಮುಖ್ಯವಾದುದಾಗಿದೆ. ಈ ಹಬ್ಬವನ್ನ ಸಾಮಾನ್ಯವಾಗಿ ಜೂನ್ ತಿಂಗಳಲ್ಲಿ ಆಚರಿಸಲಾಗುತ್ತದೆ. ಈ ಹಬ್ಬದ ಆಚರಣೆಗಳಲ್ಲಿ ಪ್ರಾದೇಶಿಕ ಭಿನ್ನತೆಯಿದ್ದರೂ ಹೆಚ್ಚು –ಕಡಿಮೆ ಒಂದೇ ರೀತಿಯ ಆಚರಣೆಯನ್ನ ಕಾಣಬಹುದು. ಕಾರಬ್ಬದ ಸಮಯದಲ್ಲಿ ಹಟ್ಟಿಯ ಜನರು ತಮ್ಮ ತಮ್ಮ ರಾಸುಗಳಿಗೆ (ಎತ್ತು, ಹಸುಗಳು) ಅಥವಾ ದನಕರುಗಳಿಗೆ ಬಣ್ಣದ ಕಾಗದಗಳಿಂದ (ಸುನಾರಿ) ಶೃಂಗರಿಸುತ್ತಾರೆ. ಸಾಯಂಕಾಲದ ಸಮಯದಲ್ಲಿ ಮನೆಗೊಬ್ಬರಂತೆ ತಮ್ಮ ಶೃಂಗರಿಸಿದ ರಾಸುಗಳನ್ನ ಹಟ್ಟಿಯ ದೇವಸ್ಥಾನದ ಸುತ್ತ ತಿರುಗಿಸಿ ಮತ್ತೆ ಊರ ಸುತ್ತ ವೇಗವಾಗಿ ಹೊರಡಿಸುತ್ತಾ ಊರಿನಿಂದ ಸ್ವಲ್ಪ ದೂರವಿರುವ ಬಸವನ ಗುಡ್ಡೆ(ಬಸವನ ದೇವಸ್ಥಾನ)ಯ ಹತ್ತಿರ ಬಂದು ತಮ್ಮ ರಾಸುಗಳಿಗೆ ಪೂಜೆ ಸಲ್ಲಿಸುತ್ತಾರೆ. ಮತ್ತೆ ಅಲ್ಲಿಂದ ಊರ ಕಡೆ ಬಂದು ಹಟ್ಟಿಯ ದ್ವಾರ ಬಾಗಿಲಿನಲ್ಲಿ ಹಸಿರು ತೋರಣವನ್ನ ಹರಿದು ಕುಣಿದು ಕುಪ್ಪಳಿಸಿ ಸಂಭ್ರಮದಿಂದ ತಮ್ಮ ರಾಸು ಗಳೊಂದಿಗೆ ತಾವು ತಯಾರಿಸಿದ ವಿಶೇಷ ಆಹಾರದ ಒಂದು ಭಾಗವನ್ನ 'ಎಡೆಯ' ರೂಪದಲ್ಲಿ ರಾಸುಗಳಿಗೆ ತಿನ್ನಿಸುತ್ತಾರೆ. ರಾಸುಗಳಿಗೆ ಎಡೆ ತೀರಿಸಿದ ನಂತರ ಜನರು ಊಟ ಮಾಡುತ್ತಾರೆ.

### ಜಾತ್ರೆಗಳು

ಗೊಲ್ಲರ ಜಾತ್ರೆಗಳು ಸಾಮಾನ್ಯವಾಗಿ ಎರಡು ಅಥವಾ ಮೂರು ದಿನಗಳ ಕಾಲ ನಡೆಯುತ್ತವೆ. ಈ ಜಾತ್ರೆಗಳಲ್ಲಿ ಬುಡಕಟ್ಟಿನ ಎಲ್ಲಾ ಬಂಧುಗಳು ಮತ್ತು ಸಮೀಪದ ಸಂಬಂಧಿಗಳು ಬಂದು ಸೇರುತ್ತಾರೆ. ಈ ಜಾತ್ರೆಗಳು ನಿಗದಿತ ಸಮಯದಲ್ಲಿ ವರ್ಷಕ್ಕೊಮ್ಮೆ ಬೇಸಿಗೆ ಕಾಲದಲ್ಲಿ ನಡೆಯುತ್ತವೆ. ಕೆಲವೊಮ್ಮೆ ಬರಗಾಲ ಬಂದಾಗ ವಿಶೇಷ ಜಾತ್ರೆಯನ್ನ ಸಂಘಟಿಸಲಾಗುತ್ತದೆ. ಈ ಜಾತ್ರೆಗಳಿಗೆ ಆ ಪ್ರಾಂತ್ಯದ ಎಲ್ಲಾ ದೇವರುಗಳನ್ನ ಕರೆಸಲಾಗುತ್ತದೆ. ದೇವರುಗಳ ಜೊತೆಯಲ್ಲಿ ಬುಡಕಟ್ಟಿನ ಜನರೂ ಬರುತ್ತಾರೆ. ಬಂದ ದೇವರುಗಳನ್ನ ಜಾತ್ರೆಯು ನಡೆಯುವ ಹಟ್ಟಿಯವರು ವಿಶೇಷವಾಗಿ ಬುಡಕಟ್ಟಿನ ಸಂಪ್ರದಾಯದಂತೆ ಸ್ವಾಗತಿಸುತ್ತಾರೆ. ರಾತ್ರಿ ಗಂಗಾಸ್ನಾನ ಮಾಡಿಸಿ ಬುಡಕಟ್ಟು ಭಾಷೆಯಲ್ಲಿ (ಹೊಳೆ ತೆಗೆಯುವುದು) ದೇವರುಗಳನ್ನ ಶೃಂಗರಿಸಿ ಮೆರವಣಿಗೆ (ಪೂಜಾ ಕುಣಿತ) ಮಾಡಿಸುತ್ತಾರೆ. ವಾದ್ಯಗೋಷ್ಠಿ ಅಂದರೆ ಹಾಡು, ಡೋಲು, ನಗಾರಿಯೊಂದಿಗೆ

ರಾತ್ರಿಯಿಡೀ ಜನರು ದೇವರುಗಳನ್ನ ಕುಣಿಸುತ್ತಾರೆ. ವಾದ್ಯಕ್ಕೆ ತಕ್ಕಂತೆ ಕಾಲುಗಳನ್ನ ಹಾಕುತ್ತಾ ದೇವರುಗಳನ್ನ ಕುಣಿಸುವುದನ್ನ ನೋಡಿದರೆ ಇದು ಒಂದು ಜಾನಪದ ಕಲೆಯಂತಿದ್ದು, ನೋಡಲು ಮತ್ತು ಕೇಳಲು ತುಂಬಾ ಮನರಂಜನೆಯಾಗಿರುತ್ತದೆ. ಜಾತ್ರೆಗೆ ಬಂದ ಭಕ್ತಾದಿಗಳಿಗೆ ಮತ್ತು ನೆಂಟರಿಷ್ಟರಿಗೆ ಭೋಜನ ಏರ್ಪಡಿಸುತ್ತಾರೆ. ಜಾತ್ರೆಗೆ ಬಂದ ಭಕ್ತಾದಿಗಳು ಹರಕೆ ಮಾಡಿಕೊಂಡಿದ್ದರೆ, ಬೆಳ್ಳಿಯಲ್ಲಿ ಹಾವು, ಚೇಳು ಮಾಡಿಸಿ ದೇವರಿಗೆ ಸಮರ್ಪಿಸುತ್ತಾರೆ.

### ಗೊಲ್ಲ ಸಮುದಾಯದ ಧಾರ್ಮಿಕ ಕೇಂದ್ರಗಳು

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಎತ್ತಪ್ಪ ದೇವರ ಕೇಂದ್ರ, ವೇಣುಕಲ್ಲು ಗುಡ್ಡ, ಶಿರಾ ಮತ್ತು ಗುಬ್ಬಿ ತಾಲ್ಲೂಕಿನ (ಹಾಗಲವಾಡಿ) ಜುಂಜಪ್ಪ ಸ್ವಾಮಿ ಕೇಂದ್ರ, ಚಿಕ್ಕಣ್ಣ ಸ್ವಾಮಿ ಧಾರ್ಮಿಕ ಕೇಂದ್ರ, ಮಡಕಸಿರಾ ತಾಲ್ಲೂಕಿನ ಮದನ ಕುಂಟೆ ಚಿತ್ರದೇವರ ಕೇಂದ್ರ, ಹಿರಿಯೂರು ತಾಲ್ಲೂಕಿನ ನಂದಿಹಳ್ಳಿ ರಂಗಪ್ಪ ದೇವರ ಕೇಂದ್ರ, ಇದೇ ತಾಲ್ಲೂಕಿನ ಯರಬಳ್ಳಿ ಮತ್ತು ಇಕ್ಕನೂರಿನ ಕಾಟಮ್ಮ ದೇವರ ಕೇಂದ್ರ, ಕೂಡಲ ಹಳ್ಳಿಯಲ್ಲಿ ಪಾತೇ ದೇವರ ಕೇಂದ್ರವಿದೆ. ಚಳ್ಳಕೆರೆ ತಾಲ್ಲೂಕಿನ ಚೆನ್ನಮ್ಮ ನಾಗತಿಹಳ್ಳಿಯಲ್ಲಿ ಕೇತೆದೇವರ ಕೇಂದ್ರವಿದೆ. ಇದೇ ರೀತಿ ಮಾಗಡಿ ತಾಲ್ಲೂಕು ಮತ್ತು ಪಾವಗಡ ತಾಲ್ಲೂಕಿನ ಕೆಂಚಮ್ಮನಹಳ್ಳಿಯ ಮಂಗರಾಯಸ್ವಾಮಿ, ಪಾಲವ್ವನಹಳ್ಳಿ (ಪೋಲೇನ ಹಳ್ಳಿ)ಯ ಚಿತ್ರದೇವರು, ಬೆಸ್ತರಹಳ್ಳಿ, ನಿಜವಳ್ಳಿ (ಕಲ್ಯಾಣದುರ್ಗ ತಾ) ಗೊಲ್ಲ ದೇವರುಗಳ ಧಾರ್ಮಿಕ ಕೇಂದ್ರಗಳಿವೆ. ಕುಣಿಗಲ್ ತಾಲ್ಲೂಕಿನ ಹಾಲಣ್ಣನ ಗುಡ್ಡೆ ಕೇಂದ್ರ, ಗುಬ್ಬಿ ತಾಲ್ಲೂಕಿನ ಬಿದರೆಹಟ್ಟಿಯ ಈರ ಮುದ್ದಪ್ಪ ಕೇಂದ್ರ ಇದೇ ತಾಲ್ಲೂಕಿನ, ಜುಂಜಪ್ಪನ ಹಟ್ಟಿಯ ಜುಂಜಪ್ಪನ ಕೇಂದ್ರಗಳು ಪ್ರಮುಖವಾಗಿವೆ. ರಾಜ್ಯದ ಗೊಲ್ಲ ಸಮುದಾಯವು ಸಸ್ಯಹಾರಿ ಹಬ್ಬಗಳನ್ನ ಮತ್ತು ದೇವರುಗಳನ್ನ ಆಚರಿಸುವುದು ಮತ್ತು ಪೂಜಿಸುವುದ ರೊಂದಿಗೆ ಮಾಂಸಾಹಾರಿ ಹಬ್ಬಗಳನ್ನ ಮತ್ತು ದೇವರುಗಳನ್ನ ಆಚರಿಸುತ್ತಾರೆ ಮತ್ತು ಪೂಜಿಸುತ್ತಾರೆ. ಮಾಂಸಾಹಾರಿ ಹಬ್ಬಗಳನ್ನ ಆಚರಿಸಲು ಇಂತಹದೇ ದಿನವನ್ನ ಮೊದಲೇ ನಿಗದಿ ಮಾಡುವುದಿಲ್ಲ. ತಮಗೆ ಅನುಕೂಲವಾದಾಗ ಅಥವಾ ಬರ ಬಂದಾಗ ಮಾಂಸಾಹಾರಿ ಹಬ್ಬಗಳನ್ನ ಆಚರಿಸುತ್ತಾರೆ. ಉದಾಹರಣೆಗೆ ರಾಜ್ಯದ ಬಹುತೇಕ ಗೊಲ್ಲರು ಪಶುಪಾಲನೆಯೊಂದಿಗೆ ಕುರಿ ಸಾಕಣೆಯನ್ನ ತಮ್ಮ ಕುಲ ಕಸುಬನ್ನಾಗಿ ಮಾಡಿಕೊಂಡಿರುವುದರಿಂದ, ಕುರಿ ಸಾಕುವವರು ಒಂದು ಟಗರನ್ನ ದೇವರಿಗೆ ಹರಕೆ ಬಿಡುತ್ತಾರೆ. ಸಾಮಾನ್ಯವಾಗಿ ಹಾಲಣ್ಣ, ಭೂತಪ್ಪ ಇತ್ಯಾದಿ ದೇವರುಗಳಿಗೆ ಹರಕೆ ಬಿಡುತ್ತಾರೆ. ಟಗರು ಮರಿಯು ಹುಲುಸಾಗಿ ಬೆಳೆದ ನಂತರ ಒಂದು ಮುಖ್ಯವಾದ ದಿನ ಬುಡಕಟ್ಟಿನ ಜನರೆಲ್ಲಾ ಊರ ಹೊರಗೆ ಸೇರಿ ದೇವರನ್ನ ಪೂಜಿಸಿ ಆ ದೇವರಿಗೆ ಟಗರನ್ನ ಹರಕೆಯ ರೂಪದಲ್ಲಿ ಅರ್ಪಿಸುತ್ತಾರೆ. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಕುರಿಯ ಟಗರನ್ನ ಹರಕೆಯ ರೂಪದಲ್ಲಿ ಅರ್ಪಿಸಿದರೆ ಜನರ ಮತ್ತು ಹಟ್ಟಿಯ ಕಷ್ಟ ಕಾರ್ಪಣ್ಯಗಳು ನಿವಾರಣೆಯಾಗುತ್ತವೆ ಮತ್ತು ಮಳೆ ಬಂದು ನಾಡು ಸಮೃದ್ಧಿ

ಯಾಗುತ್ತದೆಂಬ ನಂಬಿಕೆಯು ಕಾಡುಗೊಲ್ಲರಲ್ಲಿದೆ. ಎಷ್ಟೋ ಬಾರಿ ಕಾಕತಾಳಿಯವೆಂಬಂತೆ ಟಗರನ್ನ ಹರಕೆ ಅರ್ಪಿಸಿದ ದಿನವೇ ಜೋರಾಗಿ ಮಳೆ ಬಂದಿರುವುದನ್ನ ನಾವು ಕಾಣಬಹುದು. ಆದರೆ ಇತ್ತೀಚೆಗೆ ನಗರಗಳ ಸಂಪರ್ಕದಿಂದಾಗಿ ಕಾಡುಗೊಲ್ಲರು ಟಗರು ಬಲಿ ಕೊಡುವುದನ್ನ ಬಿಟ್ಟಿದ್ದಾರೆ. ಇವರು ಈಗಿನ ದಿನಗಳಲ್ಲಿ ಹೆಚ್ಚಾಗಿ ಸಸ್ಯಹಾರಿ ದೇವರುಗಳನ್ನ ಪೂಜಿಸಲು ಮತ್ತು ಸಸ್ಯಹಾರಿ ಹಬ್ಬಗಳನ್ನ ಆಚರಿಸಲು ಪ್ರಾರಂಭಿಸಿದ್ದಾರೆ.

**ಕೋಷ್ಟಕ: ೫.೧ ಸಮೀಕ್ಷೆಗೊಳಪಟ್ಟ ಕುಟುಂಬಗಳ ಮನೆದೇವರುಗಳು**

| ಕ್ರಸಂ. | ಮನೆದೇವರುಗಳ ಹೆಸರು | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಅಲಿಂಗೇಶ್ವರ | ೧ | ೦.೨೫ |
| ೨ | ಆಲುಗುಡ್ಡಪ್ಪ ಸ್ವಾಮಿ | ೩ | ೦.೭೫ |
| ೩ | ಅಪ್ಪಣ್ಣಗೌಡ | ೨ | ೦.೫೦ |
| ೪ | ಬಾಳ ದೇವರು | ೩ | ೦.೭೫ |
| ೫ | ಬಾಲಕೃಷ್ಣ | ೨ | ೦.೫೦ |
| ೬ | ಬಂಜಗೆರೆ ವೇರಣ್ಣ | ೨ | ೦.೫೦ |
| ೭ | ಬೈರೆವೇಶ್ವರ | ೧ | ೦.೨೫ |
| ೮ | ಭೂತಪ್ಪ | ೧ | ೦.೨೫ |
| ೯ | ಬೊಮ್ಮ ದೇವರು | ೪ | ೧.೦೦ |
| ೧೦ | ಚಿಕ್ಕಣ್ಣ ಸ್ವಾಮಿ | ೫ | ೧.೨೫ |
| ೧೧ | ಚಿತ್ರಲಿಂಗೇಶ್ವರ | ೬೪ | ೧೬.೦೦ |
| ೧೨ | ಚಿತ್ತಯ್ಯ | ೧ | ೦.೨೫ |
| ೧೩ | ದೇವರ ಚಿತ್ತಪ್ಪ | ೧ | ೦.೨೫ |
| ೧೪ | ದ್ಯಾಮವ್ವ | ೧ | ೦.೨೫ |
| ೧೫ | ಈರ ಭದ್ರಪ್ಪ | ೧ | ೦.೨೫ |
| ೧೬ | ಈರ ಕರಿಯಣ್ಣ | ೨ | ೦.೫೦ |
| ೧೭ | ಈರ ಮುದ್ದಣ್ಣ | ೩ | ೦.೭೫ |
| ೧೮ | ಈರ ಮುದ್ದಪ್ಪ | ೧೫ | ೩.೭೫ |
| ೧೯ | ಈರ ನಾಗಣ್ಣ | ೩ | ೦.೭೫ |
| ೨೦ | ಈರ ತಿಪ್ಪಣ್ಣ | ೬ | ೧.೫೦ |
| ೨೧ | ಈರ ಮಾರಣ್ಣ | ೧೭ | ೪.೨೫ |
| ೨೨ | ಈರಣ್ಣ | ೨ | ೦.೫೦ |
| ೨೩ | ಈತಪ್ಪ ದೇವರು | ೭ | ೧.೭೫ |
| ೨೪ | ಗಡ್ಡಂ ತಿಪ್ಪೆಸ್ವಾಮಿ | ೧ | ೦.೨೫ |

| | | | |
|---|---|---|---|
| ೨೫ | ಗೊಲ್ಲ ಹಾಲಮ್ಮ | ೩ | ೦.೭೫ |
| ೨೬ | ಗೊರಟ್ಟಿನ ಮಾರಮ್ಮ | ೨ | ೦.೫೦ |
| ೨೭ | ಗುಡ್ಡದ ಎತಪ್ಪ | ೧ | ೦.೨೫ |
| ೨೮ | ಗುಡ್ಡದ ತಿಪ್ಪೆಸ್ವಾಮಿ | ೧ | ೦.೨೫ |
| ೨೯ | ಹಾಲ ಲಿಂಗೇಶ್ವರ | ೩ | ೦.೭೫ |
| ೩೦ | ಹಾಲಣ್ಣ | ೧ | ೦.೨೫ |
| ೩೧ | ಹಾಲು ಗುಡ್ಡದಪ್ಪ | ೧ | ೦.೨೫ |
| ೩೨ | ಹಾಲು ಗುಡ್ಡಪ್ಪ | ೧ | ೦.೨೫ |
| ೩೩ | ಹಾಲು ಕುಡಿದ ಸ್ವಾಮಿ | ೪ | ೧.೦೦ |
| ೩೪ | ಹಿರೆ ಕಾಟಂ ದೇವರು | ೧೪ | ೩.೫೦ |
| ೩೫ | ಹೂವಿನ ಹೊಳೆ ಈರಪ್ಪ | ೨ | ೦.೫೦ |
| ೩೬ | ಐಗುರು ರಾಮ ದೇವರು | ೧ | ೦.೨೫ |
| ೩೭ | ಈರಕರಿಯಣ್ಣ | ೨ | ೦.೫೦ |
| ೩೮ | ಜಗಧರಿ ಲಿಂಗೇಶ್ವರ | ೧ | ೦.೨೫ |
| ೩೯ | ಜಂಪಣ್ಣ | ೩ | ೦.೭೫ |
| ೪೦ | ಜುಂಜಪ್ಪ | ೧೨ | ೩.೦೦ |
| ೪೧ | ಕದರಿ ನರಸಿಂಹಸ್ವಾಮಿ | ೨ | ೦.೫೦ |
| ೪೨ | ಕಂಬದಪ್ಪ | ೧ | ೦.೨೫ |
| ೪೩ | ಕಂಬ ರಂಗಪ್ಪ | ೧ | ೦.೨೫ |
| ೪೪ | ಕಾಟಂ ದೇವರು | ೨೭ | ೬.೭೫ |
| ೪೫ | ಕಾಟಂ ಲಿಂಗ | ೧೧ | ೨.೭೫ |
| ೪೬ | ಕಾಟಂ ಲಿಂಗೇಶ್ವರ | ೧ | ೦.೨೫ |
| ೪೭ | ಕಾಟಂ ಮಾಲಿಂಗ | ೧ | ೦.೨೫ |
| ೪೮ | ಕಾಟಪ್ಪ | ೭ | ೧.೭೫ |
| ೪೯ | ಕಾವಲ್ಲಮ್ಮ | ೧ | ೦.೨೫ |
| ೫೦ | ಕ್ಯಾತಲಿಂಗೇಶ್ವರ | ೩ | ೦.೭೫ |
| ೫೧ | ಕ್ಯಾತಪ್ಪ | ೧೦ | ೨.೫೦ |
| ೫೨ | ಲಕ್ಷ್ಮಿ ನರಸಿಂಹ | ೩ | ೦.೭೫ |
| ೫೩ | ಮಾಚಪ್ಪ | ೧ | ೦.೨೫ |
| ೫೪ | ಮಹಲಿಂಗಸ್ವಾಮಿ | ೧ | ೦.೨೫ |
| ೫೫ | ಮೈಲಾರ ಲಿಂಗೇಶ್ವರ | ೨ | ೦.೫ |
| ೫೬ | ಮಲ್ಲಪ್ಪ | ೧ | ೦.೨೫ |

| | | | |
|---|---|---|---|
| ೫೭ | ಮಲ್ಲೆ ದೇವರು | ೧ | ೦.೨೫ |
| ೫೮ | ಮಾಸಣ್ಣ | ೧ | ೦.೨೫ |
| ೫೯ | ಮಾಸಪ್ಪ | ೨ | ೦.೫೦ |
| ೬೦ | ಮೂಡಲಗಿರಿ ತಿಮ್ಮಪ್ಪ | ೮ | ೨.೦೦ |
| ೬೧ | ಮೂಡಲ ಗಿರಿಯಪ್ಪ | ೪ | ೧.೦೦ |
| ೬೨ | ಮುತ್ತಣ್ಣ | ೧ | ೦.೨೫ |
| ೬೩ | ನಂದಿಹಳ್ಳಿ ರಂಗಪ್ಪ | ೧ | ೦.೨೫ |
| ೬೪ | ನರಸಿಂಹಸ್ವಾಮಿ | ೧೧ | ೨.೭೫ |
| ೬೫ | ಓಬಳ ದೇವರು | ೩ | ೦.೭೫ |
| ೬೬ | ಪಕೆ ದೇವರು | ೨ | ೦.೫ |
| ೬೭ | ಪಾರ್ಥ ಮಲ್ಲಯ್ಯ | ೧ | ೦.೨೫ |
| ೬೮ | ಪಾರ್ಥಲಿಂಗೇಶ್ವರ | ೨ | ೦.೫೦ |
| ೬೯ | ಪಾರ್ಥಪ್ಪ | ೧ | ೦.೨೫ |
| ೭೦ | ಪರ್ವತ ಮಲ್ಲಯ್ಯ | ೧ | ೦.೨೫ |
| ೭೧ | ಪಾತಪ್ಪ | ೩ | ೦.೭೫ |
| ೭೨ | ರಾಮ ದೇವರು | ೮ | ೨.೦೦ |
| ೭೩ | ರಂಗನಾಥ ಸ್ವಾಮಿ | ೨೬ | ೬.೫೦ |
| ೭೪ | ರಂಗಪ್ಪ | ೨ | ೦.೫೦ |
| ೭೫ | ಸಿದ್ದಪ್ಪ | ೧ | ೦.೨೫ |
| ೭೬ | ಸಿದ್ದಪ್ಪ ವೆಂಕಟೇಶ್ವರ | ೧ | ೦.೨೫ |
| ೭೭ | ಸಿದ್ದೇಶ್ವರ | ೬ | ೧.೫೦ |
| ೭೮ | ತಿಮ್ಮಪ್ಪ | ೨೩ | ೫.೭೫ |
| ೭೯ | ವಡೆ ದೇವರು | ೧ | ೦.೨೫ |
| ೮೦ | ವಡಿಗೆರೆ ಸಿದ್ದಪ್ಪ | ೩ | ೦.೭೫ |
| ೮೧ | ವೀರ ಕರಿಯಣ್ಣ | ೩ | ೦.೭೫ |
| ೮೨ | ವೀರ ಹೊನ್ನಣ್ಣ ವೆಂಕಟೇಶ್ವರ | ೧ | ೦.೨೫ |
| ೮೩ | ವೀರ ಮಾರಣ್ಣ | ೧ | ೦.೨೫ |
| ೮೪ | ವೀರ ಮುದ್ದಣ್ಣ | ೪ | ೧.೦೦ |
| ೮೫ | ವೆಂಕಟರಮಣಸ್ವಾಮಿ | ೪ | ೧.೦೦ |
| ೮೬ | ಯಾರ್ರಣ್ಣ | ೧ | ೦.೨೫ |
| | ಒಟ್ಟು | ೪೦೦ | ೧೦೦.೦೦ |

ಕಾಡುಗೊಲ್ಲ ಸಮುದಾಯದ ಕುಟುಂಬಗಳ ಕುಲ ಚಿಹ್ನೆಗಳು ಈ ಕೆಳಕಂಡಂತಿವೆ ಎಂಬುದನ್ನು ಸಮೀಕ್ಷಾ ಅಧ್ಯಯನದಿಂದ ತಿಳಿಯಪಡಿಸಲಾಗಿದೆ.

**ಕೋಷ್ಟಕ: ೫.೨ ಸಮೀಕ್ಷೆಗೊಳಪಟ್ಟ ಕುಟುಂಬಗಳ ಕುಲಚಿಹ್ನೆ**

| ಕ್ರಸಂ. | ಕುಟುಂಬಗಳ ಕುಲಚಿಹ್ನೆಯ ಹೆಸರು | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಅಲಗು | ೯ | ೨.೨೫ |
| ೨ | ಗಣೆ | ೧ | ೦.೨೫ |
| ೩ | ಗೊಲ್ಲ ಕಡಗ | ೨೩೯ | ೫೯.೭೫ |
| ೪ | ಜಾಗಟೆ ಬನವಾಸಿ | ೧ | ೦.೨೫ |
| ೫ | ಕಡಗ | ೧೯ | ೪.೭೫ |
| ೬ | ಕೈ ಕಡಗ | ೫೪ | ೧೩.೫ |
| ೭ | ಕಂಬಳೀ ಕಡಗ | ೧೧ | ೨.೭೫ |
| ೮ | ಕಂಚಿನ ಕಡಗ | ೬ | ೧.೫ |
| ೯ | ಕರಡಿ | ೨ | ೦.೫ |
| ೧೦ | ಕರೆ ಕಂಬಳಿ | ೧೦ | ೨.೫ |
| ೧೧ | ಗೊತ್ತಿಲ್ಲ | ೪೮ | ೧೨ |
| | **ಒಟ್ಟು** | **೪೦೦** | ೧೦೦ |

ಬಹುತೇಕ ಜನರು ಗೊಲ್ಲ ಕಡಗ ಕುಟುಂಬದ ಕುಲಚಿಹ್ನೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಹಿರಿಯರ ಪೂಜೆ**

ಕಾಡುಗೊಲ್ಲರು ಹಿರಿಯರ ಪೂಜೆಯನ್ನು ತಮ್ಮ ಧಾರ್ಮಿಕ ಕ್ರಿಯಾವಿಧಿಯನ್ನಾಗಿಸಿ ಕೊಂಡಿದ್ದಾರೆ. ವ್ಯಕ್ತಿ ಸತ್ತ ನಂತರ ಒಂದು ಗುಡ್ಡೆಯನ್ನು ನಿರ್ಮಿಸಿ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ಗೌರವಾನ್ವಿತ ವ್ಯಕ್ತಿ ಸತ್ತರೆ ಸತ್ತ ವ್ಯಕ್ತಿಯ ಸಮಾಧಿಯನ್ನು ನಿರ್ಮಿಸುತ್ತಾರೆ. ಸಾಮಾನ್ಯ ಜನ ಸತ್ತರೆ ಮಣ್ಣಿನಿಂದ ಗುಡ್ಡೆ ಕಟ್ಟುತ್ತಾರೆ. ವರ್ಷಕ್ಕೆ ಒಂದು ಸಾರಿ ಕಾಡುಗೊಲ್ಲರು ಹಿರಿಯರ ಪೂಜೆ ಮಾಡುತ್ತಾರೆ. ಸಾಮಾನ್ಯವಾಗಿ ಇವರು ಅಕ್ಟೋಬರ್ ತಿಂಗಳಲ್ಲಿ ಹಿರಿಯರ ಪೂಜೆಯನ್ನು ಮಾಡುತ್ತಾರೆ. ಇದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನತೆ ಇರಬಹುದು. ಹಿರಿಯರ ಪೂಜೆಯ ದಿನದಂದು ಸತ್ತ ವ್ಯಕ್ತಿಯ ಸಂಬಂಧಿಕರು ಮುಖ್ಯವಾಗಿ ಮಕ್ಕಳು ಮೊಮ್ಮಕ್ಕಳು ಹೀಗೆ ಹತ್ತಿರದ ಸಂಬಂಧಿಕರು ಹಿರಿಯರ ಪೂಜೆ ಮಾಡುತ್ತಾರೆ. ಇದನ್ನು 'ಗುಡ್ಡೆ' ಪೂಜೆ ಎಂದು ಕಾಡುಗೊಲ್ಲರು ಕರೆಯುತ್ತಾರೆ. ಪೂಜೆಯ ದಿನದಂದು ಹಣ್ಣು, ಕಾಯಿ, ಹೂವು,

ಅಗರಬತ್ತಿ, ಕರ್ಪೂರ, ಮುಂತಾದ ಪೂಜಾ ಸಾಮಗ್ರಿಗಳನ್ನು ತೆಗೆದುಕೊಳ್ಳುತ್ತಾರೆ. ನಂತರ ಸತ್ತವ್ಯಕ್ತಿ ಪುರುಷನಾಗಿದ್ದರೆ, ಪಂಚೆ, ಟವಲ್‌ಗಳನ್ನು ಕೊಂಡು ಪೂಜಾ ಸಾಮಾಗ್ರಿಗಳೊಂದಿಗೆ ಗುಡ್ಡೆಯ ಹತ್ತಿರ ಹೋಗಿ, ಅಲ್ಲಿ ಗುಡ್ಡೆಯ ಸುತ್ತ ಮುತ್ತ ಇರುವ ಹಸಿರು ಹುಲ್ಲನ್ನು ಕಿತ್ತು ಸೆಗಣಿಯಿಂದ ಸಾರಿಸಿ, ಪೂಜೆಗೆ ತಯಾರು ಮಾಡಿ ಪೂಜೆ ಮಾಡುತ್ತಾರೆ. ಎಲ್ಲರೂ ಊದುಕಡ್ಡಿಯೊಂದಿಗೆ ಪೂಜೆ ಮಾಡುತ್ತಾರೆ. ಮಕ್ಕಳ ಕೈಯಿಂದಲೂ ಪೂಜೆ ಮಾಡಿಸುತ್ತಾರೆ. ಸತ್ತವ್ಯಕ್ತಿ ಮಹಿಳೆಯಾಗಿದ್ದರೆ, ಸೀರೆಯನ್ನು ಗುಡ್ಡೆಯ ಮೇಲಿಟ್ಟು ಪೂಜೆ ಮಾಡುತ್ತಾರೆ. ರಕ್ತ ಸಂಬಂಧಿಕರೆಲ್ಲರೂ ಒಂದೊಂದು ಹೊಸ ಬಟ್ಟೆಯನ್ನು ಗುಡ್ಡೆಯ ಮೇಲಿಟ್ಟು ಪೂಜೆ ಮಾಡಿ ನಂತರ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಕೆಲವು ಕಡೆ ಪೂಜೆಯ ಸಮಯದಲ್ಲಿ ತಕ್ಕ ಪದಗಳೊಂದಿಗೆ ಭಜನೆ ಮಾಡುತ್ತಾರೆ. ಪೂಜೆಯ ನಂತರ ಎಲ್ಲರಿಗೂ ಹಣ್ಣು ಕಾಯಿ, ತಾಂಬೂಲ, ಪ್ರಸಾದ ಕೊಡುತ್ತಾರೆ. ನಂತರ ಎಲ್ಲರೂ ಮನೆಗೆ ಹಿಂತಿರುಗುತ್ತಾರೆ.

**ಜನಪದ ವೈದ್ಯ**

ಜನಪದ ವೈದ್ಯರಲ್ಲಿ ಕಾಡುಗೊಲ್ಲ ಸಮುದಾಯದವರು ಅತ್ಯಂತ ಪ್ರವೀಣರೇ ಎಂದು ಹೇಳಬಹುದು. ಇಂದಿಗೂ ಬಹುತೇಕ ಕಾಡುಗೊಲ್ಲ ಸಮುದಾಯದವರು ಆಸ್ಪತ್ರೆಗಳನ್ನೇ ನೋಡಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಅಂದರೆ ಹಿಂದಿನಿಂದಲೂ ಇವರು ಜನಪದ ವೈದ್ಯ ಪದ್ಧತಿಯಲ್ಲಿ ನಂಬಿಕೆಯನ್ನಿಟ್ಟು, ಮುಂದುವರಿಸಿಕೊಂಡು ಬಂದವರಾಗಿದ್ದಾರೆ. ಹಿಂದೆ ಪ್ರತಿಯೊಂದು ಮನೆಯಲ್ಲಿಯೂ ಜನಪದ ವೈದ್ಯನಿದ್ದನು ಎಂಬ ಮಾತು ಸತ್ಯವಾದದು. ಜನಪದ ವೈದ್ಯದಲ್ಲಿ ಎರಡು ರೀತಿಯನ್ನು ಕಾಣಬಹುದು. ಒಂದು ಮನುಷ್ಯರಿಗೆ ರೋಗರುಜಿನಗಳು ಬಂದರೆ ಅವುಗಳನ್ನು ತಮ್ಮ ಜನಪದ ವೈದ್ಯ ಜ್ಞಾನದಿಂದ ವಾಸಿಮಾಡುವುದು, ಮತ್ತೊಂದು ಪ್ರಾಣಿ ಸಂಕುಲಗಳಿಗೆ ರೋಗ ರುಜಿನಗಳು ಬಂದಾಗ ಅವುಗಳಿಗೂ ಔಷಧಿ ಕೊಡುವುದು.

ಸಾಮಾನ್ಯವಾಗಿ ಕಾಡುಗೊಲ್ಲರು ನೆಗಡಿ, ಕೆಮ್ಮು, ಜ್ವರ ಮುಂತಾದ ರೋಗಗಳಿಗೆ ಆಧುನಿಕ ವೈದ್ಯರನ್ನು ಸಂಪರ್ಕಿಸುವುದಿಲ್ಲ. ಇವರೇ ದೇಶೀಯ ಜ್ಞಾನ ಬಳಸಿ ಕಾಯಿಲೆಗಳನ್ನು ವಾಸಿಮಾಡುತ್ತಾರೆ. ಕಾಡುಗೊಲ್ಲರು ಕಾಡಿನಲ್ಲಿರುವ ಬುಡಕಟ್ಟು ಜನರಾಗಿದ್ದರಿಂದ ಕಾಡಿನಲ್ಲಿ ದೊರೆಯುವ ನಾನಾ ರೀತಿಯ ಗಿಡ ಮೂಲಿಕೆಗಳ ಬಗ್ಗೆ ಜ್ಞಾನವುಳ್ಳವರಾಗಿದ್ದಾರೆ.

ಸಾಮಾನ್ಯ ಕಾಯಿಲೆಗಳಲ್ಲದೆ ದೊಡ್ಡ ಕಾಯಿಲೆಗಳಿಗೂ ಇವರು ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಿ ಕೊಡುತ್ತಾರೆ. ಇವರಲ್ಲಿ ಜನಪದ ವೈದ್ಯನೆಂಬ ವ್ಯಕ್ತಿ ಒಂದು ಹಟ್ಟಿಯಲ್ಲಿ ಕನಿಷ್ಟ ಒಬ್ಬನಾದರೂ ಇರುತ್ತಾನೆ. ಈ ವ್ಯಕ್ತಿಯನ್ನು ಇತರೆ ಸಮುದಾಯ ದವರೂ ಸಹ ತಮ್ಮ ಕಾಯಿಲೆಗಳನ್ನು ಗುಣಪಡಿಸಲು ಮೊರೆ ಹೋಗುತ್ತಾರೆ. ಇಂತಹ ವ್ಯಕ್ತಿಗೆ ಓದು ಬರಹ ಗೊತ್ತಿಲ್ಲದಿದ್ದರೂ ವೈದ್ಯ ಪದ್ಧತಿಯಲ್ಲಿ ಅಗಾಧ ಜ್ಞಾನವಿರುತ್ತದೆ. ಇವರಿಗೆ ಗಿಡಮೂಲಿಕೆಗಳ ಹೆಸರು ಇತರೆ ಯಾವ ಬುಡಕಟ್ಟು ಸಮುದಾಯದವರಿಗೂ

ಗೊತ್ತಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಆದರೆ ಇತ್ತೀಚೆಗೆ ಔಷಧೀಯ ಜ್ಞಾನವುಳ್ಳ ಜನಪದ ವೈದ್ಯರು ಕಡಿಮೆಯಾಗುತ್ತಾ ಬಂದಿದ್ದಾರೆ. ಅವರು ತಿಳಿದುಕೊಂಡಿರುವ ಜ್ಞಾನವನ್ನು ಇತರರಿಗೆ ಹೇಳಿಕೊಡದೆ ಇದ್ದುದರಿಂದಲೋ ಅಥವಾ ಯುವ ಸಮುದಾಯ ಆಸಕ್ತಿ ತೋರಿಸದೆ ಇದ್ದುದರಿಂದಲೋ ಇದು ಇಂದು ಕಣ್ಮರೆಯಾಗುತ್ತಿದೆ. ಜೊತೆಗೆ ನಾಗರಿಕತೆ ಮತ್ತು ಆಧುನೀಕರಣ ಆಂದಂತೆಲ್ಲಾ ಕಾಡುಗೊಲ್ಲರು ಆಧುನಿಕ ವೈದ್ಯ ಪದ್ಧತಿಗೆ ಮೊರೆ ಹೋಗುತ್ತಿದ್ದಾರೆ. ಬಹುತೇಕ ಈ ಸಮುದಾಯದ ಯುವಕರಿಗೆ ಜನಪದ ವೈದ್ಯ ಪದ್ಧತಿ ಗೊತ್ತಿಲ್ಲವೆಂದೇ ಹೇಳಬೇಕು.

ಕಾಡುಗೊಲ್ಲರು ಪಶುಪಾಲಕರಾದ್ದರಿಂದ ತಮ್ಮ ತಮ್ಮ ರಾಸುಗಳಿಗೆ ಅಥವಾ ಕುರಿ-ಮೇಕೆಗಳಿಗೆ ತಾವೇ ಔಷಧಿಯನ್ನು ಜನಪದ ವೈದ್ಯರು ಕೊಡುತ್ತಿದ್ದರು. ಕುರಿಗಳಿಗೆ ಮತ್ತು ದನಕರುಗಳಿಗೆ ನಾನಾ ರೀತಿಯ ರೋಗಗಳು ಬಂದಾಗ ಇವರು ಯಾವುದೇ ಪಶು ಆಸ್ಪತ್ರೆಗೆ ಸಂಪರ್ಕಿಸುತ್ತಿರಲಿಲ್ಲ ಅಥವಾ ಪಶುವೈದ್ಯರನ್ನು ಸಂಪರ್ಕಿಸುತ್ತಿರಲಿಲ್ಲ. ಬದಲಾಗಿ ಇವರಲ್ಲಿಯೇ ಇರುವ ಜನಪದ ವೈದ್ಯನನ್ನು ಸಂಪರ್ಕಿಸಿ ತಮ್ಮ ತಮ್ಮ ಕುರಿ-ದನಗಳಿಗೆ ಔಷಧಿಯನ್ನು ಕೊಡಿಸುತ್ತಿದ್ದರು. ಕಾಡುಗೊಲ್ಲರು ಕುರಿಗಳಿಗೆ ಮತ್ತು ಮೇಕೆಗಳಿಗೆ ಗದ್ದ ಊದಿಕೊಂಡು ಮೂಗಿನ ಎರಡು ಹೊಳ್ಳೆಗಳಿಂದಲೂ ಹಸಿರು ಬಣ್ಣದ ಸಿಂಬಳ ಒಂದೇ ಸಮನೆ ಸುರಿಯುತ್ತಿದ್ದರೆ ಅದು 'ಕರೇಗಾಬು ರೋಗ' ಎಂದು ಗುರುತು ಹಿಡಿಯುತ್ತಾರೆ. ಈ ಕಾಯಿಲೆಯನ್ನು ಔಷಧಿ ಕ್ರಮದಿಂದ ವಾಸಿ ಮಾಡುತ್ತಾರೆ.

ಕಾಡುಗೊಲ್ಲರ ಔಷಧೀಯ ಕ್ರಮದ ಬಗ್ಗೆ ತೀ.ನಂ. ಶಂಕರನಾರಾಯಣರವರು (೧೯೮೨:೧೭೧) ಈ ರೀತಿ ದಾಖಲಿಸಿದ್ದಾರೆ. ಧೂಪ ಕಣಿಗಲ ಗಿಡದ ಮೂರು ಎಲೆ, ದೊಡ್ಡ ಕಾಯಿ ಗಿಡದಲ್ಲಿ ಪೂರ್ವ ದಿಕ್ಕಿಗೆ ಹಬ್ಬಿರುವ ಬಳ್ಳಿಯಲ್ಲಿರುವ ಮೂರು ಎಲೆ, ಬಿಳಿ ಎಕ್ಕದ ಬೇರು, ಒಂದು ಹಿಡಿ ಬಿಳಿಯ ಗುಲಗಂಜಿ ಸೊಪ್ಪು, ಒಂದು ಹಿಡಿ ಕರಿಗುಲಗಂಜಿಯ ಸೊಪ್ಪು, ಒಂದು ಹಿಡಿ ದಾಸವಾಳದ ಸೊಪ್ಪು, ಒಂದು ಮೊಲದ ಕಿವಿಗಡ್ಡೆ, ಒಂದು ಹಿಡಿ ಮೋಟುಳ್ಳಿ ಸೊಪ್ಪು, ಒಂಬತ್ತು ನಿಂಬೆಕಾಯಿ, ಮೂರು ತುಂಡು ಹಸಿಯ ಅರಸಿನ ಇವೆಲ್ಲವನ್ನು ಒಟ್ಟಿಗೆ ಸೇರಿಸಿ ಒರಳಲ್ಲಿ ಹಾಕಿ ಕುಟ್ಟಬೇಕು. ಕೋಣ ಕರುವನ್ನು ಈಯ್ದಿರುವ ಎಮ್ಮೆಯ ಹಾಲನ್ನು ಕರೆಯಬೇಕು. ಮೇಲೆ ಹೇಳಿದ ವಸ್ತುಗಳನ್ನು ಕುಟ್ಟಿ ಒಂದು ಮಡಕೆಗೆ ಹಾಕಿ ಅದಕ್ಕೆ ಎಮ್ಮೆಯ ಹಾಲನ್ನು ಹಾಕಬೇಕು. ಇನ್ನು ಎರಡು ಹೊತ್ತು ಎಮ್ಮೆಯ ಹಾಲು ಕರೆದು ಮಡಕೆಗೆ ಹಾಕಿ ಅದರಲ್ಲಿರುವ ಮಿಶ್ರಣವನ್ನು ಹಾಲಿನಲ್ಲಿ ಕಲೆಸಿ, ಅದನ್ನು ಕುರಿಯ ಅಥವಾ ಮೇಕೆಯ ರೊಪ್ಪದಲ್ಲಿ ಚೆಲ್ಲಿದರೆ ಅದರ ವಾಸನೆಯನ್ನು ಕುರಿಗಳಾಗಲೀ ಮೇಕೆಗಳಾಗಲೀ ಸೇವಿಸುತ್ತದೆ. ಎರಡು ಮೂರು ಸಲ ಹೀಗೆಯೇ ಮಾಡಿದರೆ ಕುರಿಗಳಿಗೆ ಮತ್ತು ಮೇಕೆಗಳಿಗೆ ಉಂಟಾಗಿದ್ದ ಕರೇಗಾಬು ರೋಗ ವಾಸಿಯಾಗುತ್ತದೆ ಎಂಬ ನಂಬಿಕೆ.

ಆಡು ಮುಟ್ಟದ ಸೊಪ್ಪು, ರೋಜಿಗನ ಸೊಪ್ಪು ಮುಂತಾದ ಸೊಪ್ಪುಗಳಿಂದ

ತಯಾರಾದ ಔಷಧಿಯನ್ನು ಕುರಿ-ದನಗಳಿಗೆ ಗೊಟ್ಟದಲ್ಲಿ ಸೇರಿಸಿ ದನಕರುಗಳಿಗೆ ಕುಡಿಸಿ ರೋಗಗಳನ್ನು ವಾಸಿ ಮಾಡುತ್ತಾರೆ. ಆದರೆ ಇತ್ತೀಚೆಗೆ ಈ ಬಗೆಯ ಜನಪದ ವೈದ್ಯ ಪದ್ಧತಿಯ ಜ್ಞಾನ ನಶಿಸಿ ಹೋಗುತ್ತಿದ್ದು, ಯುವಕರು ತಮ್ಮ ರಾಸುಗಳಿಗೆ ಅಥವಾ ಕುರಿ-ದನಗಳಿಗೆ ಕಾಯಿಲೆ ಬಂದಾಗ ಪಶು ಆಸ್ಪತ್ರೆಗೆ ಅಥವಾ ಪಶು ವೈದ್ಯರನ್ನು ಸಂಪರ್ಕಿಸುವ ಅಭ್ಯಾಸವನ್ನು ಬೆಳೆಸಿಕೊಂಡಿರುವುದನ್ನು ನೋಡ ಬಹುದಾಗಿದೆ.

**ಮಾಟ ಮಂತ್ರ**

ಕಾಡುಗೊಲ್ಲರ ಜೀವನದಲ್ಲಿ ಮಾಟಕ್ಕೆ ಹೆಚ್ಚಿನ ಮಹತ್ವವಿಲ್ಲ. ಆದರೆ ಮಾಟದ ಶಕ್ತಿಯಲ್ಲಿ ನಂಬಿಕೆಯುಂಟು. ತಾವು ಸ್ವತಃ ಮಾಟ ಮಾಡದಿದ್ದರೂ ತಮಗೆ ಅಗತ್ಯವಾದ ಒಳ್ಳೆಯ ಮತ್ತು ಕೆಟ್ಟ ಉದ್ದೇಶಗಳಿಗಾಗಿ ಪರಿಣಿತ ಮಾಟಗಾರರಿಂದ ಮಾಟ ಮಾಡಿಸುತ್ತಾರೆ. ಇಂದಿಗೂ ಈ ಪದ್ಧತಿ ಪ್ರಚಲಿತವಾಗಿರುವುದು ಮಾತ್ರವಲ್ಲದೆ, ಅವರ ಪ್ರಮುಖ ಪುರಾಣವಾದ ಜುಂಜಪ್ಪನ ಕಥೆಯಲ್ಲಿಯೂ ಇದಕ್ಕೆ ನಿದರ್ಶನಗಳು ಕಂಡು ಬರುತ್ತವೆ (ಶಂಕರನಾರಾಯಣ,ತೀ ನಂ:೧೯೮೭:೧೬೭). ಜುಂಜಪ್ಪನ ದನಗಳನ್ನು ಸಾಯಿಸಲು ಮಳೆ ಬರದಂತೆ ಮಾಡುವುದೇ ಸರಿಯಾದ ಕ್ರಮವೆಂದು ಭಾವಿಸಿ ಅವನ ಸೋದರ ಮಾವಂದಿರು ಮರಡಿ ರಂಗಣ್ಣನ ಬಳಿಗೆ ಹೋಗಿ, ಅವನಿಗೆ ತಮ್ಮ ಉದ್ದೇಶವನ್ನು ತಿಳಿಸಿ ಮಳೆ ಬರದಂತೆ ಮಾಟ ಮಾಡಬೇಕೆಂದು ಹೇಳಿ, ಮಾಟ ಮಾಡಲು ಬೇಕಾದ ವಸ್ತುಗಳನ್ನು ಅವನಿಗೆ ಸೂಕ್ತವಾದ ಸಂಭಾವನೆಯನ್ನು ಕೊಟ್ಟರು. ಅದರಂತೆಯೇ ಮರಡಿ ರಂಗಣ್ಣ ಒಂಬತ್ತು ಹೂಜಿಗಳನ್ನು, ಒಂದು ಕಡೆ ಇಟ್ಟು, ಒಂದೊಂದು ಹೂಜಿಗೂ ಒಂದೊಂದು ನಿಂಬೆಹಣ್ಣು, ಒಂದೊಂದು ಕಲ್ಲು ಹರಳು, ಒಂದೊಂದು ಕುರಿ ಪಿಚಕಿ, ಒಂದೊಂದು ವಿಭೂತಿ ಕಟ್ಟು, ಅಕ್ಕಸಾಲಿಗರ ಕುಲುಮೆಯ ಒಂದೊಂದು ಹಿಡಿ ಬೂದಿ ಇಷ್ಟನ್ನು ಹಾಕಿ, ಒಂದೊಂದು ಅಕ್ಕಿಯ ಕಾಳನ್ನು ಮಂತ್ರಿಸಿ ಒಂದೊಂದು ಹೂಜಿಗೆ ಹಾಕಿದ. ಒಂಬತ್ತು ಗುಂಡಿಗಳನ್ನು ತೆಗೆದು ಒಂದೊಂದು ಗುಂಡಿಯಲ್ಲಿ ಒಂದೊಂದು ಹೂಜಿಯನ್ನು ಹೂಳಿದ. ಈ ಮಾಟದ ಮೂಲಕ ಏಳು ವರ್ಷಗಳ ಕಾಲ ಮಳೆ ಬರದೆ ಎಟ್ಟೆಯ ಬರ, ಡೊಕ್ಕೆಯ ಬರ, ಸೋಗೆ ಬರ, ಕೆಂಧೂಳಿ ಬರ ಬರುವಂತೆ ಮಾಡಿದ. ಅನಂತರ ಈ ವಿಷಯವನ್ನು ತಿಳಿದ ಜುಂಜಪ್ಪ ಮರಡಿ ರಂಗಣ್ಣನಿಗೆ ಸರಿಯಾಗಿ ಬುದ್ಧಿ ಕಲಿಸಿದ (ಅವರೇ:೧೯೮೭:೧೬೮).

ಕಾಡುಗೊಲ್ಲರ ಪುರಾಣಗಳಲ್ಲಿ ಮಾಟದ ಪ್ರಸ್ತಾಪ ಬರುವುದು ಎರಡು ಸಂದರ್ಭಗಳಲ್ಲಿ ಮಾತ್ರ. ಕಾಡುಗೊಲ್ಲರಲ್ಲಿ ಮಾಟಕ್ಕೆ ವಿಶೇಷವಾದ ಮಹತ್ವವಿಲ್ಲ ಎಂಬುದನ್ನು ಇದು ಸೂಚಿಸುತ್ತದೆ. ಅವರು ಹಿಂದೆ ದನಗಳನ್ನು ಕಾಯುವುದನ್ನೇ ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ಕಾಲದಲ್ಲಿ ಒಬ್ಬನ ದನಗಳನ್ನು ಹಾಳು ಮಾಡಲು ಮಾಟ ಮಾಡಿಸುತ್ತಿದ್ದರೆಂದು ಊಹಿಸಬಹುದು. ಆದರೆ, ಇಂದು ಅವರು ದನಗಳನ್ನು ಹೆಚ್ಚಾಗಿ ಸಾಕುವುದಿಲ್ಲ, ಕುರಿಗಳನ್ನೇ ಹೆಚ್ಚಾಗಿ ಸಾಕುವುದರಿಂದ ಕುರಿಗಳಿಗೆ ಮಾಟ ಮಾಡಿಸುವ ಪದ್ಧತಿ ತಕ್ಕ ಮಟ್ಟಿಗೆ ಪ್ರಚಲಿತವಾಗಿದೆ. ಕಾಡುಗೊಲ್ಲರಲ್ಲಿಯೂ

ಕೆಲವರು ಮಾಟ ಮಾಡುವುದನ್ನು ಕಲಿತಿದ್ದಾರೆ(ಅವರೇ:೧೯೮೨: ೧೬೮-೧೬೯). ಕಾಡುಗೊಲ್ಲರಲ್ಲಿ ವಿನಾಶಾತ್ಮಕ ಮಾಟ ರಕ್ಷಣಾ ಮಾಟ ಮತ್ತು ಉತ್ಪಾದಕ ಮಾಟ ಎಂಬ ಮುಖ್ಯವಾದ ಮಾಟದ ವಿಧಗಳಿವೆ.

ಜುಂಜಪ್ಪನ ಪುರಾಣಗಳಲ್ಲಿದ್ದಂತೆಯೇ ಇಂದಿನ ದಿನಗಳಲ್ಲಿ ವೈಯಕ್ತಿಕ ಕಾರಣಗಳಿಗಾಗಿ ಕಾಡುಗೊಲ್ಲರು ಮಾಟ ಮಾಡಿಸುತ್ತಾರೆ. ಹಿಂದೆ ಇದು ಸಾಮುದಾಯಿಕ ವಾಗಿದ್ದು, ಇಂದು ವೈಯಕ್ತಿಕ ವಿಷಯಗಳಿಗಾಗಿ ಮಾಟ ಮಾಡಿಸುತ್ತಾರೆ. ಈಗಾಗಲೇ ಹೇಳಿದಂತೆ ಕಾಡುಗೊಲ್ಲರಿಗೆ ಮಾಟ ಮಾಡಲು ಬರದಿದ್ದರೂ ಬೇರೆಯವರಿಂದ ಮಾಡಿಸುತ್ತಾರೆ. ಇಂದಿಗೂ ಬಹುತೇಕ ಕಾಡುಗೊಲ್ಲರಿಗೆ ಮಾಟದಲ್ಲಿ ನಂಬಿಕೆಯಿದೆ. ಬೇರೆಯವರ ಬಗ್ಗೆ ದ್ವೇಷ ಭಾವನೆಯಿದ್ದರೆ ಇವರು ಆ ದ್ವೇಷಕ್ಕೆ ಪ್ರತಿರೂಪವಾಗಿ ಆ ವ್ಯಕ್ತಿಯನ್ನು ಹಾಳು ಮಾಡಲು ಮಾಟ ಮಾಡಿಸುತ್ತಾರೆ. ಈ ಮಾಟದ ತಂತ್ರಗಾರಿಕೆ ಯೇನೆಂದರೆ ಒಬ್ಬ ವ್ಯಕ್ತಿಯ ಮನೆಗೆ ಕೆಟ್ಟದ್ದನ್ನು ಮಾಡಲು ಮಾಟಗಾರನಿಂದ ಮಾಡಿಸಿದ ಮಾಟದ ವಸ್ತುವನ್ನು ವ್ಯಕ್ತಿಯ ಮನೆಯ ಬದಿಗೆ ಮುಚ್ಚುತ್ತಾರೆ. ಇಲ್ಲವೇ ಜಮೀನಿನ ಒಳಗೆ ಮುಚ್ಚುತ್ತಾರೆ. ಮಾಟ ಮಾಡಿಸಲು ಬಳಸುವ ವಸ್ತುಗಳೆಂದರೆ, ನಿಂಬೆಹಣ್ಣು, ಮನುಷ್ಯರ ತಲೆ ಕೂದಲು, ಮೂಳೆ, ಮೆಣಸಿನಕಾಯಿ, ಬೆಳ್ಳುಳ್ಳಿ ಮುಂತಾದವುಗಳು. ಇವುಗಳನ್ನು ಒಂದು ಸಣ್ಣ ಮಣ್ಣಿನ ಕುಡಿಕೆಗೆ ಹಾಕಿ, ಮನೆಯ ಬದಿಯಲ್ಲಿ ಮುಚ್ಚಿದರೆ ಆ ಮನೆಯವರಿಗೆ ಕೆಟ್ಟದ್ದಾಗುತ್ತದೆ ಎಂಬ ನಂಬಿಕೆ ಕಾಡುಗೊಲ್ಲರಲ್ಲಿದೆ. ಹಾಗೆಯೇ ಮಾಟ ತೆಗೆಯಿಸಲು ಇದೇ ರೀತಿಯ ತಂತ್ರಗಾರಿಕೆಯನ್ನು ಬಳಸಿ ಮಾಟವನ್ನು ತೆಗೆಸುವರು. ಈ ಒಂದು ಮಾಟ ಮಾಡಿಸುವ ಪದ್ಧತಿಯು ಕಾಡುಗೊಲ್ಲರಲ್ಲಿ ಪ್ರಚಲಿತವಿದೆ ಎಂಬುದಾಗಿ ಹೇಳಬಹುದು.

೬

# ಒಳಾಡಳಿತ ವ್ಯವಸ್ಥೆ

## ನ್ಯಾಯ ಪಂಚಾಯಿತಿ

ಕಾಡುಗೊಲ್ಲರಲ್ಲಿರುವ ನ್ಯಾಯ ಪಂಚಾಯಿತಿಯ ಸ್ವರೂಪ ಬೇರೆ ಯಾವ ಸಮುದಾಯದಲ್ಲಿಯೂ ಇಲ್ಲ ಎಂದರೆ ತಪ್ಪಾಗಲಾರದು. ಈ ಸಮುದಾಯದ ಪಂಚಾಯಿತಿಯ ರಚನೆ, ತೀರ್ಮಾನಗಳು, ಜಗಳ, ವ್ಯಾಜ್ಯಗಳು ಇತ್ಯಾದಿಗಳು ಬುಡಕಟ್ಟು ಅಥವ ಕಟ್ಟೆ ಮನೆಯ ವಿಷಯಗಳಿಗೆ ಸಂಬಂಧಿಸಿದವುಗಳಾಗಿರುತ್ತವೆ. ಕಾಡುಗೊಲ್ಲ ಜನರು ನಂಬಿಕಸ್ತ ಜನರು ಎಂದು ಇತರೆ ಸಮುದಾಯದ ಜನರು ಹೇಳುತ್ತಿರುತ್ತಾರೆ. ಇವರಿಗೆ ಕೂಡಿ ಬಾಳಿ ಬದುಕುವ ಬಗ್ಗೆ ಅರಿವಿದೆಯೇ ಹೊರತು ಪ್ರತ್ಯೇಕ ಜೀವನ ನಡೆಸಿ ಅಭ್ಯಾಸವಿಲ್ಲ. ಎಂತಹದೇ ಪರಿಸ್ಥಿತಿ ಬಂದರೂ ಜಗಳ ಮಾಡದೆ ಸಹಿಸಿಕೊಂಡು ತುಂಬಾ ಸಹಿಷ್ಣುತಾವಾದಿಗಳಾಗಿದ್ದಾರೆ. ಕುಟುಂಬದಲ್ಲಾಗಲೀ, ಹಟ್ಟಿಯಲ್ಲಾಗಲೀ ಯಾವುದೇ ಪರಿಸ್ಥಿತಿಯಲ್ಲಿ ಉದ್ವೇಗಕ್ಕೆ ಒಳಗಾಗದೆ ತಾಳ್ಮೆಯನ್ನು ಪ್ರದರ್ಶಿಸುವ ಜನರಾಗಿದ್ದಾರೆ. ಇವರಿಗೆ ಸಮುದಾಯ ಜೀವನದಲ್ಲಿ ಅಪಾರ ನಂಬಿಕೆಯಿದೆ. ಇಂದಿಗೂ ಕೂಡ ಬಹುತೇಕ ಕಾಡುಗೊಲ್ಲರು ಪೋಲೀಸ್ ಠಾಣೆ ಮತ್ತು ಕೋರ್ಟುಗಳನ್ನು ನೋಡಿಲ್ಲವೆಂದೇ ಹೇಳಬೇಕು. ಅಷ್ಟರ ಮಟ್ಟಿಗೆ ಈ ಸಮುದಾಯದ ಜನರು ಮುಗ್ಧರು, ಪರಸ್ಪರ ಪ್ರೀತಿಯುಳ್ಳವರು.

ಆದಗ್ಯೂ, ಜನರು ಎಂದ ಮೇಲೆ ಅವರದೇ ಆಗಿರತಕ್ಕಂತ ಸಮಸ್ಯೆಗಳು ಇದ್ದೇ ಇರುತ್ತವೆ. ಇಂತಹ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಪ್ರತಿಯೊಂದು ಹಟ್ಟಿಯಲ್ಲಿಯೂ ಅವರದೇ ಆದಂತ ಬುಡಕಟ್ಟು ನ್ಯಾಯ ಪಂಚಾಯಿತಿಯಿರುತ್ತದೆ. ಈ ನ್ಯಾಯ ಪಂಚಾಯಿತಿಗೆ ಹಟ್ಟಿಯ ಹಿರಿಯ ಮುಖಂಡ ಅಥವ ಗೌಡ ಅಥವಾ ಪಟೇಲ ಎಂಬ ವ್ಯಕ್ತಿಯು ಮುಖ್ಯಸ್ಥನಾಗಿರುತ್ತಾನೆ. ಈ ನ್ಯಾಯ ಪಂಚಾಯಿತಿಯ ಮುಖ್ಯಸ್ಥನ ಸ್ಥಾನ ವಂಶಪಾರಂಪರ್ಯವಾಗಿದ್ದು, ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸಲ್ಪಟ್ಟಿರುತ್ತದೆ. ಎಲ್ಲಾ ರೀತಿಯ ವ್ಯಾಜ್ಯ ಮತ್ತು ತೀರ್ಮಾನಗಳಿಗೆ ಇವನೇ ಮುಖ್ಯಸ್ಥನಾಗಿರುತ್ತಾನೆ. ಈ ಮುಖ್ಯಸ್ಥನು ಪುರುಷನಾಗಿರಬೇಕು. ಮಹಿಳೆಯರಿಗೆ ಮುಖ್ಯಸ್ಥನ ಹುದ್ದೆ ಲಭಿಸುವುದಿಲ್ಲ. ಗೌಡ ಅಥವಾ ಮುಖ್ಯಸ್ಥನ ಮಕ್ಕಳು ಬುದ್ಧಿವಂತರಿರಲೀ ಅಥವಾ ಇಲ್ಲದಿರಲೀ ಪರಂಪರಾಗತವಾಗಿ ಅದೇ ವಂಶಸ್ಥರು

ಮುಖ್ಯಸ್ಥನ ಜವಾಬ್ದಾರಿಯನ್ನು ನಿರ್ವಹಿಸಬೇಕು. ಇನ್ನೂ ಈ ರೀತಿಯ ಅನೌಪಚಾರಿಕ ಪಂಚಾಯಿತಿ ರಚನೆಯಲ್ಲಿ ಗೌಡನ ನಂತರ ಪೂಜಾರಿಯದು ಪ್ರಮುಖ ಸ್ಥಾನ. ಇವನೂ ಸಹ ತೀರ್ಮಾನಗಳನ್ನು ಮಾಡುವಲ್ಲಿ ಮುಖ್ಯ ಪಾತ್ರವಹಿಸುತ್ತಾನೆ. ಪಂಚಾಯಿತಿ ರಚನೆಯ ಕೆಳಹಂತದಲ್ಲಿ 'ದಳವಾಯಿ' ಎಂಬ ಸ್ಥಾನವಿರುತ್ತದೆ. ಇವನನ್ನು ಮೆಸೆಂಜರ್ ಎಂದು ಇಂಗ್ಲಿಷ್‌ನಲ್ಲಿ ಕರೆಯುತ್ತಾರೆ. ಇವನ ಕೆಲಸವೇನೆಂದರೆ ಮುಖ್ಯಸ್ಥನು ಹೊರಡಿಸಿದ ತೀರ್ಮಾನಗಳನ್ನು ಡಂಗೂರ ಅಥವಾ ತಮಟೆ ಬಾರಿಸುತ್ತಾ ಮನೆ ಮನೆಗೆ ತಲುಪಿಸುವುದು. ಒಂದು ವೇಳೆ ಬುಡಕಟ್ಟಿನ ನೆಲೆಯು ಅಥವಾ ಹಟ್ಟಿಯು ಸಣ್ಣ ಪ್ರಮಾಣದಲ್ಲಿದ್ದರೆ ಬಾಯಿ ಮಾತಿನಿಂದಲೇ ವಿಷಯವನ್ನು ಪ್ರತಿಯೊಂದು ಮನೆಗೂ ಮುಟ್ಟಿಸುತ್ತಾನೆ.

ಎ ಎ ಡಿ ಲೂಯಿಸ್‌ರವರು ಕಾಡುಗೊಲ್ಲರ ನ್ಯಾಯ ವ್ಯವಸ್ಥೆಯ ಬಗ್ಗೆ ತಮ್ಮದೆ ಅದ ಅಭಿಪ್ರಾಯ ಹೇಳಿದ್ದಾರೆ. ಅವರ ಪ್ರಕಾರ The Kadu Gollas have the institutions of The Yajaman or Gauda ( headman) in every Hatti (settlement). He is respected and his decisions regarding disputes and social problems are binding. Often he acts as a Pujari (priest) and oracle. His first assistant is known as Kolkar and the other as Halemayars.Their Kattemane (Panchayat) consists of elders from varies clans and is empowered to levy fines and outcast members when necessory(Luiz, A A D: 1963:87).

ಹೆಚ್ ವಿ ನಂಜುಂಡಯ್ಯರವರು ಕಾಡುಗೊಲ್ಲರ ನ್ಯಾಯ ವ್ಯವಸ್ಥೆಯ ಬಗ್ಗೆ ಈ ರೀತಿ ಹೇಳಿದ್ದಾರೆ. In each *Hatti* or hamlet they have a Yajaman who wields extensive powers. He settles all their secular disputes and they rarely resort to courts. He is the pujari and conducts worship in their temples on Tuesday and Thursdays; and the oracle of the deity are manifested through him... Their tribal councils are held in places known as *Kattemane.* Where questions affecting the whole tribe such as breaches of caste rules are enquired into and settled. Such councils consist of Yajamans of various *hattis* and the friends of the culprits (Nanjundaiah, H V: 1908: 10).

### ಪಂಚಾಯಿತಿ ಕಾರ್ಯಗಳು

ಬುಡಕಟ್ಟು ನ್ಯಾಯ ಪಂಚಾಯಿತಿ ಕಾರ್ಯಗಳು ನಾನಾ ರೀತಿಯದವುಗಳಾಗಿರುತ್ತವೆ. ಸಮುದಾಯದ ಸದಸ್ಯರು, ಹಟ್ಟಿಯ ಅಥವಾ ಸಮುದಾಯದ ಕಟ್ಟುಕಟ್ಟಳೆ ಸಂಪ್ರದಾಯ, ನೀತಿ–ನಿಯಮಗಳನ್ನು ಉಲ್ಲಂಘಿಸಿದರೆ ಪಂಚಾಯಿತಿ ಸೇರಿಸಿ ಅಂತಹವುಗಳನ್ನು ಬಗೆಹರಿಸುವುದು ಪಂಚಾಯಿತಿಯ ಕಾರ್ಯವಾಗಿರುತ್ತದೆ. ಪಂಚಾಯಿತಿಯ ಮುಖ್ಯ ಕಾರ್ಯವೆಂದರೆ ಬುಡಕಟ್ಟು ದೇವರಿಗೆ ಸಂಬಂಧಿಸಿದಂತೆ ಜಾತ್ರೆ, ಹಬ್ಬ, ಮುಂತಾದವು

ಗಳನ್ನು ಸಂಘಟಿಸಲು ಕಾರ್ಯಕ್ರಮಗಳನ್ನು ಹಾಕಿಕೊಂಡು ಪಂಚಾಯಿತಿಯ ಮೂಲಕ ತಿಳಿಸುವುದು. ಮದುವೆ, ಋತುಮತಿ ಮುಂತಾದ ಸಂದರ್ಭಗಳಲ್ಲಿ ಪಂಚಾಯಿತಿಯ ಕಾರ್ಯವು ಅಥವಾ ಪಾತ್ರವು ಮುಖ್ಯವಾಗಿರುತ್ತದೆ. ಮುಖ್ಯವಾಗಿ ನ್ಯಾಯಕ್ಕೆ ಸಂಬಂಧಿಸಿದಂತೆ ನಿರ್ಣಯಗಳನ್ನು ಕೈಗೊಳ್ಳುವುದು ಪಂಚಾಯಿತಿಯ ಕೆಲಸ ವಾಗಿರುತ್ತದೆ.

ಹಟ್ಟಿಯಲ್ಲಿ ಜಗಳವಾಡಿದರೆ, ಪರಸ್ಪರ ದೂಳನ್ನು ಹಾಕಿದರೆ, ದೇವರಿಗೆ ಮಡಿ–ಮೈಲಿಗೆಯ ವಿಚಾರದಲ್ಲಿ ಮೈಲಿಗೆಯಾದರೆ, ಪಕ್ಕದ ಹಟ್ಟಿಯ ಜನರ ಸಂಬಂಧ ಮತ್ತು ಅವರ ಸಹಕಾರದ ಬಗ್ಗೆ ಹಟ್ಟಿಯ ಪಂಚಾಯಿತಿಗಳು ತೀರ್ಮಾನಗಳನ್ನು ತೆಗೆದುಕೊಳ್ಳುತ್ತವೆ. ಮುಖ್ಯವಾಗಿ ಮದುವೆ, ಋತುಮತಿ, ಮರಣ, ವ್ಯಾಜ್ಯ, ಶಾಸ್ತ್ರ, ಮಡಿ ಮೈಲಿಗೆಯ ವಿಚಾರದಲ್ಲಿ ಪಂಚಾಯಿತಿಗಳು ಅತ್ಯಂತ ನಿರ್ಣಾಯಕ ಪಾತ್ರ ವಹಿಸುತ್ತವೆ. ಪಂಚಾಯಿತಿಯ ಮುಖ್ಯಸ್ಥನ ಅಂದರೆ ಹಟ್ಟಿಯ ಗೌಡನ ತೀರ್ಮಾನವೇ ಅಂತಿಮ. ಯಾರೂ ಸಹ ನಾಡಿನ ತೀರ್ಮಾನವನ್ನು ವಿರೋಧಿಸುವಂತಿಲ್ಲ. ಅದರಿಂದಾಗಿಯೇ ಬದಲಾದ ಇಂದಿನ ಪರಿಸ್ಥಿತಿಯಲ್ಲಿಯೂ, ಕಾಡುಗೊಲ್ಲರ ಬುಡಕಟ್ಟು ನ್ಯಾಯ ಪಂಚಾಯಿತಿ ವ್ಯವಸ್ಥೆಯು ಅತ್ಯಂತ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿ ಸುತ್ತಿದೆ. ಆದರೆ ಆಧುನೀಕರಣ, ನಗರೀಕರಣ, ಕೈಗಾರೀಕರಣ, ಜಾಗತೀಕರಣಗಳ ಪ್ರಭಾವದಿಂದಾಗಿ ಹಾಗೂ ಹೊಸ ಪಂಚಾಯತ್ ರಾಜ್ಯ ವ್ಯವಸ್ಥೆಯ ಉಗಮದಿಂದಾಗಿ ಬುಡಕಟ್ಟು ನ್ಯಾಯ ಪಂಚಾಯಿತಿಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಅಲ್ಲದೆ ಕಾರ್ಯಗಳಲ್ಲಿಯೂ ಗಮನಾರ್ಹ ಬದಲಾವಣೆಗಳು ಗೋಚರಿಸುತ್ತಿವೆ.

### ನ್ಯಾಯ ನಿರ್ಣಯಗಳು

ಬುಡಕಟ್ಟು ಸಂಪ್ರದಾಯದಂತೆ ಕಾಡುಗೊಲ್ಲರ ನ್ಯಾಯ ಪಂಚಾಯಿತಿಗಳು ನ್ಯಾಯ ನಿರ್ಣಯಗಳನ್ನು ತೆಗೆದುಕೊಳ್ಳುತ್ತವೆ. ನ್ಯಾಯ ನಿರ್ಣಯಗಳು ಹಟ್ಟಿಗಳ ವ್ಯವಹಾರ, ವಾಜ್ಯ, ಮದುವೆ, ಹಬ್ಬ, ಜಾತ್ರೆ ಮುಂತಾದ ವಿಷಯಗಳಿಗೆ ಸಂಬಂಧಿಸಿದವುಗಳಾಗಿ ರುತ್ತದೆ. ಕಾಡುಗೊಲ್ಲರ ನ್ಯಾಯ ನಿರ್ಣಯಗಳನ್ನು ಕುರಿತು ಡಾ ಕೃಷ್ಣಮೂರ್ತಿ ಹನೂರುರವರು (೧೯೯೮:೮೩೩) ಈ ರೀತಿ ಅಭಿಪ್ರಾಯಪಡುತ್ತಾರೆ. ಎಲ್ಲಾ ಬುಡಕಟ್ಟು ಗಳಂತೆ ಕಾಡುಗೊಲ್ಲರಲ್ಲಿಯೂ ಹಟ್ಟಿಯೊಳಗಿನ ಜಗಳ, ವ್ಯಾಜ್ಯಗಳಿಗೆ ಅವರಲ್ಲಿಯೇ ಕಟ್ಟೆ ಮನೆಯ ನ್ಯಾಯಗಳಿರುತ್ತವೆ. ಹೀಗಾಗಿ ಬುಡಕಟ್ಟುಗಳಲ್ಲಿ ಪರಸ್ಪರ ಒಂದಾಗಿಯೇ ಬದುಕುವುದರ ಬಗ್ಗೆ ಹೆಚ್ಚು ಅರಿವಿದೆಯೇ ಹೊರತು ಜಗಳ, ವೈಮನಸ್ಸು ತಂದುಕೊಂಡು ಜೀವನ ಸಾಗಿಸುವ ಕ್ರಮ ಇಲ್ಲವೆಂತಲೇ ಹೇಳಬೇಕಾಗಿದೆ. ಹಟ್ಟಿಯ ಹಿರಿಯನಿಗೆ ಕಿರಿಯರು ಎಲ್ಲಿಲ್ಲದ ಗೌರವ ಸಲ್ಲಿಸುತ್ತಾರೆ. ಗೌಡನು ಹೇಳಿದ ಮಾತೆ ಕೊನೆಯದು. ಆತನ ಸಲಹೆಯನ್ನು ಎಲ್ಲರು ಪರಿಪಾಲಿಸುತ್ತಾರೆ.

ಹಟ್ಟಿಯಲ್ಲಿ ಜಗಳವಾಡಿಕೊಂಡು ಒಬ್ಬರಿಗೊಬ್ಬರು ದೂಳನ್ನು ಹಾಕಿಕೊಂಡರೆ ಧೂಳು ತೆಗೆಸುವಂತೆ ಪಂಚಾಯಿತಿಯ ನಿರ್ಣಯ ಮಾಡುತ್ತದೆ. ಮೈನೆರೆದ ಅಥವಾ ಋತುಮತಿಯಾದ ಮಹಿಳೆಯ ನೆರಳು ದೇವಸ್ಥಾನದ ಮೇಲೆ ಬಿದ್ದರೆ ದೇವರಿಗೆ

ಮೈಲಿಗೆಯಾಗುತ್ತದೆ ಎಂಬ ನಂಬಿಕೆಯಿರುವುದರಿಂದ ಆ ಮೈಲಿಗೆಯನ್ನು ತೆಗೆಯಲು ನ್ಯಾಯ ನಿರ್ಣಯ ಕೈಗೊಳ್ಳಲಾಗುತ್ತದೆ. ಗಂಡ-ಹೆಂಡತಿಯ ಜಗಳಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ನಿರ್ಣಯ ಕೈಗೊಳ್ಳಲಾಗುತ್ತದೆ. ಯಾರಾದರೂ ಹಟ್ಟಿಯನ್ನು ಅತಿಕ್ರಮ ಪ್ರವೇಶಿಸಿದರೆ ಪಂಚಾಯಿತಿಯ ನಿರ್ಣಯ ಮಾಡುತ್ತದೆ. ಕಳ್ಳತನ ಮಾಡುವುದು, ಸುಳ್ಳ ಹೇಳುವುದು ಕಪ್ಪಗಳಾಗಿರುವುದರಿಂದ ಯಾರಾದರೂ ಆ ರೀತಿ ಮಾಡಿದರೆ ಅವರಿಗೆ ಶಿಕ್ಷೆಯನ್ನು ವಿಧಿಸುವ ನಿರ್ಣಯ ಮಾಡಲಾಗುತ್ತದೆ.

ಕಾಡುಗೊಲ್ಲರಲ್ಲಿ 'ಕಟ್ಟು' ಎಂಬ ಪದ್ಧತಿ ಜಾರಿಯಲ್ಲಿದ್ದು, ಬುಡಕಟ್ಟು ಸಂಸ್ಕೃತಿಯನ್ನು ಹೋಲುವಂತಿರುತ್ತದೆ. ಕಟ್ಟು ಎಂದರೆ ಒಂದು ಹಟ್ಟಿಯ ಜನ ಮತ್ತೊಂದು ಹಟ್ಟಿಗೆ ಪ್ರವೇಶಿಸದಿರುವುದು. ಅಂದರೆ ದೇವರ ವಿಚಾರದಲ್ಲಿಯೇ ಅಥವಾ ಹಟ್ಟಿಗೆ ಸಂಬಂಧಿಸಿದ ವಿಚಾರದಲ್ಲಿಯೇ ಎರಡು ಹಟ್ಟಿಯ ಜನರ ನಡುವೆ ಭಿನ್ನಾಭಿಪ್ರಾಯ ಬಂದು ಜಗಳಕ್ಕೆ ತಿರುಗಿ ವಯಸ್ಸಿಗೆ ಕಾರಣವಾದರೆ ಹಟ್ಟಿಯ ಗೌಡನು ಹಟ್ಟಿಯ ಎಲ್ಲಾ ಕುಟುಂಬದವರಿಗೆ ಕಟ್ಟು ಕೊಡುತ್ತಾನೆ. ಅಂದರೆ ಒಂದು ಹಟ್ಟಿಯ ಜನರು ಇನ್ನೊಂದು ಹಟ್ಟಿಯ ಜನರನ್ನು ಮಾತನಾಡಿಸುವಂತಿಲ್ಲ, ಆ ಹಟ್ಟಿ ಒಳಗೆ ಪ್ರವೇಶಿಸುವಂತಿಲ್ಲ. ಜನರು ಹೊಡೆದಾಡಬೇಕಾದರೆ ಹಟ್ಟಿಯ ಹೊರಗಿನಿಂದ ಹೊಡದಾಡಬೇಕಾಗುತ್ತದೆ. ಎರಡು ಹಟ್ಟಿಯಲ್ಲಿ ತುಂಬ ಹತ್ತಿರದ ರಕ್ತ ಸಂಬಂಧಿಕರಿರುತ್ತಾರೆ. ಆದರೂ ಏನೇ ಕಷ್ಟ ಬಂದರೂ ಒಬ್ಬರಿಗೊಬ್ಬರು ಮಾತನಾಡುವಂತಿಲ್ಲ. ಕಷ್ಟ ಸುಖ ಹಂಚಿಕೊಳ್ಳುವಂತಿಲ್ಲ. ಎರಡು ಹಟ್ಟಿಯ ಗೌಡರು ಎರಡು ಹಟ್ಟಿಯ ಜನರಿಗೆ ಕಟ್ಟಪ್ಪಣೆ ಮಾಡಿರುತ್ತಾರೆ. ಈ ಅಪ್ಪಣೆಯನ್ನು ಮುಂದುವರಿಸಿ ಶಿಕ್ಷೆ ಗ್ಯಾರೆಂಟಿ ಹಾಗೂ ದೊಡ್ಡಹಟ್ಟಿ ಗಂಜಲಗುಂಟೆ (ಮಧುಗಿರಿ ತಾ) ಇಂದಿಗೂ ಪ್ರಸ್ತುತ.

ಕಾಡುಗೊಲ್ಲರಲ್ಲಿ ವೈಯಕ್ತಿಕ ಜಗಳಕ್ಕಿಂತ, ಸಾಮೂಹಿಕ, ಅಂದರೆ ಕುಲಕ್ಕೋಸ್ಕರ, ತಮ್ಮ ಕುಳ್ಳುಬಳ್ಳಿಯ ಜನರಿಗೋಸ್ಕರ ಮನೆತನದ ಗೌರವಕ್ಕೋಸ್ಕರ ವ್ಯಾಜ್ಯ ಜಗಳವಾಡುವುದುಂಟು. ಒಂದು ಹಟ್ಟಿಯಲ್ಲಿ ಎರಡು ಅಥವಾ ಮೂರು ಕುಲಗಳಿಗೆ ಸೇರಿದ ಜನರಿದ್ದರೆ ಕುಲ ಶ್ರೇಷ್ಠತೆಯ ಬಗ್ಗೆ, ಕುಲದ ಒಗ್ಗಟ್ಟಿನ ಬಗ್ಗೆ ಜಗಳವಾಡುತ್ತಾರೆ. ಬುಡಕಟ್ಟು ಜನರಲ್ಲಿ ಮಾತ್ರ ಇಂತಹದ್ದನ್ನು ಕಾಣಬಹುದು. ಎರಡು ಕುಲ ಅಥವಾ ವಂಶಸ್ಥರ ಮಧ್ಯೆ ಜಗಳವಾದರೆ ಪಂಚಾಯಿತಿಯ ನ್ಯಾಯ ನಿರ್ಣಯ ಮಾಡುತ್ತದೆ. ಪಂಚಾಯತಿಯ ಅಥವಾ ಗೌಡನ ಮಾತಿಗೆ ಇದು ಒಪ್ಪಿಗೆಯಾಗದಿದ್ದರೆ, 'ಏಳಟ್ಟಿಯ ಗೌಡರ' ಪಂಚಾಯಿತಿಯನ್ನು ನಡೆಸಲಾಗುತ್ತದೆ. ಅಂದರೆ ಆ ಪ್ರದೇಶದಲ್ಲಿ ಏಳು ಗೊಲ್ಲರ ಹಟ್ಟಿಗಳ ಮುಖ್ಯಸ್ಥರು ಸೇರಿಕೊಂಡು ಪಂಚಾಯಿತಿ ಮಾಡುತ್ತಾರೆ. ಅಲ್ಲಿಯೂ ಸರಿಯಾಗಿ ನ್ಯಾಯ ನಿರ್ಣಯ ಎರಡು ಕಡೆಯವರಿಗೆ ಒಪ್ಪಿಗೆಯಾಗದಿದ್ದರೆ ಕಟ್ಟೆ ಮನೆಗೆ ವರ್ಗಾಯಿಸಲಾಗುತ್ತದೆ. ಕಟ್ಟೆಮನೆಗಳಲ್ಲಿ ನ್ಯಾಯ ನಿರ್ಣಯಗಳನ್ನು ಮಾಡಲಾಗುತ್ತದೆ. ಕಟ್ಟೆ ಮನೆಗಳೇ ನ್ಯಾಯ ನಿರ್ಣಯ ಮಾಡುವ ಅಂತಿಮ ಪಂಚಾಯಿತಿ ವ್ಯವಸ್ಥೆಯಾಗಿರುತ್ತವೆ. ಪ್ರತಿ ಹಟ್ಟಿಯ ಯಜಮಾನನ್ನು ತನ್ನ ಪುಟ್ಟ ಸಮಾಜದ ವ್ಯಾಜ್ಯಗಳನ್ನು ತೀರ್ಮಾನಿಸುತ್ತನಾದರೂ ಅವನ ಕೈಯಲ್ಲಿ ಬಗೆಹರಿಯಲಾಗದ ಸಮಸ್ಯೆಯನ್ನು ಮುಂದಿನ ಕಟ್ಟೆ ಮನೆಗೆ ಒಯ್ಯಬಹುದಾಗಿರುತ್ತದೆ. ಕಟ್ಟೆ ಮನೆಗಳು

ನಾಲ್ಕಾರು ಹಟ್ಟಿಗಳಿಗೆ ಒಂದರಂತೆ ಇರುತ್ತವೆ. ಗುಡಿಯ ಮುಂದೆ ಸೇರುವ ನ್ಯಾಯ ವ್ಯವಸ್ಥೆಗಳು ಅಲ್ಲಿಯ ದೇವರ ಹೆಸರಿನಲ್ಲಿ ಸೂರ್ಯ ಚಂದ್ರರ ಹೆಸರಿನಲ್ಲಿ ಕಟ್ಟೆ ಮನೆ ಪ್ರಮುಖರ ಸಮ್ಮುಖದಲ್ಲಿ ನಡೆಯುತ್ತದೆ. ಇಲ್ಲಿ ಪರಿಹಾರ ಕಾಣದ ವ್ಯಾಜ್ಯಗಳು ಆ ಪ್ರದೇಶದ ಮೂಲ ಕಟ್ಟೆ ಮನೆಗಳಿಗೆ ಹೋಗುತ್ತವೆ. ಅವು ಎರಡು ಅಥವಾ ಮೂರು ಹಟ್ಟಿಗಳಲ್ಲಿರುತ್ತವೆ. ಅವು ಕಾಡುಗೊಲ್ಲರ ಮುಖ್ಯ ದೇವತೆಗಳು ನೆಲೆಸಿದ ಸ್ಥಳಗಳೂ ಆಗಿರುತ್ತವೆ (ಅವರೇ:೧೯೯೮:೮೩-೮೪). ಹೀಗೆ ಕಾಡುಗೊಲ್ಲರ ನ್ಯಾಯ ಪಂಚಾಯಿತಿಯ ನಿರ್ಣಯಗಳಲ್ಲಿ ಕಟ್ಟೆ ಮನೆಗಳು ಮಹತ್ವದ ಪಾತ್ರವನ್ನು ನಿರ್ವಹಿಸುತ್ತವೆ. ಈ ರೀತಿಯ ನ್ಯಾಯ ನಿರ್ಣಯಗಳು ಸಮುದಾಯದ ಒಳಿತಿಗೆ, ಅಭಿವೃದ್ಧಿಗೆ ಪೂರಕವಾಗಿರುತ್ತದೆ. ಯಾವುದೇ ರೀತಿಯ ವೈಯಕ್ತಿಕವಾಗಿರುವುದಿಲ್ಲ ಬದಲಾಗಿ ಸಮುದಾಯದ ಒಳಿತಿಗೆ ಪೂರಕವಾಗಿರುತ್ತದೆ.

**ಶಿಕ್ಷೆಗಳ ವಿವರ**

ಕಾಡುಗೊಲ್ಲರಲ್ಲಿ ಬುಡಕಟ್ಟು ನ್ಯಾಯ ಪಂಚಾಯಿತಿಯು ಸಮುದಾಯದ ನಿಯಮಗಳನ್ನು ಉಲ್ಲಂಘಿಸಿದವರಿಗೆ ಹಲವಾರು ರೀತಿಯ ಶಿಕ್ಷೆಯನ್ನು ವಿಧಿಸುವ ಶಿಕ್ಷೆಯು ಹಲವಾರು ನಮೂನೆಯಲ್ಲಿರುತ್ತವೆ ಮತ್ತು ಆಯಾ ಅಪರಾಧವನ್ನು ಅವಲಂಬಿಸಿವೆ. ಯುವಕ ಯುವತಿ ಪ್ರೀತಿಸಿ ಮದುವೆಯಾಗುತ್ತಿದ್ದೇವೆ ಎಂದು ಹೇಳಿದರೆ ಸಮುದಾಯದವರೂ ಮತ್ತು ತಂದೆ-ತಾಯಂದಿರು ಒಪ್ಪಿಗೆ ಕೊಡುವುದಿಲ್ಲ. ಆ ಕಾರಣದಿಂದ ಹಿಂದೆ ಕಾಡುಗೊಲ್ಲರಲ್ಲಿ ಹೆಣ್ಣನ್ನು ಕದ್ದೊಯ್ದು ಮದುವೆಯಾಗುತ್ತಿದ್ದ ಪ್ರಸಂಗಗಳಿದ್ದವು. ಹೀಗೆ ಊರಿನ ಹಿರಿಯರಿಗೆ ಮತ್ತು ತಂದೆ-ತಾಯಂದಿರಿಗೆ ತಿಳಿಸದೆ ವಧುವನ್ನು ಕದ್ದೊಯ್ದು ಮದುವೆಯಾದರೆ ಮದುವೆಯಾದ ವಧು-ವರರನ್ನು ಊರಿಗೆ ಅಥವಾ ಹಟ್ಟಿಗೆ ಸೇರಿಸುತ್ತಿರಲಿಲ್ಲ. ಅವರಿಗೆ ಪಂಚಾಯತಿಯು ಸಾಮಾಜಿಕ ಬಹಿಷ್ಕಾರವನ್ನು ಹಾಕುತ್ತಿತ್ತು. ಜೀವನ ಪರ್ಯಂತ ಗಂಡ-ಹೆಂಡತಿಯರು ಹಟ್ಟಿಯನ್ನು ಪ್ರವೇಶಿಸುವಂತಿರಲಿಲ್ಲ ಹಾಗೂ ತಮ್ಮ ಸಂಬಂಧಿಕರೊಡನೆ ಮಾತನಾಡುವಂತಿರಲಿಲ್ಲ. ಕಾಲಕ್ರಮೇಣ ಬದಲಾದ ಸನ್ನಿವೇಶದಲ್ಲಿ ಈ ರೀತಿಯ ಶಿಕ್ಷೆಯ ಪ್ರಮಾಣ ಸ್ವಲ್ಪ ಕಡಿಮೆಯಾಯಿತು. ಈ ರೀತಿ ಕದ್ದೊಯ್ದು ಮದುವೆಯಾದರೆ ಸ್ವಲ್ಪ ದಿನಗಳ ನಂತರ ಹಟ್ಟಿಯ ಗೌಡನ ಅಥವಾ ಪಂಚಾಯಿತಿಯ ಮುಖ್ಯಸ್ಥರ ಅಪ್ಪಣೆ ಮೇರೆಗೆ ಅಂದರೆ ಕೆಲವೊಂದು ರಿಚುವಲ್ ಹಾಗೂ ದಂಡವನ್ನು ಕೊಟ್ಟ ನಂತರ ಹಟ್ಟಿಗೆ ಅಂತಹವರು ಪ್ರವೇಶಿಸಬಹುದಿತ್ತು. ದಂಡ ಯಾವ ರೀತಿ ಇರುತ್ತಿತ್ತು ಎಂದರೆ ಹೆಣ್ಣನ್ನು ಕದ್ದೊಯ್ದ ಯುವಕನು ಊರಿನ ಎಲ್ಲಾ ಜನರಿಗೆ ದಂಡದ ರೂಪದಲ್ಲಿ ಕುಲದ ಊಟ ಹಾಕಿಸಬೇಕು. ಬುಡಕಟ್ಟು ದೇವರಿಗೆ ಮೈಲಿಗೆಯನ್ನು ತೆಗೆಸಿ ಸಾಂಕೇತಿಕ ವಾಗಿಯಾದರೂ ಸ್ವಲ್ಪ ಹಣವನ್ನು ದಂಡದ ರೂಪದಲ್ಲಿ ಕೊಡಬೇಕಾಗಿತ್ತು. ಜೊತೆಗೆ ದೇವಸ್ಥಾನದಲ್ಲಿ ಎಲ್ಲಾ ಹಟ್ಟಿಯ ಜನರ ಮುಂದೆ 'ತಪ್ಪು' ಎಂದು ಒಪ್ಪಿಕೊಳ್ಳಬೇಕಾಗಿತ್ತು. ಕೆಲವೊಂದು ಬಾರಿ ದೇವರಿಗೆ ಮೈಲಿಗೆಯನ್ನು ತೆಗೆಯಲು ಬೇರೆ ಊರಿಗೆ ದೇವರನ್ನು ತೆಗೆದುಕೊಂಡು ಹೋಗಿ ಹೊಳೆ ನೀರಿನಲ್ಲಿ ಪೂಜೆ ಮಾಡಿ ಮೈಲಿಗೆಯನ್ನು ತೆಗೆಯುತ್ತಿದ್ದರು.

ಕೆಲವೊಮ್ಮೆ ಕಾಡುಗೊಲ್ಲರ ಯುವಕ ಅಥವಾ ಯುವತಿ ಬೇರೆ ಸಮುದಾಯದ ಪುರುಷ ಅಥವಾ ಮಹಿಳೆಯನ್ನು ಅಂತರ್ಜಾತಿ ವಿವಾಹವಾದರೆ ಬಹಳ ಕಠಿಣ ರೂಪದ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಅಂತಹ ಯುವಕ ಯುವತಿಯನ್ನು ಶಾಶ್ವತವಾಗಿ ಸಮುದಾಯದಿಂದ ಹೊರಹಾಕಿ ಸಾಮಾಜಿಕ ಬಹಿಷ್ಕಾರವನ್ನು ಹಾಕಲಾಗುತ್ತದೆ. ಜೀವನ ಪರ್ಯಂತ ಯುವಕ ಯುವತಿಯರು ಹಟ್ಟಿಯಿಂದ ದೂರವೇ ಇರಬೇಕಾಗು ತ್ತಿತ್ತು. ಆದರೆ ಇತ್ತೀಚೆಗೆ ಬದಲಾದ ಸನ್ನಿವೇಶದಲ್ಲಿ ಈ ರೀತಿಯ ಶಿಕ್ಷೆಯ ಪ್ರಮಾಣದಲ್ಲಿ ನಾವು ಸಡಿಲತೆಯನ್ನು ಕಾಣಬಹುದಾಗಿದೆ.

ಕಾಡುಗೊಲ್ಲ ಬುಡಕಟ್ಟಿನಲ್ಲಿ ತಪ್ಪಿಗೆ ವಿಧಿಸುವ ದಂಡ ಕೊಂಚ ಕಠಿಣವಾಗಿಯೇ ಇರುತ್ತದೆ ಎಂದು ಕೃಷ್ಣಮೂರ್ತಿ ಹನೂರು (೧೯೯೮:೮೩) ಅಭಿಪ್ರಾಯ ಪಡುತ್ತಾರೆ. ದಂಡ ಸಾಮಾನ್ಯವಾಗಿ ಹಣದ ರೂಪದಲ್ಲಿ ಇರುತ್ತದೆ. ಅಕ್ರಮ ಸಂಬಂಧಗಳಿಗೆ ಶಿಕ್ಷೆ ಕಠಿಣವೇ ಆಗಿರುತ್ತದೆ. ಬೇಡ ನಾಯಕರಲ್ಲಿ ಹೆಣ್ಣು ಗಂಡಿನ ಸಂಬಂಧಗಳಿಗೆ ಕೊಂಚ ಉದಾರವಾದ ನೀತಿಯೇ ಇದ್ದರೆ, ಕಾಡುಗೊಲ್ಲರಲ್ಲಿ ಮಾತ್ರ ಶಿಕ್ಷೆಯನ್ನು ಎದುರಿಸಲೇ ಬೇಕಾಗುತ್ತದೆ. ಕಾಡುಗೊಲ್ಲ ಹೆಂಗಸು ಅನ್ಯಮತೀಯ ಗಂಡಸರೊಡನೆ ಅಕ್ರಮಸಂಬಂಧ ಇಟ್ಟುಕೊಂಡರೆ ಆಕೆಯನ್ನು ಹಟ್ಟಿಯಿಂದ ಉಚ್ಚಾಟಿಸಲಾಗುತ್ತದೆ. ಆಕೆಯೊಡನೆ ಸಂಬಂಧ ಹೊಂದಿದವನು ಆಕೆಯನ್ನು ಕರೆದುಕೊಂಡು ಹೋದರೆ ಸರಿ, ಇಲ್ಲದಿದ್ದರೆ ಉಚ್ಚಾಟಿಸಿದ ಹೆಂಗಸು ಅನಾಥಳಾಗುತ್ತಾಳೆ. ಅಂತೆಯೇ ಕಾಡುಗೊಲ್ಲ ಗಂಡಸು ಅನ್ಯಮತೀಯ ಹೆಂಗಸಿನೊಡನೆ ಸಂಬಂಧ ಇಟ್ಟುಕೊಂಡರೂ ಇದೇ ಶಿಕ್ಷೆ ಇರುತ್ತದೆ. ಗೊಲ್ಲ ಗಂಡಸು ಅದೇ ಹಟ್ಟಿಯ ಹೆಂಗಸಿನೊಡನೆ ಸಂಬಂಧ ಹೊಂದಿದ್ದರೆ, ಹಟ್ಟಿಯ ದೇವರು ಜಲಧಿಗೆ ಹೋಗಿ ಬರುವ ಖರ್ಚು ಕೊಡಬೇಕು. ಈ ಸಂದರ್ಭದಲ್ಲಿ ಅವನು ಶುದ್ಧೀಕರಣಗೊಳ್ಳಬೇಕಾಗುತ್ತದೆ (ಅವರೇ:೧೯೯೮:೮೩೪). ತಪ್ಪು ಮಾಡಿದವನು ಮೊದಲ ಗುಡಿಸಲಲ್ಲಿ ಕೂರುತ್ತಾನೆ. ಆಗ ಯಜಮಾನ ಅದಕ್ಕೆ ಬೆಂಕಿ ಹಚ್ಚುವನು. ಗುಡಿಸಲ ನಡುವೆ ಕೂತವನು ಬೆಂಕಿಯ ಮಧ್ಯದಿಂದ ತಪ್ಪಿಸಿಕೊಂಡು ಹೊಗಬೇಕು. ಹೀಗೆಯೇ ಎರಡನೇಯ, ಮೂರನೆಯ ಗುಡಿಸಲಿಗೂ ಬೆಂಕಿ ಹಚ್ಚಲಾಗಿ ತಪ್ಪಿತಸ್ಥನು ತಪ್ಪಿಸಿಕೊಂಡು ಬಿಡಬೇಕು. ಹೀಗೆ ಶುದ್ಧೀಕರಣಗೊಂಡ ಅಪರಾಧಿ ಏಳು ಬಾವಿ ಅಥವಾ ಕೆರೆಗಳ ಸ್ನಾನ ಮಾಡಿ ಬರಬೇಕು. ತಪ್ಪಿತಸ್ಥನು ದಂಡ ಕಟ್ಟಿದ ಹಣದಲ್ಲಿ ಅಲ್ಲಿ ನೆರೆದವರಿಗೆ ಊಟ ಹಾಕಿಸುತ್ತಾರೆ. ತದನಂತರ ಅಪರಾಧಿ ನೆಲವನ್ನು ತೋಡಿದ ಗುಂಡಿಯೊಳಗಿನ ಅಂಬಲಿಯನ್ನು ನೆಕ್ಕುವಾಗ ಯಜಮಾನನೊಬ್ಬನು ಆತನನ್ನು ನಾಯಿ ಕರೆದಂತೆ ಕರೆಯುವವನು. ತಪ್ಪಿತಸ್ಥನು ಎದ್ದು ಬಂದರೆ ಯಜಮಾನ ತನ್ನ ಕೈಯಲ್ಲಿ ಹಿಡಿದ ಬರಲಿನಿಂದ ಹೊಡೆಯುವುದಿದೆ (ಅವರೇ:೧೯೮೮: ೮೩೪). ಕಾಡುಗೊಲ್ಲರಲ್ಲಿ ಶಿಕ್ಷೆಯನ್ನು ಕುರಿತು ಹೆಚ್ ವಿ ನಂಜುಂಡಯ್ಯನವರು ಈ ರೀತಿ ಹೇಳುತ್ತಾರೆ. If a peroson eats forbidden food, he will be required to pay fine of 24 *hanas* and will have to purifiy himself by shaving his face clean and having his tongue slightly branded . If a women

does this act, she will be put out of caste. For a general assault a fine of thirteen annas is imposed (Nanjundaiah, H V: 1908:10).

ಇಷ್ಟೆಲ್ಲ ಕಠಿಣ ಕ್ರಮಗಳ ನಂತರ ಪೂಜಾರಿಯು ಸುಡುವ ಬೇವಿನ ಕಡ್ಡಿಯಿಂದ ಅಪರಾಧಿಯ ನಾಲಿಗೆಯನ್ನು ಸುಡುತ್ತಾನೆ. ಆ ಮೇಲೆ ಹಸುವಿನ ಗಂಜಲನ್ನು ತೀರ್ಥದಂತೆ ತೆಗೆದುಕೊಳ್ಳಬೇಕು. ಇಷ್ಟು ಶುದ್ಧೀಕರಣದ ನಂತರ ತಪ್ಪಿತಸ್ಥನು ಹಟ್ಟಿ ಸೇರಬಹುದು. ಹೆಂಗಸರೂ ಕೂಡ ತನ್ನ ಹಟ್ಟಿಯಲ್ಲಿಯೇ ಪರಪುರುಷನೊಡನೆ ಸಂಬಂಧವಿರಿಸಿಕೊಂಡರೆ ಮೇಲಿನಂತೆಯೇ ಶಿಕ್ಷೆಯನ್ನು ನೆರವೇರಿಸಲಾಗುವುದು. ದೇವರ ಪೂಜಾರಿ ಹೆಂಗಸಿನ ಮೂಗು ಮತ್ತು ಹಣೆಯ ಮೇಲೆ ಒಂದೊಂದು ಬಿಳಿಯ ಬೊಟ್ಟನ್ನು ಇಟ್ಟು ಅವಳಿಗೆ ತೀರ್ಥ ಮತ್ತು ಗೋವಿನ ಗಂಜಲನ್ನು ಸೇವಿಸಲು ಕೊಡುತ್ತಾನೆ. ಈ ಶಿಕ್ಷೆಯ ಕ್ರಮಗಳನ್ನೆಲ್ಲಾ ರೂಪಿಸಿದವನು ತಮ್ಮ ಕುಲದೇವತೆಯೆಂದೇ ಕಾಡುಗೊಲ್ಲರು ಹೇಳುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕಾಡುಗೊಲ್ಲರಲ್ಲಿ ಕಟ್ಟೆ ಮನೆಯ ನ್ಯಾಯ ಪದ್ಧತಿಗಳು ಸಡಿಲವಾಗಿ, ಕಡಿಮೆಯಾಗಿ, ಅವರವರ ಬದುಕಿನ ಕ್ರಮಗಳಲ್ಲಿ ಸಂಪ್ರದಾಯಗಳಲ್ಲಿ ನಂಬಿಕೆ ಕಡಿಮೆಯಾಗುತ್ತಲಿದೆ. ಆಧುನಿಕ ವಿದ್ಯಮಾನ ಮತ್ತು ವಿದ್ಯಾಭ್ಯಾಸಗಳಿಂದಾಗಿ ಅವರ ಅನೇಕ ಹಟ್ಟಿಗಳಲ್ಲಿ ಬುಡಕಟ್ಟು ಪದ್ಧತಿಗಳು ಅರ್ಥ ಕಳೆದುಕೊಳ್ಳುತ್ತಿವೆ. ಯಾವುದೇ ವ್ಯಾಜ್ಯ, ವೈಮನಸ್ಸು, ಜಗಳ ಇವು ಕಟ್ಟೆ ಮನೆಯ ಮೆಟ್ಟಿಲು ಹತ್ತದೆ ಕೋರ್ಟು ಕಛೇರಿಗಳಿಗೆ ನಡೆದಿರುವುದೂ ಉಂಟು. ದೇವರ ಪೂಜಾರಿಕೆಯಲ್ಲೇ ಪೂಜಾರಿಗಳಿಗೆ ಜಗಳ ಹತ್ತಿ ಅವು ಕೋರ್ಟಿಗೆ ಹೋಗಿ ಇತ್ಯರ್ಥವಾಗುವುದುಂಟು. ಮತ್ತು ಯಾವುದೇ ಸೂತಕ ಮೈಲಿಗೆ ಸಂದರ್ಭಗಳಲ್ಲಿ ಹೆಂಗಸರು ಹಟ್ಟಿಯ ಹೊರಗೆ ಹೋಗುವುದನ್ನು ನಿಲ್ಲಿಸಲಾಗುತ್ತಿದೆ. ಇದು ಆರೋಗ್ಯದ ದೃಷ್ಟಿಯಿಂದ ಪಾಲಿಸಲೇಬೇಕಾದ ಕ್ರಮವೇ ಸರಿ (ಅವರೇ:೧೯೯೮:೮೩೪-೮೩೫). ಹೀಗೆ ಬದಲಾದ ಪರಿಸ್ಥಿತಿಯಲ್ಲಿ ಕಾಲಕ್ರಮೇಣ ಕಾಡುಗೊಲ್ಲರ ಬುಡಕಟ್ಟು ನ್ಯಾಯ ಪಂಚಾಯಿತಿಗಳು ತಮ್ಮ ಮಹತ್ವದ ಪಾತ್ರವನ್ನು ಕಳೆದುಕೊಳ್ಳುತ್ತಿವೆ. ಇವುಗಳ ಜಾಗದಲ್ಲಿ ಆಧುನಿಕ ಪಂಚಾಯಿತಿ ವ್ಯವಸ್ಥೆಯು ಜಾರಿಗೆ ಬಂದಿದ್ದು, ಜನರು ಹೊಸ ವ್ಯವಸ್ಥೆಗೆ ಒಗ್ಗಿಕೊಳ್ಳುತ್ತಾ ಬುಡಕಟ್ಟು ಪಂಚಾಯಿತಿಯನ್ನು ಮರೆಯುತ್ತಿದ್ದಾರೆ.

### ಮೂಲ ನ್ಯಾಯ ಸ್ಥಾನದೊಡನೆ ಸಂಬಂಧ

ಕಾಡುಗೊಲ್ಲರಿಗೆ ಮೂಲ ನ್ಯಾಯಸ್ಥಾನಗಳು, ಕಟ್ಟೆ ಮನೆಗಳಾಗಿರುತ್ತವೆ. ಕಟ್ಟೆ ಮನೆಗಳು ನ್ಯಾಯ ನಿರ್ಣಯ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇವೇ ಅಂತಿಮ ಹಂತದ ನ್ಯಾಯದ ಮನೆಗಳಾಗಿದ್ದು, ಎಲ್ಲರೂ ಕಟ್ಟೆ ಮನೆಯ ನ್ಯಾಯ ನಿರ್ಣಯವನ್ನು ಒಪ್ಪಲೇ ಬೇಕಾಗುತ್ತದೆ. ಕಾಡುಗೊಲ್ಲರಲ್ಲಿ ಮುಖ್ಯವಾಗಿ ಮೂರು ಕಟ್ಟೆ ಮನೆಗಳಿವೆ. ಅವುಗಳೆಂದರೆ ಕರೇಓಬನಹಳ್ಳಿ, ತಾಳಿವಟ್ಟಿ ಮತ್ತು ರಾಮನಹಳ್ಳಿ. ಕರೇ ಓಬನಹಳ್ಳಿ ಮತ್ತು ತಾಳಿವಟ್ಟಿ ಕಟ್ಟೇ ಮನೆಗಳು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿದ್ದರೆ, ರಾಮನಳ್ಳಿ ಕಟ್ಟೆ ಮನೆಯು ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಕರೇಓಬನಹಳ್ಳಿ ಕಟ್ಟೇಮನೆಯು ಇಂದಿಗೂ ಅಸ್ತಿತ್ವದಲ್ಲಿದ್ದರೆ, ತಾಳಿವಟ್ಟಿ ಮತ್ತು ರಾಮನಳ್ಳಿ

ಕಟ್ಟೆಮನೆಗಳು ನಾಶಹೊಂದಿವೆ ಎಂಬುದಾಗಿ ನಂಬಲಾಗಿದೆ. ಆದರೂ ಜನರ ಮನಸ್ಸಿನಲ್ಲಿ ಇವತ್ತಿಗೂ ಈ ಮೂರು ಕಟ್ಟೆ ಮನೆಗಳು ಅಚ್ಚಳಿಯದೆ ಉಳಿದಿವೆ. ತಾಳಿವಟ್ಟಿ ಕಟ್ಟೆ ಮನೆಯು ಯರಬಳ್ಳಿಗೂ ರಾಮನಳ್ಳಿ ಕಟ್ಟೆಮನೆಯು ಮರಡಿಹಳ್ಳಿಗೂ ವರ್ಗಾವಣೆಗೊಂಡಿವೆ ಎಂದು ಹೇಳಲಾಗುತ್ತಿದೆ. ಕರೆಓಬನಹಳ್ಳಿ ಕಟ್ಟೆ ಮನೆಯು ಚಿತ್ತಮುತ್ತಿಯ ಕುಲದವರಿಗೂ ರಾಮನಳ್ಳಿ ಕಟ್ಟೆ ಮನೆಯು ರಾಮೇಗೌಡನಾ ಕುಲದವರಿಗೂ ಮುಖ್ಯ ಕಟ್ಟೆ ಮನೆಗಳಾಗಿವೆ.

ಈ ಮೂರು ಕಟ್ಟೆ ಮನೆಗಳಿಗೂ ಹಲವು ಗುಡಿಕಟ್ಟುಗಳಿದ್ದು, ಕಟ್ಟೆ ಮನೆಯಲ್ಲಿ ಮಾತ್ರ ನ್ಯಾಯ ತೀರ್ಮಾನ ನಡೆಯುತ್ತಿರುತ್ತದೆ. ಉಳಿದಂತೆ ಸಣ್ಣ ಪುಟ್ಟ ವ್ಯಾಜ್ಯಗಳನ್ನು ಹಟ್ಟಿಗಳ ಮಟ್ಟದಲ್ಲಿ ಬಗೆಹರಿಸಲಾಗುತ್ತಿದೆ. ವ್ಯಾಜ್ಯ ಅಲ್ಲಿಯೂ ಬಗೆಹರಿಯದಿದ್ದರೆ, ಗುಡಿಕಟ್ಟಿಗೆ ವರ್ಗಾಯಿಸಲಾಗುತ್ತದೆ.

ನ್ಯಾಯ ತೀರ್ಮಾನವನ್ನು ಮಾಡುವುದು ಮಾತ್ರ ಕಟ್ಟೆಮನೆಯ ಕೆಲಸ. ಅದನ್ನು ಜಾರಿಗೆ ತರುವುದು ಗುಡಿಕಟ್ಟಿನ ಕಟ್ಟೆ ಮನೆಗೇ ಹೋಗಬೇಕೆಂದೇನೂ ಇಲ್ಲ. ಆಯಾ ಗುಡಿಕಟ್ಟಿನ ಗೌಡರು ಮತ್ತು ಯಜಮಾನರು ಮೂರು ಕಟ್ಟೆಮನೆಗಳಿಂದಲೂ ಒಬ್ಬೊಬ್ಬ ಪ್ರತಿನಿಧಿಯನ್ನು ಕರೆಸಿಕೊಂಡು ಅಲ್ಲಿಯೇ ತೀರ್ಮಾನ ಮಾಡಿ ದಂಡ ವಿಧಿಸಬಹುದು (ಶಂಕರನಾರಾಯಣ,ತೀ ನಂ:೧೯೮೭:೨೮). ಸಮಾಜದಲ್ಲಿ ಬದಲಾವಣೆಗಳು ಗೋಚರಿಸಿದಂತೆಲ್ಲಾ ನ್ಯಾಯ ತೀರ್ಮಾನದಲ್ಲಿ ಕಟ್ಟೆ ಮನೆಗಳ ಪಾತ್ರ ಕಡಿಮೆಯಾಗುತ್ತಿದೆ. ಮೊದಲಿನಷ್ಟು ಕಟ್ಟೆ ಮನೆಗಳಿಗಿದ್ದ ಪ್ರಾಮುಖ್ಯತೆ ಇಂದು ಕಂಡು ಬರುತ್ತಿಲ್ಲ. ಆಧುನಿಕ ನ್ಯಾಯ ವ್ಯವಸ್ಥೆಯನ್ನು ಸ್ವೀಕರಿಸಿ ಅದಕ್ಕೆ ನಿಧಾನವಾಗಿ ಒಗ್ಗಿಕೊಳ್ಳುತ್ತಿದ್ದಾರೆ.

ಕಟ್ಟೆಮನೆಯ ನ್ಯಾಯ ತೀರ್ಮಾನಕ್ಕೆ ಮೊದಲು ಕೊಡುತ್ತಿದ್ದ ಗೌರವವನ್ನು ಇಂದು ಕಾಡುಗೊಲ್ಲರು ಕೊಡುತ್ತಿಲ್ಲ. ಕೋರ್ಟುಗಳಿಗೆ ಹೋಗುವುದೇ ಹೆಚ್ಚಾಗಿದೆ. ಇಷ್ಟಾದರೂ ಇಂದಿಗೂ ಕಟ್ಟೆ ಮನೆಗಳಲ್ಲಿಯೇ ತಮ್ಮ ಜಗಳಗಳಿಗೆ ನ್ಯಾಯ ದೊರಕಿಸಿ ಕೊಳ್ಳುವವರೂ ಸಾಕಷ್ಟು ಜನರು ಇದ್ದಾರೆ. ನ್ಯಾಯ ತೀರ್ಮಾನ ಕಾಡುಗೊಲ್ಲರಲ್ಲಿ ಬಹುಮುಖ್ಯವಾದ ಅಂಶ. ಅವರಲ್ಲಿ ಹತ್ತಿದ ಜಗಳ ಅಷ್ಟು ಸರಳವಾಗಿ ಬಗೆಹರಿಯುವು ದಿಲ್ಲ. ಕರಿಕಂಬಳಿ ಹಾಸಿ ನ್ಯಾಯಕ್ಕೆ ಕೂತರು ಅಂದರೆ ಹೊತ್ತು ಹೋದದ್ದು ಅವರ ಪರಿವೇ ಬರುವುದಿಲ್ಲ. "ಗೊಲ್ಲರ ನ್ಯಾಯ ಊರಿಗೆ ತಿಳಿಯೊಲ್ಲ ಗೊಲ್ಲರಿಗೆ ಹರಿಯಲ್ಲ. ಗೊಲ್ಲರಿಗೆ ಇಕ್ಕಿದ್ದೇ ಒಂದು ದೇವರು, ಮಾಡಿದ್ದೇ ಒಂದು ಕಥೆ ಹೇಳಿದ್ದೇ ಒಂದು ನ್ಯಾಯ" ಎಂಬ ಗಾದೆಗಳೂ ಹುಟ್ಟಿಕೊಂಡಿವೆ (ಅವರೇ:೧೯೮೭:೨೯). ಹೀಗೆ ಕಾಡುಗೊಲ್ಲರ ನ್ಯಾಯ ವ್ಯವಸ್ಥೆಯಲ್ಲಿ ಕಟ್ಟೇಮನೆಗಳು ತುಂಬಾ ಪ್ರಾಮುಖ್ಯತೆ ಪಡೆದಿವೆ. ಇಷ್ಟೆಲ್ಲಾ ಬದಲಾವಣೆಗಳಾದರೂ ಇಂದಿಗೂ ಹಿರಿಯರು ಕಟ್ಟೆ ಮನೆಗಳ ಮತ್ತು ಅವುಗಳಲ್ಲಿ ನಡೆಯುತ್ತಿದ್ದ ನ್ಯಾಯ ನಿರ್ಣಯಗಳ ಬಗ್ಗೆ ತಿಳುವಳಿಕೆ ಯುಳ್ಳವರಾಗಿದ್ದಾರೆ. ಹೀಗೆ ಕಾಡುಗೊಲ್ಲ ಸಮುದಾಯದ, ನ್ಯಾಯವ್ಯವಸ್ಥೆ, ನ್ಯಾಯನಿರ್ಣಯ, ಶಿಕ್ಷೆ, ಮುಂತಾದ ವಿಷಯಗಳು ಇಂದಿಗೂ ಮೂಲಸ್ಥಾನವಾದ ಕಟ್ಟೆಮನೆಗಳೊಂದಿಗೆ ಸಂಬಂಧ ಹೊಂದಿರುವುದನ್ನು ನೋಡಬಹುದಾಗಿದೆ.

# ೭

# ಆರ್ಥಿಕ ಜೀವನ

## ಮೂಲ ಕಸುಬು

**ಪಶುಪಾಲನೆ:** ಹೆಸರೇ ಸೂಚಿಸುವಂತೆ ಗೊಲ್ಲ ಸಮುದಾಯದ ಸಾಂಪ್ರದಾಯಿಕ ಕಸುಬು ಪಶುಪಾಲನೆ. ಕಾಡು–ಮೇಡುಗಳು ಹೆಚ್ಚಾಗಿದ್ದ ಕಾಲದಲ್ಲಿ ಹೆಚ್ಚಿಗೆ ದನ–ಕರುಗಳನ್ನ ಸಾಕಿ ಅವುಗಳ ಹಾಲು, ಮೊಸರು, ತುಪ್ಪವನ್ನ ಮಾರಿ ಜೀವನ ಸಾಗಿಸುತ್ತಿದ್ದರು. ಕಾಡುಗಳು ಕ್ರಮೇಣ ನಾಶವಾದಂತೆ ದನಕರುಗಳ ಸಂಖ್ಯೆಯೂ ಕಡಿಮೆಯಾದವು. ಆದಾಗ್ಯೂ, ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಗೊಲ್ಲ ಸಮುದಾಯದ ಪ್ರತಿಯೊಬ್ಬ ಕುಟುಂಬಸ್ಥನೂ ಕುಲಕಸುಬಾಗಿ ಸಾಂಕೇತಿಕವಾಗಿಯಾದರೂ ಒಂದೆರಡು ಎತ್ತುಗಳು ಮತ್ತು ಹಸುಗಳನ್ನ ಸಾಕುವುದನ್ನ ಕಾಣಬಹುದು. ಇವುಗಳಿಂದ ಆದಾಯ ಮತ್ತು ಸೇವೆಯನ್ನ ನಿರೀಕ್ಷಿಸದಿದ್ದರೂ ತಮ್ಮ ಕುಲದ ಸಂಕೇತವಾಗಿ ಮತ್ತು ಬುಡಕಟ್ಟಿನ ಸಂಪ್ರದಾಯವನ್ನ ಮುಂದುವರಿಸಿಕೊಂಡು ಹೋಗಲು ಅವರಿಗರಿವಿಲ್ಲದಂತೆಯೇ ಹಸು ಮತ್ತು ಎತ್ತುಗಳನ್ನ ಪಾಲನೆ–ಪೋಷಣೆ ಮಾಡಿಕೊಂಡು ಬರುತ್ತಿದ್ದಾರೆ. ಸಾಮಾನ್ಯವಾಗಿ ಇವರಿಗೆ ದನಕರುಗಳ ಬಗ್ಗೆ ಎಷ್ಟು ಕಾಳಜಿ ಮತ್ತು ಪ್ರೀತಿ ಇರುತ್ತದೆ. ಎಂದರೆ ಇವರಿಗೆ ತಿನ್ನಲು ಊಟವಿಲ್ಲದಿದ್ದರೂ, ದನಕರುಗಳಿಗೆ ಹೊಟ್ಟೆ ತುಂಬಾ ಮೇವನ್ನ ಕೊಟ್ಟು ತಾವು ಉಪವಾಸ ಮಲಗುತ್ತಾರೆ. ಇಂತಹ ಸಂದರ್ಭವನ್ನ ಬರಗಾಲದ ಸಮಯದಲ್ಲಿ ನೋಡಬಹುದು. ಕ್ಷಾಮ ತಲೆದೋರಿದಾಗ ಹಟ್ಟಿಯ ಜನರು ಮನೆಗೊಬ್ಬರಂತೆ ತಂತಮ್ಮ ರಾಸುಗಳೊಂದಿಗೆ ಬೇರೆ ಹುಲ್ಲುಗಾವಲುಗಳಿರುವ ಪ್ರದೇಶಗಳಿಗೆ ವಲಸೆ ಹೋಗಿ ತಮ್ಮ ದನಕರುಗಳನ್ನ ಸಲಹಿಕೊಂಡು ಬರುತ್ತಾರೆ. ಪಶುಸಂಪತ್ತನ್ನೇ ನಂಬಿ ಬದುಕುವ ಈ ಸಮುದಾಯ ತನ್ನ ಆರಾಧ್ಯ ಧೈವವಾಗಿ ಎತ್ತು, ದನಗಳನ್ನು ಪೂಜಿಸುತ್ತವೆ. ಇಲ್ಲವೆ ದನಗಾಹಿಗಳನ್ನೇ ತಮ್ಮ ವೀರನಾಯಕರೆಂದು ಭಾವಿಸಿ ಪೂಜಿಸುವುದನ್ನು ಕಾಣಬಹುದಾಗಿದೆ. ಇವರು ಎತ್ತಪ್ಪ, ಜುಂಜಪ್ಪರನ್ನು ಆರಾಧ್ಯ ದೈವವಾಗಿಸಿಕೊಂಡಿರುವುದನ್ನು ಅವರ ಕಾವ್ಯಗಳ ಮೂಲಕ ಗಮನಿಸಬಹುದು.

ಇಂದು ದನಗಳಿಗಿಂತ ಹೆಚ್ಚಾಗಿ ಕುರಿ ಮೇಕೆಗಳನ್ನು ಕಾಡುಗೊಲ್ಲರು ಸಾಕುವುದನ್ನು ಕಾಣಬಹುದು. ಪ್ರಾಯಶಃ ದನಗಳಿಗಿಂತ ಆರ್ಥಿಕವಾಗಿ ಹೆಚ್ಚು ಲಾಭ ತರುವಂತಹದ್ದು ಎನ್ನುವ ಕಾರಣಕ್ಕಾಗಿ ಕುರಿ ಸಾಕಣಿಕೆಯಲ್ಲಿ ಕಾಡುಗೊಲ್ಲರು ತೊಡಗಿರಬಹುದು.

ಪ್ರಸ್ತುತ ಅಧ್ಯಯನದ ಪ್ರಕಾರ ೪೦೦ ಕುಟುಂಬಗಳಲ್ಲಿ ಇರುವ ಪಶುಸಂಪತ್ತು ಈ ಕೆಳಗಿನಂತಿದೆ.

ಕೋಷ್ಟಕ: ೭.೧ ಪಶು ಸಂಪತ್ತು

| ಕ್ರಸಂ. | ಹೆಸರು | ಸಂಖ್ಯೆ |
|---|---|---|
| ೧ | ಎತ್ತು, ಹೋರಿ | ೨೪೨ |
| ೨ | ಆಕಳು, ಕರು | ೨೩೦ |
| ೩ | ಎಮ್ಮೆ, ಕೋಣ | ೧೬೦ |
| ೪ | ಕುರಿ | ೧೧೮೬೮ |
| ೫ | ಮೇಕೆ | ೧೭೮೪ |
| ೬ | ಕೋಳಿ | ೪೭ |
| | ಒಟ್ಟು | ೧೪೩೩೫ |

ಈಗಾಗಲೇ ಹೇಳಿದ ಹಾಗೆ ಕುರಿ ಸಾಕಣಿಕೆಯು ಕಾಡುಗೊಲ್ಲ ಸಾಂಪ್ರದಾಯಿಕ ಕುಲ ಕಸುಬಾಗಿದೆ. ಕುರಿಸಾಕಣಿಕೆ ಕಷ್ಟದಾಯಕ ಕಸುಬಾಗಿದ್ದರೂ ಕಾಡುಗೊಲ್ಲರಿಗೆ ಇದು ಒಂದು ಆದಾಯ ತಂದು ಕೊಡುವ ಕಸುಬಾಗಿದೆ. ಆದರೆ ಕುರಿಸಾಕಣಿಕೆಯು ಅಷ್ಟು ಸುಲಭದ ಕೆಲಸವಲ್ಲ. ಕಾಡುಗೊಲ್ಲರು ಬಹಳ ಕಷ್ಟ ಜೀವಿಗಳಾಗಿದ್ದುರಿಂದಲೇ ಈ ಉದ್ಯೋಗವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಕುರಿಸಾಕಣಿಕೆಯು ಪಶುಪಾಲನಾ ವೃತ್ತಿಯನ್ನು ಪ್ರತಿನಿಧಿಸುತ್ತದೆ.

## ದೈವದ ಪಶುಗಳು

ಕಾಡುಗೊಲ್ಲ ಸಮುದಾಯದವರು ಇಂದೂ ದೈವಭಕ್ತರು. ಅವರ ಕುಲ ಕಸುಬಾದ ಕುರಿಮೇಕೆ ಸಾಕಾಣಿಕೆಗೆ ಯಾವ ರೋಗರುಜಿನ ತಗಲಬಾರದೆಂದು, ಕುರಿ ಮತ್ತು ಮೇಕೆಗಳಿಗೆಲ್ಲ, ಪ್ರತಿವರ್ಷ ಪ್ರಾರಂಭದಲ್ಲಿ ಮೊದಲು ಹುಟ್ಟುವ ಗಂಡು ಮರಿಯನ್ನು ಗೌರಸಮುದ್ರ ಮಾರಕ್ಕನ ಹೆಸರಲ್ಲೋ, ಕರಿಯಮ್ಮನ ಹೆಸರಿನಲ್ಲೊ, ಗೊಲ್ಲ ಹಳ್ಳಮ್ಮನ ಹೆಸರಿನಲ್ಲೊ, ಭೂತಪ್ಪನ ಹೆಸರಿನಲ್ಲಿ ಬಿಟ್ಟು ಒಂದು ವರ್ಷ ಅಥವಾ ಎರಡು ವರ್ಷ ಕಳೆದ ನಂತರ ಸದರಿ ದೇವರುಗಳ ಜಾತ್ರೆಗಳಲ್ಲಿ ಅದರ ಅವಶ್ಯ ಕಂಡಲ್ಲಿ ಪೂಜೆ ಮಾಡಿಸಿ ಆ ಮರಿಗಳನ್ನು ಬಲಿ ಕೊಡುತ್ತಾರೆ. ಈ ಸಮುದಾಯದವರು ಮಂಸಹಾರಿಗಳು ಆದ್ದರಿಂದ ದೇವರ ಹೆಸರಿನಲ್ಲಿ ಬಿಟ್ಟ ಮರಿಗಳಿಂದ ಸದರಿ ದೇವರುಗಳ ಅನುಗ್ರಹದಿಂದ ಕುರಿಮೇಕೆಗೆ ರೋಗ ರುಜಿನ ಬರುವುದಿಲ್ಲ ಎಂಬ ನಂಬಿಕೆ. ಎಮ್ಮೆ ಮತ್ತು ಹಸುಗಳ ಮಾಂಸ ತಿನ್ನುವ ಪದ್ಧತಿ ಕಾಡುಗೊಲ್ಲ ಸಮುದಾಯದವರಲ್ಲಿ ಇಲ್ಲವಾದರೂ, ಎಮ್ಮೆಗಳಿಗೆ ಕೋಣ ಮರಿಯನ್ನು ದೇವತೆಗಳ ಹೆಸರಿಗೆ ಬಿಟ್ಟು ಕೋಣನ ಮರಿಗಳನ್ನು ಸದರಿ ದೇವತೆಗಳ ಹಬ್ಬ ಹರಿದಿನಗಳಲ್ಲಿ ಕೋಣಗಳ ಮಾಂಸ ತಿನ್ನುವವರ ಮೂಲಕ ಬಲಿ

ಕೊಡುತ್ತಾರೆ. ಹಸುಗಳಲ್ಲಿ ಹುಟ್ಟುವ ಗಂಡು ಕರುಗಳನ್ನು ದೇವರ ಹೆಸರಿನಲ್ಲಿ ಬಸವನನ್ನು ಬಿಟ್ಟು ಬಲಿ ಕೊಡುವ ಸಂಪ್ರದಾಯವಿಲ್ಲ ಮತ್ತು ಆ ಕರುಗಳನ್ನು ಮಾರುವುದೂ ಇಲ್ಲ. ಅವು ಸತ್ತರೆ ಸಮಾಧಿ ಮಾಡಿ ಹಬ್ಬ ಹರಿದಿನಗಳಲ್ಲಿ ಸಮಾಧಿಗೆ ಪೂಜೆ ಮಾಡುವ ಪದ್ಧತಿ ಇದೆ.

ಪಶುಪಾಲನೆ ಸಂಬಂಧ ಸರ್ಕಾರಿ ಸೌಲಭ್ಯಗಳ ಪರಿಣಾಮಗಳು ಮೈಸೂರು ಮಹಾರಾಜರ ಕಾಲದಲ್ಲಿ, ಕಾವಲು ಇರುವ ಕಡೆ ಅಮೃತ ಮಹಲ್ ದನಗಳ ತಳಿಗಳನ್ನು ಬೆಳೆಸಲು ಶೇರ್ವೆಗಾರರನ್ನು ನೇಮಿಸಿಕೊಂಡು ೩೦೦ ದನಗಳನ್ನು ಅವರ ವಶಕ್ಕೆ ಕೊಡುತ್ತಿದ್ದರು. ಮತ್ತು ಅವುಗಳ ಸಾಕಾಣಿಕೆಗೆ ಸರ್ಕಾರದ ಅಡವಿಯಲ್ಲಿ ಕಾವಲುಗಳನ್ನು ಗುರುತಿಸಿ ಅವರ ವಶಕ್ಕೆ ಕೊಡುತ್ತಿದ್ದರು ಆ ದನಗಳನ್ನು ದುಡಿಮೆ ದೃಷ್ಟಿಯಲ್ಲಿ ಅಂದರೆ ಬೇಸಾಯ ಹಾಗೂ ಹಾಲಿಗಾಗಿ ಬೆಳಸಿದ್ದರು. ಆದರೆ ಇಂದು ಆ ದನ ಇಲ್ಲ ಮತ್ತು ಕಾವಲು ಭೂಮಿಯನ್ನು ವ್ಯವಸಾಯಕ್ಕೆ ಅಳವಡಿಸಿಕೊಂಡಿಕೊಂಡಿದ್ದಾರೆ. ಇಂದು ಅಂಥ ಸರ್ಕಾರಿ ಸೌಲಭ್ಯಗಳು ಯಾವೂದೂ ಇಲ್ಲ ಮತ್ತು ಅವುಗಳ ಪರಿಹಾರವೂ ಇಲ್ಲ.

ಗೊಲ್ಲ ಸಮುದಾಯದ ಸಾಮಾಜಿಕ–ಆರ್ಥಿಕ ಜೀವನ ಅವರ ದನಕರುಗಳ ಪಾಲನೆ–ಪೋಷಣೆಯಲ್ಲಿ ಹಾಸುಹೊಕ್ಕಾಗಿರುವುದನ್ನ ಇವರ ವಾಸ್ತವ್ಯದ ರಚನೆಯನ್ನ ನೋಡಿದರೆ ತಿಳಿಯುತ್ತದೆ. ಸಾಮಾನ್ಯವಾಗಿ ಇವರು ತಾವು ಮಲಗುವ ವರಾಂಡದ ಪಕ್ಕದಲ್ಲಿ ದನಗಳ ಕೊಟ್ಟಿಗೆ ನಿರ್ಮಿಸಿ ಅವುಗಳ ಪಕ್ಕದಲ್ಲೆ ತಾವೂ ಮಲಗುತ್ತಾರೆ. ರಾತ್ರಿಯಿಡೀ ಎದ್ದಿದ್ದು, ಅವುಗಳಿಗೆ ಮೇವ (ಹುಲ್ಲು ಜೋಳ)ವನ್ನ ಹಾಕಿ, ಪ್ರತಿನಿತ್ಯ ಅವುಗಳ ಮೈಯನ್ನ ಶುಚಿಗೊಳಿಸುತ್ತಾರೆ. ಕಾರಬ್ಬ ಅಥವಾ ಬಸವನ ಹಬ್ಬ ಬಂತೆಂದರೆ ತಮ್ಮ ರಾಸುಗಳಿಗೆ ಬಣ್ಣದ ಕಾಗದಗಳಿಂದ ಸಿಂಗರಿಸಿ ಊರು ಮತ್ತು ಊರ ಹೊರಗೆ ಮೆರವಣಿಗೆ ಮಾಡಿಸಿ ಇವರೂ ಕುಣಿದು ಕುಪ್ಪಳಿಸಿ ಊರ ಬಾಗಿಲಿನಲ್ಲಿ ಕಟ್ಟಿದ ತೋರಣವನ್ನ ಅರಿದು ತಮ್ಮ ಬುಡಕಟ್ಟು ದೇವರುಗಳಿಗೆ ಪೂಜೆ ಮಾಡಿಸಿ ಮನೆಗಳಿಗೆ ಹೋಗಿ ಮೊದಲು ಆಹಾರದ ಎಡೆಯನ್ನ ದನಕರುಗಳಿಗೆ ತಿನ್ನಿಸಿ ನಂತರ ತಾವು ಊಟ ಮಾಡುತ್ತಾರೆ. ತಮ್ಮ ದನಕರುಗಳನ್ನ ತಮ್ಮ ಮಕ್ಕಳಷ್ಟೇ ಹೆಚ್ಚಿಗೆ ಪ್ರೀತಿಸುತ್ತಾರೆಂದರೆ ಅತಿಶಯೋಕ್ತಿಯಾಗಲಾರದು. ದನಕರುಗಳಿಗೆ ರೋಗ–ಗುಜಿನಗಳು ಬಂದರೆ ಇವರು ನಿದ್ದೆ ಮಾಡುವುದಿಲ್ಲ. ತಮ್ಮ ಸಮುದಾಯದಲ್ಲೇ ಇರುವ ನಾಟಿ ವೈದ್ಯರನ್ನ ಕರೆಸಿ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧವನ್ನ ಕೊಡಿಸುತ್ತಾರೆ. ಇವರು ತಮ್ಮ ರಾಸುಗಳನ್ನ ಸರ್ಕಾರದ ಪಶುಚಿಕಿತ್ಸಾ ಕೇಂದ್ರಗಳಿಗೆ ತೋರಿಸುವುದು ತುಂಬಾ ಅಪರೂಪ. ಇತ್ತೀಚಿನ ಬದಲಾವಣೆಯಿಂದಾಗಿ ಈ ಸಮುದಾಯದಲ್ಲಿ ಸಾಂಪ್ರದಾಯಿಕ ಕಸುಬಾದ ಪಶುಪಾಲನೆ ಕ್ರಮೇಣ ಕಡಿಮೆಯಾಗುತ್ತಿದೆ.

**ಸಾಂಪ್ರದಾಯಿಕ ಕಸುಬುಗಳು :** ಕಾಡುಗೊಲ್ಲರ ಸಾಂಪ್ರದಾಯಿಕ ಕಸುಬುಗಳೆಂದರೆ **ಪಶುಪಾಲನೆ**– ಅಂದರೆ ಈ ಸಮುದಾಯದ ಸಾಂಸ್ಕೃತಿಕ ವೀರನಾದ ಎತ್ತಪ್ಪ

ತುಮಕೂರು ಜಿಲ್ಲೆ ಶಿರಾ ತಾಲ್ಲೂಕಿನಿಂದ ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕಿನವರೆಗೂ ದನಗಳನ್ನು ಮೇಯಿಸಿಕೊಂಡು ದನಗಳ ಜೊತೆ ಅಡವಿಯಲ್ಲೇ ಇರುತ್ತಿದ್ದನೆಂಬುದಕ್ಕೆ ಸಾಕಷ್ಟು ಜನಪದ ಸಾಹಿತ್ಯವಿದೆ. ಇಂದು ಎತ್ತಪ್ಪ ದೇವರು ಇರುವ ಗೊಲ್ಲರ ಹಟ್ಟಿಯಲ್ಲಿ ಜಾತ್ರೆ ಸಮಯದಲ್ಲಿ ಬೆಳಿಗ್ಗೆ ಸಾಲು ಕಾರ್ಯ ಆದ ಮೇಲೆ ೫ ದಿನ ಆ ಹಟ್ಟಿ ಜನರೂ ಊರಿನೊಳಗೆ ಪ್ರವೇಶವಿಲ್ಲ ಮತ್ತು ಊರಿನ ಜನರೂ ಹಟ್ಟಿ ಒಳಗೆ ಬರುವಂತಿಲ್ಲ. ಅದೇ ರೀತಿ ಮತ್ತೊಬ್ಬ ಸಾಂಸ್ಕೃತಿಕ ವೀರನಾದ ಜುಂಜಪ್ಪನು ತುಮಕೂರು ಜಿಲ್ಲೆಯಿಂದ, ಬಳ್ಳಾರಿ ಜಿಲ್ಲೆಯ ಜರಮಲಿ ಸೀಮೆ ಅಂದರೆ ಕೂಡಲಗಿ ತಾಲೂಕಿನವರೆಗೆ ದನಗಳ ಜೊತೆ ಒಂದು ಹುಲ್ಲುಗಾವಲಿನಿಂದ ಮತ್ತೊಂದು ಹುಲ್ಲುಗಾವಲು ಮತ್ತು ನೀರು ಇರುವ ಕಡೆ ಹೋಗುತ್ತಿದ್ದನು ಎಂಬುದಕ್ಕೆ ಜುಂಜಪ್ಪನ ಮೇಲೆ ಹಾಡುವ ಜನಪದ ಕಾವ್ಯಗಳು ತಿಳಿಸುತ್ತವೆ. ಈ ಸಂಪ್ರದಾಯಿಕ ಕಸುಬುಗಳು ಇಂದೂ ಆಚರಣೆಯಲ್ಲಿವೆ. ಅಂದರೆ ಹುಲ್ಲುಗಾವಲು ಕಡಿಮೆಯಾದಂತೆ ಕುರಿ–ಮೇಕೆ ಸಾಕಾಣಿಕೆ ಸಂಪ್ರದಾಯಿಕ ಕಸುಬಾಗಿ ಹುಲ್ಲು ನೀರಿಗಾಗಿ ಸಂಸಾರ ಸಮೇತ ಡಿಸೆಂಬರ್ ತಿಂಗಳಿಂದ ಜೂನ್, ಜುಲೈವರೆಗೆ ಮಲೆನಾಡು, ಮೈಸೂರು, ಹಾಸನ, ಕೊಳ್ಳೆಗಾಲದ ಕಡೆ ವಲಸೆ ಹೋಗುತ್ತಾರೆ. ಇದೇ ಇವರ ಸಂಪ್ರದಾಯಿಕ ಕಸುಬು.

ಕಾಡುಗೊಲ್ಲರ ಸಂಪ್ರದಾಯಿಕ ಕಸುಬಾಗಿದ್ದ ಪಶುಪಾಲನೆಗೆ ಹುಲ್ಲುಗಾವಲುಗಳು ಕಡಿಮೆಯಾದಂತೆ ಈ ಸಮುದಾಯದವರು ಕುರಿಸಾಕಾಣಿಕೆ ಜೊತೆ ಬಗರುಕಂನಲ್ಲಿ ಸಣ್ಣ ಸಣ್ಣ ಜಮೀನು ಮಾಡುತ್ತ ವ್ಯವಸಾಯದ ಕಡೆ ವಾಲುತ್ತಿದ್ದಾರೆ. ಅಲ್ಲದೆ ಕೂಲಿಕಾರರಾಗಿ ಕೆಲಸ ಮಾಡುತ್ತಿದ್ದಾರೆ.

ಸಂಪ್ರದಾಯಿಕ ಕಸುಬುಗಳಲ್ಲಿ ಸ್ಥಿತ್ಯಂತರ–ಅಂದರೆ ಅನಿವಾರ್ಯವಾಗಿ ಸಂಪ್ರದಾಯಿಕ ಕಸುಬುಗಳು ನಿಲ್ಲುವ ಸ್ಥಿತಿಗೆ ತಿರುಗಿದಾಗ, ಅನಿವಾರ್ಯವಾಗಿ ಕೃಷಿ ಮತ್ತು ಕೂಲಿಕಾರರಾಗುವ ಸ್ಥಿತ್ಯಂತರ ಪ್ರಾರಂಭವಾಗಿದೆ.

**ಬಳಸುವ ಉಪಕರಣಗಳು, ಕುಟುಂಬ ನಿರ್ವಹಣೆ**

ವ್ಯವಸಾಯಕ್ಕೆ ಸಂಬಂಧಿಸಿದಂತೆ, ಕಾಡುಗೊಲ್ಲರು ಮರದ ನೇಗಿಲು, ಕುಂಟೆ, ಕೂರಿಗೆ, ಹಲುಬೆ ಮುಂತಾದ ಉಪಕರಣಗಳನ್ನು ಉಪಯೋಗಿಸುತ್ತಾರೆ. ಇದಲ್ಲದೆ ಎತ್ತಿನಗಾಡಿ ಮತ್ತು ಮರದಿಂದ ತಯಾರಿಸಿದ ಉಪಕರಣಗಳನ್ನು ಉಪಯೋಗಿಸುತ್ತಾರೆ. ಕುರಿಸಾಕಣೆಗೆ ಕುರಿಗೋಲು ಮತ್ತು ಇತರೆ ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಕೊಡಲಿ, ಕೈ ಕೊಡಲಿ, ಕುಡುಗೋಲು, ಕಳೆಕುಡ್ಲು ಇತ್ಯಾದಿಗಳನ್ನು ಬಳಸುತ್ತಾರೆ.

**ಕಸುಬಿನ ಬಗೆಗೆ ನಂಬಿಕೆಗಳು**

ಕಾಡುಗೊಲ್ಲ ಸಮುದಾಯವರಲ್ಲಿ ಪಾರಂಪರಿಕ ಕಸುಬಾದ ಪಶುಪಾಲನೆಯಲ್ಲಿ ಇಂದೂ ಅಚಲವಾದ ನಂಬಿಕೆ ಇದೆ. ಅಂದರೆ ಇವರಲ್ಲಿ ಎಷ್ಟು ಬಡತನವಿದ್ದರೂ ೨–೩ ಮೇಕೆಗಳನ್ನಾದರೂ ಸಾಕುತ್ತಿರುತ್ತಾರೆ. ಭಿಕ್ಷಕರಿಗೆ, ಕೆಲವು ದಾಸಯ್ಯನವರಿಗೆ, ಎಷ್ಟೇ ಅನುಕೂಲ ಆಸ್ತಿ ಇದ್ದರೂ ಸಂಪ್ರದಾಯದಂತೆ ವರ್ಷಕ್ಕೆ ಒಂದು ದಿನವಾದರೂ

ಭಿಕ್ಷೆಗೆ ಹೋಗುತ್ತಾರೆ. ಹಾಗೆ ಕಾಡುಗೊಲ್ಲ ಸಮುದಾಯದವರಾಗಿ ಅತಿ ಕಡುಬಡವನಾಗಿದ್ದರೂ, ಕೊನೆಪಕ್ಷ ೨ ಮೇಕೆಯನ್ನಾದರೂ ಇಟ್ಟುಕೊಂಡು ಸಾಕುತ್ತಾನೆ.

ಕುರಿಸಾಕಣೆ: ರಾಜ್ಯದ ಗೊಲ್ಲ ಸಮುದಾಯದವರು ಪಶುಪಾಲನೆಯ ಜೊತೆಗೆ ಕುರಿಸಾಕಣೆಯನ್ನ ತಮ್ಮ ಪ್ರಧಾನ ಸಾಂಪ್ರದಾಯಿಕ ಕಸುಬನ್ನಾಗಿಸಿಕೊಂಡಿದ್ದಾರೆ. ಸಾಂಪ್ರದಾಯಿಕವಾಗಿ ಕುರಿಸಾಕಣೆಯು ಕುರುಬ ಸಮುದಾಯದ ಕಸುಬಾಗಿದ್ದರೂ, ಕರ್ನಾಟಕದ ಬಹುತೇಕ ಗೊಲ್ಲ ಸಮುದಾಯದವರು ಕುರಿಸಾಕಣೆಯನ್ನ ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ರಾಜ್ಯದ ತುಮಕೂರು, ಚಿತ್ರದುರ್ಗ, ಜಿಲ್ಲೆಗಳಲ್ಲಿ ಕಾಡುಗೊಲ್ಲ ಸಮುದಾಯದವರು ಅಧಿಕ ಸಂಖ್ಯೆಯಲ್ಲಿ ಕುರಿ ಸಾಕುವುದನ್ನ ಕಾಣಬಹುದು. ಕಸುಬು ಮತ್ತು ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದಂತೆ ಕುರುಬ ಮತ್ತು ಗೊಲ್ಲ ಸಮುದಾಯದವರಲ್ಲಿ ಸಾಮ್ಯತೆ ಕಂಡುಬರುತ್ತದೆ. ಗೊಲ್ಲ ಸಮುದಾಯದವರು ಕುರಿಗಳನ್ನ ಸಾಕಿದರೆ ಕುರುಬ ಸಮುದಾಯದರು ಕುರಿಗಳ ಉಣ್ಣೆಯನ್ನ ಕತ್ತರಿಸಿಕೊಂಡು ಹೋಗಿ ಕಂಬಳಿ ತಯಾರಿಸುತ್ತಾರೆ. ಕುರುಬರಿಗೆ ಕುರಿಗಳ ಉಣ್ಣೆ ಬೇಕಾಗಿರುವುದರಿಂದ ಸಹಜವಾಗಿಯೇ ಇವರಿಗೆ ಗೊಲ್ಲರೊಡನೆ ಬಳಕೆಯಿದೆ. ಕುರುಬರಿಗೆ ಮತ್ತು ಗೊಲ್ಲರಿಗೆ ಇರುವ ಸಂಬಂಧ ಕುರಿತು ದೇಜಗೌ ಅವರು ಈ ರೀತಿ ಹೇಳುತ್ತಾರೆ. "ಕುಂಚಿಟಗರು, ಕುರುಬರು, ಗೊಲ್ಲರು ಮೂಲತಃ ಒಂದೇ ವಂಶದವರಿರಬೇಕು. ಒಂದೇ ಮನೆಯವರಿರಬೇಕು. ಈ ಮೂರು ಜಾತಿಯವರು ಹೆಚ್ಚು ಕಡಿಮೆ ಒಂದೇ ಸಂಪ್ರದಾಯದವರು. ಅವರ ನಡೆನುಡಿಗಳಲ್ಲಿ ಬೇಧವಿಲ್ಲ, ಒಂದೇ ಊರಿನಲ್ಲಿ ಇಂದಿಗೂ ಅಣ್ಣ ತಮ್ಮಂದಿರಂತೆ ವಾಸಿಸುತ್ತಾರೆ. ಅಷ್ಟೇ ಅಲ್ಲ, ಕೊಡು, ಕೊಳ್ಳುವುದೊಂದನ್ನು ಬಿಟ್ಟು ಇವರಲ್ಲಿ ಭೇದವಾಗಲೀ ಪ್ರತ್ಯೇಕತೆಯಾಗಲೀ ಕಾಣುವುದಿಲ್ಲ. ಮೂಲತಃ ಒಂದೇ ಆಗಿದ್ದ ಜನ ಕಸುಬು ಬೇರೆಯಾದ ಕಾರಣವಾಗಿ ಬೇರೆಯಾದರು. ಬೇರೆಯಾದವರಲ್ಲಿ ಕೊಡು ಕೊಳ್ಳು ಕೆಲವು ದಿನ ಮುಂದುವರಿದಿರಬೇಕು. ಆ ಮೇಲೆ ನಿಂತು ಹೋಗಿರಬೇಕು. ಈ ನಿಲುಗಡೆಯಿಂದ ಅವರು ಸಂಪೂರ್ಣವಾಗಿ ಬೇರ್ಪಡೆಗೊಂಡರು (ತೀನಂಶಂ:೧೯೮೨:೨೨). ಗೊಲ್ಲರಿಗೆ ಮತ್ತು ಕುರುಬರಿಗೆ ಬಹಳ ಹಿಂದೆಯೇ ಸಂಬಂಧ ಇದ್ದಿರಬಹುದೆಂದು ಈ ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ. ಈ ಎರಡು ಜಾತಿಗಳಲ್ಲಿ ಉದ್ಯೋಗಕ್ಕೆ ಸಂಬಂಧಿಸಿದಂತೆ ಸಾಮ್ಯತೆ ಇರುವುದು ಇದಕ್ಕೆ ಆಧಾರ ನೀಡುತ್ತದೆ. ಎಡ್ಗರ್ ಥರ್‌ಸ್ಟನ್‌ರವರು ಗೊಲ್ಲರ ಸಂಪ್ರದಾಯಗಳು ಕುರುಬರ ಸಂಪ್ರದಾಯಗಳನ್ನ ಹೋಲುತ್ತವೆ ಎಂದು ಹೇಳಿದ್ದಾರೆ.

ಎ ಎ ಡಿ ಲೂಯಿಸ್ ರವರು ಕಾಡುಗೊಲ್ಲರ ಕುರಿ ಸಾಕಾಣೆ ಮತ್ತು ಉದ್ಯೋಗ ಕುರಿತು ಈ ರೀತಿ ಅಭಿಪ್ರಾಯ ಪಡುತ್ತಾರೆ. Kadu Gollas are hereditary herdsmen. Those setteled cultivate whenever land is available and engage others to tend their livestock. Rearing sheep, cows, and Buffaloes and trading in them in a limeted way and vending milk products are their popular occupations. Kadu Gollas present

thc disappointing aspects of tribal economy and its connected miseries Luiz, A A D: 1963:86). ಇದೇ ರೀತಿ ಹೆಚ್ ವಿ ನಂಜುಂಡಯ್ಯರವರು ಕಾಡು ಗೊಲ್ಲರ ಉದ್ಯೋಗದ ಬಗ್ಗೆ ಈ ಕೆಳಗಿನಂತೆ ಹೇಳಿದ್ದಾರೆ. Their original occpation seems to have been confined to sheep and cattle breeding and it continues to be their chief occupation even now. They are backward in Agriculture and grow only such crops as are needed for their own use and can be easily raised. A Golla without cattle would be a misnomer and this association is so well recognised that he is chosen by all Vokkaligas by preference to offciate as the Pujari of the cattle Godess Katamma, at the Sankrantri festval(Nanjundaiah, H V: 1908:9).

ಗೊಲ್ಲಸಮುದಾಯದಲ್ಲಿ ಶ್ರೀಮಂತಿಕೆ ನಿರ್ಧಾರವಾಗುವುದು ಅವರು ಎಷ್ಟು ಕುರಿಗಳನ್ನ ಸಾಕುತ್ತಾರೆ ಎಂಬುದರ ಮೇಲೆ. ಕನಿಷ್ಟ ಒಂದು ಅಥವಾ ಎರಡರಿಂದ ಹಿಡಿದು ಗರಿಷ್ಟ ಸಾವಿರಗಟ್ಟಲೆ ಕುರಿ ಸಾಕುವ ಜನರಿದ್ದಾರೆ. ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ(ಹುಣಸೆಕಟ್ಟೆ, ಮೇಣಿಗನ ಹಟ್ಟಿ) ಮತ್ತು ಚಿತ್ರದುರ್ಗ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇವರು ಕುರಿ ಸಾಕುತ್ತಾರೆ. ಇವರ ಮುಖ್ಯ ಜೀವನಾಧಾರ ಕುರಿ ಸಾಕಣೆಯನ್ನವಲಂಬಿಸಿದೆ. ಗೊಲ್ಲರು ಕುರಿಗಳ ವಾಸ್ತವ್ಯಕ್ಕೆ ಕುರಿ ರೊಪ್ಪಗಳನ್ನ, ಜಾಲಿ, ಕಳ್ಳಿ–ಕಾರೆ ಮುಳ್ಳುಗಳಿಂದ ನಿರ್ಮಿಸುತ್ತಾರೆ. ಆ ರೊಪ್ಪದೊಳಗೆ ಒಂದು ಮಂಚಿಗೆಯನ್ನ (ಮಂಚ) ನಿರ್ಮಿಸಿಕೊಂಡು ಪುರುಷರು ಕುರಿಗಳ ಮಧ್ಯದಲ್ಲಿಯ ರಾತ್ರಿ ವೇಳೆಯಲ್ಲಿ ಮಲಗುತ್ತಾರೆ. ಕಳ್ಳ–ಕಾಕರ ಮತ್ತು ತೋಳಗಳ ಹಾವಳಿಯನ್ನ ತಡೆಯಲು ನಾಯಿಗಳನ್ನ ಸಾಕಿರುತ್ತಾರೆ. ಜೊತೆಗೆ ಇವರೂ ರಾತ್ರಿಯಿಡೀ ಎಚ್ಚರದಿಂದಿರುತ್ತಾರೆ. ಕುರಿಗಳನ್ನ ಸರ್ಕಾರದ ಗೋಮಾಳಗಳಲ್ಲೋ, ಅಥವಾ ತಮ್ಮ ತಮ್ಮ ತೋಟ ಹೊಲ–ಗದ್ದೆಗಳಲ್ಲಿ ಮೇಯಿಸುತ್ತಾರೆ. ಬೇಸಿಗೆ ಕಾಲದಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಿ ಕುರಿಗಳನ್ನ ಬೇರೆ ಜಾತಿ–ಸಮುದಾಯದವರ ತೋಟಗಳಿಗೆ ಮಂದೆ ಬಿಡುತ್ತಾರೆ. ಕುರಿಗಳ ಜೊತೆಗೆ ಕತ್ತೆಗಳನ್ನು ಸಾಕುತ್ತಾರೆ. ಕಾರಣವೇನೆಂದರೆ ವಲಸೆ ಹೋಗುವಾಗ ಕುರಿ ಮರಿಗಳನ್ನು ಮತ್ತು ಅಡಿಗೆ ಸಾಮಾನು, ಕಾಳುಗಳಿಂದ ತುಂಬಿದ ಚೀಲಗಳನ್ನು ಕತ್ತೆಗಳ ಮೇಲೆ ಹೇರಿಕೊಂಡು ಹೋಗುತ್ತಾರೆ. ಅಷ್ಟೇ ಅಲ್ಲದೆ ಕುರಿಮಂದೆಗೆ ತೋಳ, ಚಿರತೆ ನುಗ್ಗಿದರೆ ಕತ್ತೆ ಕಿರುಚುವುದರಿಂದ ಹೆದರಿ ಓಡಲು ಅನುಕೂಲವಾಗುತ್ತೆ. ಕುರಿಗಳು ಹಾಕುವ ಕುರಿ ಗೊಬ್ಬರ ಮತ್ತು ಗಂಜಿನಿಂದ ತೋಟಗಳು ಸಮೃದ್ಧವಾಗಿ ಬೆಳೆಯುತ್ತವೆ. ಇದಕ್ಕೆ ಪ್ರತಿಯಾಗಿ ಮಂದೆ ಬಿಡಿಸಿಕೊಂಡ ತೋಟದವರು ಇವರಿಗೆ ಊಟ ಮತ್ತು ದವಸ ಧಾನ್ಯಗಳನ್ನ ಕೊಡುತ್ತಾರೆ. ಸ್ವಲ್ಪ ದಿನಗಳ ನಂತರ ಮುಂದಿನ ಪ್ರದೇಶಕ್ಕೆ ಪ್ರಯಾಣ ಬೆಳೆಸುತ್ತಾರೆ. ಸಾಮಾನ್ಯವಾಗಿ ಬಯಲು ಪ್ರದೇಶಗಳು ಬರಗಾಲ ಪ್ರದೇಶಗಳಾಗಿರುವುದರಿಂದ, ಬಯಲು ಸೀಮೆಗಳಾದ ತುಮಕೂರು ಮತ್ತು ಚಿತ್ರದುರ್ಗದ

ಪ್ರದೇಶದ ಕುರಿಗಾರರು ಮಲೆನಾಡು ಮತ್ತು ಮೈಸೂರು ಕಡೆಗೆ ವಲಸೆ ಹೋಗುತ್ತಾರೆ. ಕುರಿ ಸಾಕಣೆ ಆರ್ಥಿಕವಾಗಿ ಲಾಭದಾಯಕವಾಗಿದ್ದರೂ, ಬಲು ಕಷ್ಟದ ಕೆಲಸ. ಬಾಲಕರಿಂದ ಹಿಡಿದು ಮಹಿಳೆಯರಾದಿಯಾಗಿ ಕುರಿ ಮೇಯಿಸಲು ಹೋಗುತ್ತಾರೆ. ಮಳೆ, ಗಾಳಿ, ಬಿಸಿಲೆನ್ನದೆ, ಇಡೀ ದಿನ ಕುರಿಗಳು ಹೋದ ಹಾಗೆ ಅವುಗಳ ಬೆನ್ನಟ್ಟಿ ಹೋಗುತ್ತಾರೆ. ಇವರು ಸಂಜೆ ಮನೆಗೆ ಬರುವಾಗ ಸೊರಗಿ–ಸೊಪ್ಪಾಗಿರುತ್ತಾರೆ. ಕೆಲವು ಸಂದರ್ಭಗಳಲ್ಲಿ ಇವರಿಗೆ ಕುಡಿಯಲು ನೀರು ಸಿಗುವುದಿಲ್ಲ. ಕುರಿಗಳಿಗೆ ನಾನಾ ತರಹದ ರೋಗಗಳು ಕಾಣಿಸಿಕೊಳ್ಳುತ್ತವೆ. ಅಂಟು ರೋಗಗಳು ಬಂದರಂತೂ ಇಡೀ ಕುರಿ ಹಿಂಡೇ ಸಾಯುತ್ತವೆ. ಆಗ ಇವರಿಗೆ ತುಂಬಾ ನಷ್ಟವಾಗುತ್ತದೆ. ಈ ನಷ್ಟವನ್ನು ತುಂಬಲು ಇವರಿಗೆ ಸರ್ಕಾರದ್ದೂ ಸೇರಿದಂತೆ ಯಾವುದೇ ಭದ್ರತೆ ಇಲ್ಲ.

ಇತ್ತೀಚೆಗೆ ಕಾಡುಗಳ ನಾಶ (ಗೋಮಾಳಗಳ) ಮತ್ತು ಕೃಷಿ ಚಟುವಟಿಕೆಗಳಿಂದಾಗಿ ಕುರಿ ಸಾಕಣೆ ತುಂಬಾ ಕಷ್ಟದಾಯಕವಾಗಿ ಕಾಣುತ್ತದೆ. ಕ್ರಮೇಣವಾಗಿ ಕುರಿ ಸಾಕುವವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ. ಜೊತೆಗೆ ನಗರೀಕರಣ, ಕೈಗಾರೀಕರಣ ಮತ್ತು ಶಿಕ್ಷಣದಿಂದಾಗಿ ಸಮುದಾಯದ ಯುವಕರು ಇತ್ತೀಚೆಗೆ ಆಧುನಿಕ ಕಸುಬಿನ ಕಡೆ ವಾಲುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣಗಳೆಂದರೆ ಕುರಿ ಸಾಕಣೆ ಕಷ್ಟದ ಕೆಲಸ ಮತ್ತು ಕಳಂಕಿತ ಕೆಲಸವಲ್ಲದಿದ್ದರೂ, ಪ್ರತಿಷ್ಠೆ ದೃಷ್ಟಿಯಿಂದ ಕೆಳಮಟ್ಟದ ಉದ್ಯೋಗ ವಾದ್ದರಿಂದ ಸಮಾಜದ ಸ್ತರದಲ್ಲಿ ಉನ್ನತ ಸ್ಥಾನ ಪಡೆಯಲು ಅಷ್ಟೇನು ಲಾಭದಾಯಕ ವಲ್ಲದ ಆದರೆ ವೃತ್ತಿ ಘನತೆಯ ದೃಷ್ಟಿಯಿಂದ ಪ್ರತಿಷ್ಠಿತವಾದುದು ಎಂದು ನಿರ್ಧರಿಸಲ್ಪಟ್ಟಿರುವ 'ಕೃಷಿ' ಕೆಲಸದಲ್ಲಿ ತೊಡಗಲು ಪ್ರಾರಂಭಿಸಿದ್ದಾರೆ. ಇದಕ್ಕೆ ಪೂರಕವಾಗಿ ಸಾಮಾಜಿಕ ಸ್ತರದಲ್ಲಿ ಮೇಲೇರಲು ಹೊಸ ಸಾಮಾಜಿಕ ಪರಿಸರವನ್ನು ಹೊಂದಲು ಮತ್ತು ತಮ್ಮ ರೀತಿ–ನೀತಿ, ಪದ್ಧತಿ, ರೂಢಿ, ವೇಷ–ಭೂಷಣ, ಆಚರಣೆ, ಊಟೋಪಚಾರ ಗಳಲ್ಲಿ ಬದಲಾವಣೆ ತಂದುಕೊಳ್ಳಲು ಪ್ರಾರಂಭಿಸಿದ್ದರಿಂದ ಸಾಂಪ್ರದಾಯಿಕ ಉದ್ಯೋಗ ವಾದ ಕುರಿ ಸಾಕಣೆ ಮತ್ತು ಪಶುಪಾಲನೆ ಕ್ರಮೇಣ ಈ ಸಮುದಾಯದಲ್ಲಿ ಕಡಿಮೆ ಯಾಗುತ್ತಿದೆ.

**ಬೇಟೆ**

ಹಿಂದಿನ ಕಾಲದಲ್ಲಿ ಕಾಡುಗೊಲ್ಲರು ಬೇಟೆಯಾಡುತ್ತಿದ್ದರು. ಹಾಗೆಯೇ ಕಾಡುಗಳ ಉತ್ಪನ್ನಗಳ ಸಂಗ್ರಹಣೆ ಮಾಡುತ್ತಿದ್ದರು. ಕಾಲಕ್ರಮೇಣ ಸಮಾಜ ಸಂಕೀರ್ಣವಾದಂತೆ ಮತ್ತು ಬದಲಾದಂತೆ ಕಾಡುಗಳು ನಾಶವಾಗತೊಡಗಿದಾಗ ಬೇಟೆಯಾಡುವುದು ಕಡಿಮೆ ಯಾಯಿತು. ಕಾಡುನಾಶವಾದಂತೆಲ್ಲಾ ಆಹಾರ ಸಂಗ್ರಹಣೆಗೋಸ್ಕರ ಕಾಡು ಉತ್ಪನ್ನಗಳನ್ನು ಸಂಗ್ರಹಿಸುವ ಪದ್ಧತಿಯೂ ಕಡಿಮೆಯಾಯಿತು.

**ಕೃಷಿ, ಭೂಒಡೆತನ**

ಕೃಷಿ: ಕರ್ನಾಟಕದ ಗೊಲ್ಲ ಸಮುದಾಯ ವ್ಯವಸಾಯದಲ್ಲಿ ಹಿಂದುಳಿದವರಾಗಿದ್ದಾರೆ. ಇವರಲ್ಲಿ ಜಮೀನು ಇರುವವರು ತುಂಬಾ ಕಡಿಮೆ. ಇದ್ದರೂ ಸಣ್ಣ ಪ್ರಮಾಣದ

ಇಡುವಳಿದಾರರಾಗಿರುತ್ತಾರೆ. ಅಂದರೆ ಇವರಲ್ಲಿ ಸಣ್ಣ ರೈತರು ಮತ್ತು ಅತೀ ಸಣ್ಣ ರೈತರೂ ಹಾಗೂ ಕೃಷಿ ಕಾರ್ಮಿಕರೇ ಹೆಚ್ಚು. ರಾಜ್ಯದ ೩ ನೇ ಹಿಂದುಳಿದ ವರ್ಗವು ರಾಜ್ಯದೆಲ್ಲೆಡೆ ೯೦ ತಾಲ್ಲೂಕುಗಳಲ್ಲಿ ನಡೆಸಿದ ಸಾಮಾಜಿಕ-ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ಪ್ರಕಾರ ಗೊಲ್ಲ ಸಮುದಾಯವು ಅತ್ಯಂತ ಹೆಚ್ಚಿನ ಭೂರಹಿತ (landless) ಮತ್ತು ಜಾಗರಹಿತ ಸಮುದಾಯಗಳಲ್ಲಿ ಒಂದು ಎಂಬುದಾಗಿ ತಿಳಿಸಿದೆ. ಒಂದು ವೇಳೆ ಅಲ್ಲಲ್ಲಿ ಒಬ್ಬೊಬ್ಬರಿಗೆ ಸ್ವಲ್ಪ ಪ್ರಮಾಣದ ಜಮೀನಿದ್ದರೆ ಆ ಜಮೀನು ದಿಣ್ಣೆಯೋ, ಜೌಗು ಪ್ರದೇಶವೋ ಅಥವಾ ನೀರಾವರಿಗೆ ಸಮರ್ಪಕವಲ್ಲದ ಬಂಜರು ಭೂಮಿಯೋ ಮತ್ತು ಕೃಷಿಗೆ ಯೋಗ್ಯವಲ್ಲದ ಭೂಮಿಯಾಗಿರುತ್ತದೆ. ಸಾಮಾನ್ಯವಾಗಿ ಇವರ ಜಮೀನುಗಳು ಬಯಲು ಪ್ರದೇಶಗಳಲ್ಲಿರುತ್ತವೆ. ಕಾರಣವೆಂದರೆ ತಮ್ಮ ಕುರಿ ದನಗಳನ್ನ ಮೇಯಿಸಲು ಯೋಗ್ಯವಾದ ಪ್ರದೇಶವಾದ ಬಯಲು ಪ್ರದೇಶಗಳಲ್ಲಿ ನೆಲೆಯೂರಿರುತ್ತಾರೆ. ಇವರಲ್ಲಿ ಕೃಷಿ ಕಾರ್ಮಿಕರ ಸ್ಥಿತಿಗತಿ ತುಂಬಾ ನಿಕೃಷ್ಟವಾದುದಾಗಿದೆ. ಇತ್ತೀಚೆಗೆ ಕೃಷಿ ಚಟುವಟಿಕೆಗಳಿಗೆ ಆಧುನಿಕ ತಂತ್ರಜ್ಞಾನವನ್ನ ಬಳಸಲು ಪ್ರಾರಂಭಿಸಿದ್ದರಿಂದ ಇವರಿಗೆ ಕೃಷಿ ಜಮೀನಿನಲ್ಲಿ ಕೂಲಿ ಕೆಲಸ ಸಿಗದಂತಾಗಿದೆ.

ಇವರಲ್ಲಿ ಕೆಲವರು ಮಕ್ಕಳಾದಿಯಾಗಿ ಪ್ರಬಲ ಜಾತಿಗಳ ಜಮೀನಿನಲ್ಲಿ ಮತ್ತು ಮನೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಇನ್ನೂ ಇವರಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರ ಸ್ಥಿತಿ ಹೇಳತೀರದು. ಇವರು ತಾಂತ್ರಿಕ ಕಾರಣಗಳಿಂದಾಗಿ ತಮ್ಮ ಕೃಷಿ ಪದ್ಧತಿಗೆ ಹೊಸ ಆಧುನಿಕ ತಂತ್ರಜ್ಞಾನವನ್ನ ಅಳವಡಿಸಲು ಸಾಧ್ಯವಾಗುವುದಿಲ್ಲ. ಜೊತೆಗೆ ನೀರಾವರಿ ಸೌಲಭ್ಯವನ್ನ ಕಲ್ಪಿಸಲು ಸಾಧ್ಯವಿಲ್ಲ. ಇದಲ್ಲದೆ ತಾಂತ್ರಿಕ ಕಾರಣ ನೀಡಿ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಸಾಲ ನೀಡುವುದಿಲ್ಲ. ಇತ್ತೀಚೆಗೆ ವರುಣನ ಅವಕೃಪೆಯಿಂದಾಗಿ ಕೃಷಿಯಲ್ಲಿ ಉತ್ಪಾದನೆ ಸ್ಥಗಿತವಾಗುತ್ತಿದೆ.

**ಕೋಷ್ಟಕ: ೭.೨ ಸಮೀಕ್ಷೆಗೊಳಪಟ್ಟವರ ಉದ್ಯೋಗದ ಶೇಕಡಾವಾರು ಸ್ಥಾನಮಾನ**

| ಸಂ. | ಉದ್ಯೋಗ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಕೃಷಿ | ೩೯.೪೪ | ೧೯.೦೮ | ೩೨.೧೫ |
| ೨ | ಕೃಷಿ ಕಾರ್ಮಿಕ | ೩೧.೧೧ | ೫೯.೭೭ | ೪೧.೩೭ |
| ೩ | ಸರ್ಕಾರಿ ಸೇವೆ | ೧.೨೮ | ೦.೦೦ | ೦.೮೨ |
| ೪ | ವ್ಯಾಪಾರ | ೧.೨೮ | ೦.೪೬ | ೦.೯೯ |
| ೫ | ಜಾನಪದ ಕಲಾವಿದ | ೦.೩೮ | ೦.೨೩ | ೦.೩೩ |
| ೬ | ಪಶುಸಂಗೋಪನೆ | ೨೬.೫೦ | ೨೦.೪೬ | ೨೪.೩೪ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ಪ್ರಸ್ತುತ ಸಮೀಕ್ಷೆಯ ಪ್ರಕಾರ (ಕೋಷ್ಟಕ:೭.೨) ಶೇಕಡಾ ೪೧.೩೭ ರಷ್ಟು ಜನರು ಇನ್ನೂ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ ಎಂಬುದು ಇವರ ಬಡತನವನ್ನು

ತೋರಿಸುತ್ತದೆ. ಇವರಲ್ಲಿ ಶೇಕಡಾ ೬೦ ರಷ್ಟು ಮಹಿಳೆಯರು ಕೃಷಿ ಕಾರ್ಮಿಕರಾಗಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ. ಉಳಿದಂತೆ ಶೇಕಡಾ ೩೨.೧೫ ರಷ್ಟು ಜನ ಕೃಷಿಯನ್ನು ಅವಲಂಬಿಸಿರುವುದರಿಂದ, ಇವರು ಕೃಷಿಕರಾಗಿದ್ದರೂ ಸಣ್ಣ ಹಿಡುವಳಿ ದಾರರಾಗಿದ್ದು ಹಲವಾರು ನ್ಯೂನ್ಯತೆಗಳಿಂದ ಬಳಲುತ್ತಿದ್ದಾರೆ. ಅಂದರೆ ಸಣ್ಣ ಮತ್ತು ಅತೀ ಸಣ್ಣ ರೈತರು ಈ ಸಮುದಾಯದಲ್ಲಿದ್ದು ಕೃಷಿಯು ಇವರಿಗೆ ಸಹಾಯಕ ವಾಗುವುದಿಲ್ಲ. ಆದ್ದರಿಂದ ಇವರು ಆರ್ಥಿಕ ಸಂಕಷ್ಟಕ್ಕೆ ಇಡಾಗಿ ಬಡವರಾಗಿಯೇ ಉಳಿಯುತ್ತಾರೆ.

### ಭೂಒಡೆತನ

ಪ್ರಸ್ತುತ ಸಮೀಕ್ಷೆಯ ಪ್ರಕಾರ ೪೦೦ ಕುಟುಂಬಗಳಲ್ಲಿ ಶೇಕಡಾ ೩೫.೨೫ ರಷ್ಟು ಜನರು ಭೂರಹಿತ ಕುಟುಂಬದವರಿದ್ದಾರೆ. ಶೇಕಡಾ ೩೬ ರಷ್ಟು ಅತಿ ಸಣ್ಣ ರೈತರಿದ್ದರೆ, ಶೇಕಡಾ ೧೯.೫೦ ರಷ್ಟು ಜನ ಸಣ್ಣ ರೈತರಾಗಿದ್ದಾರೆ. ಶೇಕಡಾ ೯ ರಷ್ಟು ಜನರು ಅತಿ ಮಧ್ಯಮ ಮತ್ತು ಮಧ್ಯಮ ಹಂತದ ರೈತರು ಈ ಸಮುದಾಯದಲ್ಲಿ ಕಂಡು ಬರುತ್ತಾರೆ.

ಕೋಷ್ಟಕ: ೭.೩. ಭೂ ಒಡೆತನ

| ಕ್ರಸಂ. | ಭೂ ಹಿಡುವಳಿದಾರರ ಶ್ರೇಣಿ | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಎ=ದೊಡ್ಡ ರೈತರು | ೨ | ೦.೫೦ |
| ೨ | ಬಿ– ಮಧ್ಯಮ ರೈತರು | ೮ | ೨.೦೦ |
| ೩ | ಸಿ– ಅರೆ ಮಧ್ಯಮ ರೈತರು | ೨೭ | ೬.೭೫ |
| ೪ | ಡಿ– ಸಣ್ಣ ರೈತರು | ೭೮ | ೧೯.೫೦ |
| ೫ | ಇ– ಅತಿ ಸಣ್ಣ ರೈತರು | ೧೪೪ | ೩೬.೦೦ |
| ೬ | ಭೂ ರಹಿತ ರೈತರು | ೧೪೧ | ೩೫.೨೫ |
| | ಒಟ್ಟು | ೪೦೦ | ೧೦೦.೦೦ |

ಎಲ್ಲಕ್ಕಿಂತ ಮುಖ್ಯವಾದ ಅಂಶವೇನೆಂದರೆ ಶೇಕಡಾ ೦.೫೦ ಅಂದರೆ ಶೇಕಡಾ ಒಂದಕ್ಕಿಂತ ಕಡಿಮೆ ದೊಡ್ಡ ಹಿಡುವಳಿದಾರರು ಈ ಸಮುದಾಯದಲ್ಲಿ ಕಂಡು ಬರುತ್ತಾರೆ. ಅಂದರೆ ದೊಡ್ಡ ರೈತರ ಸಂಖ್ಯೆ (ಹೆಚ್ಚಿಗೆ ಜಮೀನು ಇರುವವರು) ಈ ಸಮುದಾಯದಲ್ಲಿ ಇರುವುದಿಲ್ಲದಿರುವುದು. ಇದರಿಂದ ತಿಳಿದು ಬರುವುದೇನೆಂದರೆ ಕಾಡುಗೊಲ್ಲರಲ್ಲಿ ಬಹುತೇಕ ಜನರು ಕೃಷಿ ಕಾರ್ಮಿಕರು, ಸಣ್ಣ ಮತ್ತು ಅತೀ ಸಣ್ಣ ರೈತರಾಗಿದ್ದಾರೆ. ಇದು ಇವರ ಆರ್ಥಿಕ ಹಿಂದುಳಿದಿರುವಿಕೆಯನ್ನು ತೋರಿಸುತ್ತದೆ.

### ಇತರೆ ಕಸುಬುಗಳು

ಕುರಿಸಾಕಣೆ, ಪಶುಪಾಲನೆ ಮತ್ತು ಕೃಷಿ ಜೊತೆಗೆ ಕಾಡುಗೊಲ್ಲರು ಸಣ್ಣ–ಪುಟ್ಟ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಸಾಮಾನ್ಯವಾಗಿ ಊರು ಮತ್ತು ಪಟ್ಟಣಗಳಲ್ಲಿ ವಾರಕ್ಕೊಮ್ಮೆ ಜರುಗುವ ಕುರಿ ಸಂತೆ ಮತ್ತು ದನಗಳ ಜಾತ್ರೆಯಲ್ಲಿ ಕಾಡುಗೊಲ್ಲ

ಸಮುದಾಯದವರೆ ಅತೀ ಹೆಚ್ಚು ಜನರು ಕಂಡು ಬರುತ್ತಾರೆ. ಇವರು ಕುರಿ, ದನ ಮತ್ತು ಕೋಳಿಗಳ ವ್ಯಾಪಾರವನ್ನು ತಮ್ಮ ಉಪವೃತ್ತಿಯನ್ನಾಗಿಸಿಕೊಂಡಿದ್ದಾರೆ. ಆದರೆ ಇವರಲ್ಲಿ ದೊಡ್ಡ ವ್ಯಾಪಾರಸ್ಥರು ಕಂಡು ಬರುವುದಿಲ್ಲ. ಹಿಂದುಳಿದಿರುವಿಕೆ ಮತ್ತು ಅನಕ್ಷರತೆಯಿಂದಾಗಿ ನಗರಗಳಲ್ಲಿ ವ್ಯವಹರಿಸುವ ಜ್ಞಾನ ಇನ್ನೂ ಬಂದಿಲ್ಲ ಎನ್ನಬಹುದು. ಆದರೆ ಈಗೀಗ ತಾವು ಬೆಳೆದ ಆಹಾರ ಧಾನ್ಯ ಮತ್ತು ವಾಣಿಜ್ಯ ಬೆಳೆಗಳನ್ನು ಪಕ್ಕದ ಪಟ್ಟಣ ಅಥವಾ ನಗರಕ್ಕೆ ಕೊಂಡೊಯ್ದು ಮಾರುತ್ತಾರೆ. ಕೆಲವು ಕಡೆ, ತೆಂಗಿನಕಾಯಿ, ಮಾವಿನಹಣ್ಣು, ಅಡಿಕೆ ಮುಂತಾದ ವ್ಯಾಪಾರಗಳಲ್ಲಿ ಸ್ವಲ್ಪಮಟ್ಟಿಗೆ ತೊಡಗಿಸಿಕೊಳ್ಳುತ್ತಿದ್ದಾರೆ.

ಕಾಡುಗೊಲ್ಲ ಸಮುದಾಯ ನಿಧಾನಗತಿಯಲ್ಲಿ ಔಪಚಾರಿಕ ಶಿಕ್ಷಣ ಪಡೆಯುತ್ತಿದ್ದು, ಕೆಲವೇ ಕೆಲವು ಮಂದಿ ಸರ್ಕಾರಿ ನೌಕರಿಯನ್ನು ಪಡೆಯುತ್ತಿದ್ದಾರೆ. ಆದರೆ ಅಂತಹವರ ಸಂಖ್ಯೆ ಅತ್ಯಂತ ವಿರಳವಾಗಿದೆ.



# ೮

# ಸಾಹಿತ್ಯ ಮತ್ತು ಭಾಷೆ

## ಪುರಾಣಗಳು

ಒಂದು ಬುಡಕಟ್ಟಿನ ಜನರಿಗೆ ಸಂಬಂಧಿಸಿದಂತೆ ಇತಿಹಾಸ ಮಾಡುವ ಕೆಲಸವೇ ಬೇರೆ; ಪುರಾಣ ಮಾಡುವ ಕೆಲಸವೇ ಬೇರೆ. ಬುಡಕಟ್ಟಿನ ಜನಜೀವನ ಕಾಲದಿಂದ ಕಾಲಕ್ಕೆ ಹೇಗೆ ಬದಲಾಗಿದೆ ಎಂಬುದರ ತಿಳುವಳಿಕೆಯನ್ನು ಇತಿಹಾಸ ತಂದು ಕೊಡುತ್ತದೆ. ಆದರೆ ಪುರಾಣದ ಉದ್ದೇಶ ಇತಿಹಾಸ ತಂದು ಕೊಟ್ಟಂತಹ ತಿಳುವಳಿಕೆಯನ್ನು ತಂದು ಕೊಡುವುದಿಲ್ಲ. ಬುಡಕಟ್ಟಿನ ಅಸ್ತಿತ್ವಕ್ಕೆ ಅಗತ್ಯವಾದ ಕ್ರಿಯೆಯನ್ನು ಸೂಚಿಸುವುದು. ಈ ಕಾರಣದಿಂದಾಗಿ ಬುಡಕಟ್ಟಿನ ಜನರಿಗೆ ತಮ್ಮ ಇತಿಹಾಸಕ್ಕಿಂತಲೂ ತಮ್ಮ ಪುರಾಣಗಳು ಪ್ರಮುಖವಾಗುತ್ತವೆ; ಜನಜೀವನಕ್ಕೆ ಹೆಚ್ಚು ಹತ್ತಿರವಾಗುತ್ತವೆ. ಆ ಮೂಲಕ ಹೆಚ್ಚು ಆತ್ಮಿಯವಾಗುತ್ತವೆ. ಹೀಗಾಗಿ ಬುಡಕಟ್ಟಿನ ಜನ ತಮ್ಮ ಬುಡಕಟ್ಟಿನ ಪುರಾಣಗಳನ್ನು ತಿಳಿದಿರುತ್ತಾರೆ(ಶಂಕರನಾರಾಯಣ, ತೀ ನಂ:೧೯೮೨:೫೩).

ಬುಡಕಟ್ಟಿನ ಜನಕ್ಕೆ ಜನಪದ ಕಥೆಗಳಿಗಿಂತ (folk tales) ಐತಿಹ್ಯಗಳು (legends) ಹೆಚ್ಚು ಆತ್ಮೀಯವಾಗುತ್ತವೆ; ಐತಿಹ್ಯಗಳಿಗಿಂತ ಪುರಾಣಗಳು ಹೆಚ್ಚು ಆತ್ಮೀಯವಾಗುತ್ತವೆ. ಒಂದು ಬುಡಕಟ್ಟಿನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಆ ಬುಡಕಟ್ಟಿನ ಜನಪದ ಕಥೆಗಳಿಗಿಂತ, ಐತಿಹ್ಯಗಳು ಮತ್ತು ಪುರಾಣಗಳು ಹೆಚ್ಚು ಸಹಕಾರಿಯಾಗುತ್ತವೆ (ಅವರೇ: ೧೯೮೨: ೫೩–೫೪).

ಬುಡಕಟ್ಟಿನ ಹಟ್ಟಿಯವರೆಲ್ಲಾ ಸಾಂಸ್ಕೃತಿಕ ವೀರರ ಹೆಸರನ್ನು ಇಟ್ಟುಕೊಳ್ಳುವುದರ ಮೂಲಕ, ಹಟ್ಟಿಯೊಳಗೆ ಗುಡಿ ಸ್ಥಾಪನೆಯ ಮೂಲಕ ತಮ್ಮ ವೀರನ ನೆನಪನ್ನು ಉಳಿಸಿಕೊಳ್ಳುತ್ತಾರೆ. ಅವರಿಗೆ ತಮ್ಮ ವೀರನ ಪುರಾಣ ಕಥೆಯೇ ಇತಿಹಾಸ ದಿನನಿತ್ಯ ಜರುಗುವ ಘಟನೆಗಳು ಅವರಿಗೆ ಇತಿಹಾಸವಲ್ಲ. ಕಾಡುಗೊಲ್ಲರ ಪ್ರಮುಖ ಸಾಂಸ್ಕೃತಿಕ ವೀರನಾದ ಜುಂಜಪ್ಪನ ಕಥೆಯ ಒಂದೊಂದು ಅಂಶವೂ ಅವರಿಗೆ ಸತ್ಯ ಘಟನೆ. ಹೀಗಾಗಿ ಬುಡಕಟ್ಟು ಅಥವಾ ಗ್ರಾಮೀಣ ಜನ ಇತಿಹಾಸ ಎಂದು ತಿಳಿದಿರುವ ಸಂಗತಿಗಳೇ ಶಿಷ್ಟರಿಗಿಂತ ಬೇರೆಯಾಗುತ್ತವೆ. ಹಾಗಾಗಿ ಕಾಡುಗೊಲ್ಲರ ಸಾಂಸ್ಕೃತಿಕ ವೀರರು ಸದಾ ಅವರ ನಡುವೆ ಬದುಕಿಯೇ ಇರುತ್ತಾರೆ. ಬದುಕಿ ಪೂಜೆಗೊಳ್ಳುತ್ತಿರುತ್ತಾರೆ. ತಮ್ಮ ಪ್ರತಿಯೊಂದು ಆಗು ಹೋಗುಗಳಿಗೂ ಜುಂಜಪ್ಪನ ಅನುಮತಿಯನ್ನು ಬೇಡುತ್ತಾರೆ.

ಜುಂಜಪ್ಪನ ಬದುಕಿನ ಅನೇಕ ಘಟನೆಗಳು ನಂಬಿಕೆಗಳು ಕಾಡುಗೊಲ್ಲರ ಬದುಕನ್ನು ನಾನಾ ರೀತಿಯಲ್ಲಿ ನಿಯಂತ್ರಿಸುತ್ತಲೇ ಇರುತ್ತದೆ. ಹೀಗಾಗಿ ಶಿಷ್ಟ ಅಥವಾ ಜಾನಪದ ಜಗತ್ತಿನ ಸಂಸ್ಕೃತಿಯ ಮೂಲ ಅದರ ಒಂದು ಘಟ್ಟದಲ್ಲಿ ಬದುಕಿನ ಶಾಸನಗಳಾಗಿ, ಕಾನೂನುಗಳಾಗಿ ಕೆಲಸ ಮಾಡುತ್ತವೆ (ಕೃಷ್ಣಮೂರ್ತಿ ಹನೂರು:೧೯೮:೮೪೧).

ಕಾಡುಗೊಲ್ಲರ ಸಂಸ್ಕೃತಿ, ಇತಿಹಾಸ ಮತ್ತು ಪರಂಪರೆಯನ್ನು ಪುರಾಣಗಳು ಹೇಳುತ್ತವೆ. ಕಾಡುಗೊಲ್ಲರಲ್ಲಿ ಜುಂಜಪ್ಪನ ಪುರಾಣ, ಚಿತ್ರದೇವರ ಪುರಾಣ, ಎತ್ತಯ್ಯನ ಪುರಾಣ, ಕಾಟಮದೇವರ ಪುರಾಣ, ಕೇತೇದೇವರ ಪುರಾಣ, ಪಾತೇದೇವರ ಪುರಾಣಗಳು ಮುಖ್ಯವಾದವು. ಇವು ಕಾಡುಗೊಲ್ಲರಿಗೆ ಅತ್ಯಂತ ಪವಿತ್ರವಾದವುಗಳು.

ಜುಂಜಪ್ಪನ ಪುರಾಣದಲ್ಲಿ ದೇವರ ದಯಾಮಾರನ ಕಥೆ, ಕೆಂಗುರಿ ಮಲ್ಲಪ್ಪನ ಕಥೆ, ಜುಂಜಪ್ಪನ ಹುಟ್ಟು ಮತ್ತು ಬಾಲ್ಯಗಳು ಬರುತ್ತವೆ. ಹಾಗೆಯೇ ಜುಂಜಪ್ಪನ ಸಾಹಸಗಳಲ್ಲಿ ಬಡಮ್ಮೈಲನನ್ನು ಸಂಪಾದಿಸಿದ ಪ್ರಸಂಗ, ಮರಡಿ ರಂಗಣ್ಣನಿಗೆ ಬುದ್ಧಿಕಲಿಸಿದ ಪ್ರಸಂಗ, ಬೇಳೂರು ರಂಗಣ್ಣನನ್ನು ಸೋಲಿಸಿದ ಪ್ರಸಂಗ, ತಾಳೆದುರ್ಗಿಯನ್ನು ಕೊಂದ ಪ್ರಸಂಗ, ಜಾನುಕಲ್ಲು ದೊಡ್ಡಕ್ಕನಿಗೆ ಬುದ್ಧಿಕಲಿಸಿದ ಪ್ರಸಂಗ ಮುಂತಾದ ಪ್ರಸಂಗಗಳು ಬರುತ್ತವೆ. ಹೀಗೆ ಪ್ರತಿಯೊಂದು ಪುರಾಣಗಳಲ್ಲಿ ಕಾಡುಗೊಲ್ಲರ ಪಶುಪಾಲನಾ ವೃತ್ತಿ, ಸಂಸ್ಕೃತಿ, ಸಾಹಸ, ಗಟ್ಟಿತನ, ವೀರಗಾಥೆ, ಸಾಮಾಜಿಕ ನ್ಯಾಯ ಮುಂತಾದ ಅಂಶಗಳು ಬಿಂಬಿತವಾಗುತ್ತಾ ಹೋಗುತ್ತವೆ. ಅಲ್ಲದೆ ಇತಿಹಾಸವನ್ನು ತಿಳಿಸುತ್ತಾ ಹೋಗುತ್ತವೆ.

**ಐತಿಹ್ಯ**

ಒಂದು ಬುಡಕಟ್ಟಿನ ಹುಟ್ಟು ಮತ್ತು ಇತಿಹಾಸವನ್ನು ತಿಳಿಸುವಲ್ಲಿ ಐತಿಹ್ಯಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಕಾಡುಗೊಲ್ಲರ ಪ್ರಮುಖ ಐತಿಹ್ಯಗಳಲ್ಲಿ (legends) ಕಾಡುಗೊಲ್ಲರು ದೆಹಲಿಯಿಂದ ಹೊರಟು ಬಂದ ಪ್ರಸಂಗ, ರಾಮೇಗೌಡನ ಕುಲಕ್ಕೆ ಸಂಬಂಧಿಸಿದ ಪ್ರಸಂಗ, ಅಥವಾ ಐತಿಹ್ಯ ಕರಡಿ ಬುಳ್ಳಪ್ಪನ ಐತಿಹ್ಯ, ಮಾರನವರ ಗೊಲ್ಲರಿಗೆ ಸಂಬಂಧಿಸಿದ ಐತಿಹ್ಯಗಳು ಮುಖ್ಯವಾದವುಗಳು. ಈ ಎಲ್ಲಾ ಐತಿಹ್ಯಗಳು ಕಾಡುಗೊಲ್ಲ ಸಮುದಾಯದ ಹುಟ್ಟಿನ ಮತ್ತು ವಲಸೆಯ ಪ್ರಸಂಗವನ್ನು ಹೇಳುತ್ತವೆ. ಸಮುದಾಯದ ಮೂಲದ ಬಗ್ಗೆ ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಆದರೂ ಸಂಕ್ಷಿಪ್ತವಾದ ಈ ಸಮುದಾಯದ ಮುಖ್ಯ ಐತಿಹ್ಯವೆಂದರೆ ಕಾಡುಗೊಲ್ಲ ಸಮುದಾಯದವರು ದೆಹಲಿ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಆಗ ಮೊಗಲರ ಉಪಟಳ ಅಥವಾ ಹಿಂಸೆ ತಾಳಲಾರದೆ ಬುಡಕಟ್ಟಿನ ಪ್ರಮುಖರನ್ನೊಳಗೊಂಡಂತೆ ದಕ್ಷಿಣ ಭಾರತದ ಕಡೆ ವಲಸೆ ಬಂದರು ಎಂಬುದಾಗಿ ಐತಿಹ್ಯಗಳು ಹೇಳುತ್ತವೆ. ನಂತರ ಕರ್ನಾಟಕದ ಮಧ್ಯ ಭಾಗಕ್ಕೆ ಬಂದು ವಿಜಯನಗರ ಆಸುಪಾಸಿನಲ್ಲಿ ವಾಸಿಸಲು ಪ್ರಾರಂಭಿಸಿದರು. ನಂತರ ಮುಖ್ಯಸ್ಥರ ಕುಟುಂಬಗಳು ರಾಜ್ಯದ ವಿವಿಧ ಭಾಗಗಳಿಗೆ ಸ್ಥಳಾಂತರಗೊಂಡವು ಎಂಬುದಾಗಿ ಐತಿಹ್ಯಗಳು ಹೇಳುತ್ತವೆ. ಇಲ್ಲಿ

ಮುಖ್ಯವಾಗಿ ಬರುವ ಅಂಶವೇನೆಂದರೆ ಚಿತ್ತಮುತ್ತಿ ಮತ್ತು ಚಂದಮುತ್ತಿ ಹಾಗೂ ರಾಮೇಗೌಡನ ಕುಲಗಳು ಹೇಗೆ ಹುಟ್ಟಿದವು ಎಂಬುದನ್ನು ಈ ಐತಿಹ್ಯಗಳು ಹೇಳುತ್ತವೆ. ಜೊತೆಗೆ ಕರಡಿಬುಳಪ್ಪನ ಐತಿಹ್ಯವು ಸಹ ಪ್ರಮುಖವಾಗಿದೆ. ಕಾಡುಗೊಲ್ಲರ ಐತಿಹ್ಯಗಳ ಬಗ್ಗೆ ಶ್ರೀ ನಂ ಶಂಕರನಾರಾಯಣರವರು ಸವಿಸ್ತಾರವಾಗಿ ಅವರ ಅಧ್ಯಯನದಲ್ಲಿ ವಿವರಿಸಿದ್ದಾರೆ.

**ಕಥೆಗಳು**

ಕಥೆಗಳು ಕಾಡುಗೊಲ್ಲ ಸಮುದಾಯದ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಹೇರಳವಾಗಿ ಕಂಡುಬರುತ್ತವೆ. ಅವುಗಳಲ್ಲಿ ಜುಂಜಪ್ಪನ ಕಥೆ, ಚಿತ್ತಯ್ಯನ ಕಥೆ, ಎತ್ತಪ್ಪನ ಕಥೆ ಮುಂತಾದವುಗಳು. ಜುಂಜಪ್ಪನ ಕಥೆ ಮೂರು ತಲೆಮಾರುಗಳ ಕಥೆ. ಜುಂಜಪ್ಪನ ತಾತ ದೇವರ ದಯಾಮಾರ, ಕೊಂಕಿ ಜರಿಮಲೆ ಸೀಮೆಯ ಚಿಕ್ಕದ್ಯಾವರ ಹಟ್ಟಿಯಲ್ಲಿ ಬಿಕ್ಕದೆಲೆ ಚಿತ್ತಯ್ಯ, ಬಿರಿದೆಲೆ ಚಿತ್ತಯ್ಯ, ಮಾಪಲ್ಲಿ ಚಿತ್ತಯ್ಯ, ಪೂಜಾರಿ ಚಿತ್ತಯ್ಯ, ಘನಗುಡಿ ಚಿತ್ತಯ್ಯ, ದೇವರ ದಯಾಮಾರ ಎಂಬ ಏಳು ಜನ ಅಣ್ಣ ತಮ್ಮಂದಿರಲ್ಲಿ ಕೊನೆಯವನಾದ ದೇವರ ದಯಾಮಾರನಿಗೆ ಕೊಟ್ಟು ಮದುವೆ ಮಾಡಿದರು. ಅವನ ಮದುವೆಯ ದಿನವೇ ದನಗಳ ಗೂಡಿಗೆ ಹಿಂದಿರುಗಿಬಿಟ್ಟಿದ್ದರಿಂದ ಕಠಾರಿಗೆ ಕಂಬಕ್ಕನನ್ನು ಮದುವೆ ಮಾಡಿದರು. ಸ್ವಲ್ಪ ಕಾಲದ ನಂತರ ದೇವರ ದಯಾಮಾರನಿಗೂ ಕಂಬಕ್ಕನಿಗೂ ಒಂದು ಗಂಡು ಮಗುವಯಿತು. ಮಗುವಾದ ನಂತರ ಇವರಿಬ್ಬರೂ ತೀರಿಕೊಂಡರು. ಈ ಮಗುವನ್ನು ಬಡಚಿತ್ತಮ್ಮನೇ ಸಾಕಬೇಕಾಗಿ ಬಂತು. ಈ ಮಗುವೇ ಕೆಂಗುರಿ ಮಲ್ಲಪ್ಪನೆಂದಾಯಿತು. ಈ ಮಗು ತನ್ನ ತಾಯಿ ಹಾಗೂ ದೊಡ್ಡಪ್ಪಂದಿರ ಮನೆಗೆ ಬಂದ ಮೇಲೆ ಅವರ ಸ್ಥಿತಿಗತಿಗಳು ಉತ್ತಮವಾದವು. ಕೆಂಗುರಿ ಮಲ್ಲೇಗೌಡ ಬೆಳೆದು ದೊಡ್ಡವನಾದ ಮೇಲೆ ಚಿನ್ನಮ್ಮನೊಡನೆ ಮದುವೆ ಯಾಯಿತು. ಚಿನ್ನಮ್ಮ ಜುಂಜಪ್ಪನಿಗೆ ಜನ್ಮ ನೀಡಿದಳು. ಜುಂಜಪ್ಪ ತನ್ನ ಜೀವನದಲ್ಲಿ ಅನೇಕ ಸಾಹಸಗಳನ್ನು ಎಸಗಿ ಕಾಡುಗೊಲ್ಲರ ನಡುವೆ ತಾನು ಆರಾಧ್ಯ ದೈವವೆನಿಸಿ ಕೊಂಡ, ಜುಂಜಪ್ಪ ಈಶ್ವರನ ಮಗ ವೀರಭದ್ರನ ಅವತಾರವೆನಿಸಿಕೊಂಡ. ಈತನ ಏಳಿಗೆಯನ್ನು ಸಹಿಸಲಾಗದ ದಾಯಾದಿಗಳು ಜುಂಜಪ್ಪನ ಬದುಕಿನಲ್ಲಿ ಅನೇಕ ಅಡೆತಡೆಗಳನ್ನು ಒಡ್ಡುತ್ತಾರೆ. ಒಂದು ವಿಧದಲ್ಲಿ ಈ ಕಥೆ ಗ್ರಾಮೀಣ ಮಹಾಭಾರತದಂತೆ ತೋರುತ್ತದೆ. ಅನೇಕ ಶಿಷ್ಟ ಕಥೆಯ ಆಶಯಗಳು ಈ ಜುಂಜಪ್ಪನ ಕಥೆಯಲ್ಲಿದ್ದು, ಕಥೆ ತನ್ನಪಾಡಿಗೆ ತಾನೇ ಪ್ರತ್ಯೇಕವಾಗಿ ಹೆಣೆದುಕೊಂಡು ಹೋಗಿದೆ (ಕೃಷ್ಣಮೂರ್ತಿ ಹನೂರು:೧೯೯೮: ೮೪೧–೮೪೨). ಹೀಗೆ ಜುಂಜಪ್ಪನ ಕಥೆಯಿಂದ ಪ್ರಾರಂಭವಾಗಿ ಹತ್ತು ಹಲವು ಕಾಡುಗೊಲ್ಲರ ಸಾಂಸ್ಕೃತಿಕ ವೀರರ ಕಥೆಗಳು ಹಲವು ಸಾಹಸಗಾಥೆಗಳನ್ನು ಹೇಳುತ್ತವೆ. ಸಾಮಾನ್ಯವಾಗಿ ಕಾಡುಗೊಲ್ಲರ ಮಹಾಕಾವ್ಯಗಳಲ್ಲಿ, ಪುರಾಣಗಳಲ್ಲಿ, ಐತಿಹ್ಯಗಳಲ್ಲಿ ಬರುವ ಕಥೆಗಳು ಬೇರೇ ಇನ್ನಾವುದೇ ಬುಡಕಟ್ಟು ಸಮುದಾಯದಲ್ಲಿ ಬರುವುದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಈ ಕಥೆಗಳು ಈ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆಯ ದ್ಯೋತಕವಾಗಿವೆ.

ಕಾವ್ಯ

ಕಾಡುಗೊಲ್ಲರಿಗೆ ಸಂಬಂಧಪಟ್ಟ ಕಾವ್ಯಗಳಲ್ಲಿ ಜುಂಜಪ್ಪ, ಎತ್ತಪ್ಪನ ಕಾವ್ಯಗಳು ಬಹಳ ಪ್ರಮುಖವಾದಂತಹಗಳು. ಅದರಲ್ಲಿಯೂ ಜುಂಜಪ್ಪನ ಕಾವ್ಯವನ್ನು ಮಹಾಕಾವ್ಯವೆಂದು ಕರೆಯುತ್ತಾರೆ. ಜುಂಜಪ್ಪನ ಕಾವ್ಯವನ್ನು ಗಣೆಯ ಮೂಲಕ ಹೇಳಲಾಗುತ್ತದೆ. ಇದಕ್ಕೆ ಸಂಬಂಧಪಟ್ಟಂತೆ ಕೆಲವು ದಾಖಲಾತಿಯ ಕಾರ್ಯಗಳು ಹಂಪಿ ಕನ್ನಡ ವಿಶ್ವವಿದ್ಯಾಲಯದ ವತಿಯಿಂದ ನಡೆದಿದೆ.

ಜುಂಜಪ್ಪನ ಕಾವ್ಯದಲ್ಲಿ ಎರಡು ಅಂಶಗಳು ಮುಖ್ಯವಾಗುತ್ತವೆ. ಒಂದು ಕಡೆ ಈ ಗೊಲ್ಲರನ್ನು ಸಹಿಸದ ಬೇಟೆಗಾರ ಸಮೂಹ ಮತ್ತೊಂದು ಕಡೆ ಇವರ ಹುಲ್ಲುಗಾವಲುಗಳನ್ನು ಕ್ರಮೇಣ ಬೇಸಾಯ ಭೂಮಿಯಾಗಿ ಪರಿವರ್ತಿಸುತ್ತಾ ಬಂದ ಕೃಷಿ ವರ್ಗಗಳು ಇವರ ನಡುವೆ ತಮ್ಮ ಅಸ್ತಿತ್ವಕ್ಕಾಗಿ ಪರದಾಡುವಂತೆ ಕಂಡು ಬರುವುದು ಒಂದು ಅಂಶವಾದರೆ, ತಮ್ಮದೇ ಕುಲದ ಇತರೆ ಬೆಡಗುಗಳ ಅಸೂಯೆಯನ್ನು ಗೆಲ್ಲುವುದು ಮತ್ತೊಂದು ಅಂಶ. ಮಾರನವರ ಗೊಲ್ಲರ ದನಗಳು ಬೆಳೆದು ಹೆಚ್ಚಾಗುವುದನ್ನು ಕಂಬೀರ ಗೊಲ್ಲರು ಸಹಿಸುವುದಿಲ್ಲ. ಜುಂಜಪ್ಪನಿಗೂ ಜುಂಜಪ್ಪನ ಸೋದರ ಮಾವಂದಿರಿಗೂ ಸದಾ ನಡೆಯುವ ಹೋರಾಟ ಇಂಥದ್ದೇ (ಚಲುವರಾಜು: ೧೯೯೭).

ಜುಂಜಪ್ಪನ ಕಾವ್ಯ ಈ ಎರಡು ಪಾತಳಿಗಳಲ್ಲಿ ಹರಿಯುತ್ತಾ ಹೋಗುತ್ತದೆ. ಕೇವಲ ದನಗಳನ್ನು ನಂಬಿಕೊಂಡು, ಅವುಗಳನ್ನು ಮೇಯಿಸುವ ಕಾಯಕಕ್ಕಾಗಿ ಕಾಡು ಮೇಡು ಅಲೆಯುವ ಅಲೆಮಾರಿ ಜನವರ್ಗವೊಂದರ ಅತಂತ್ರ ಸ್ಥಿತಿಯ ಪ್ರತೀಕವಾಗಿ ಜುಂಜಪ್ಪ ಕಾಣಿಸಿಕೊಳ್ಳುತ್ತಾನೆ. ಅನೇಕ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುವ ಜುಂಜಪ್ಪನ ಅನಾಥತೆ ಕಾಡಿನ ಮಕ್ಕಳ ಕಡುಬಡತನವನ್ನು ನಿವೇದಿಸುತ್ತದೆ. ಮದುವೆಯಾದರೆ ಹೆಂಡತಿಯೊಡನೆ ಕೂಡಿ ಬಾಳಲಾಗದ ಜುಂಜಪ್ಪನ ಪಾತ್ರ ದೇವರ ದಯಾಮಾರನ ಸ್ಥಿತಿ ಈ ಅಲೆಮಾರಿಗಳ ಸುಖವಿಲ್ಲದ ಬದುಕನ್ನು ಚಿತ್ರಿಸುತ್ತದೆ. ಬಹುಶಃ ಈ ಸ್ಥಿತಿಯೇ ಹೆಣ್ಣುಮಕ್ಕಳನ್ನು ಅನುಮಾನಿಸುವ ಮಾನಸಿಕ ಕ್ಲೇಶಕ್ಕೂ ಒಳಗೂ ಮಾಡುತ್ತದೆ. ತನ್ನ ತಂದೆಯ ಅನುಪಸ್ಥಿತಿಯಲ್ಲಿ ಮಕ್ಕಳನ್ನು ಹೆತ್ತ ಜುಂಜಪ್ಪನ ತಾಯಿಯನ್ನು ಸ್ವತಃ ಜುಂಜಪ್ಪನೇ ಅನುಮಾನಿಸಿ ಹಲವು ಪರೀಕ್ಷೆಗಳಿಗೆ ಒಡ್ಡುತ್ತಾನೆ. ಹೆರಿಗೆಯಾದ ಹೆಣ್ಣುಮಗಳು ಮೂರು ತಿಂಗಳ ಕಾಲ ಪ್ರತ್ಯೇಕವಾಗಿ ಒಂಟಿ ಗುಡಿಸಲಲ್ಲಿ ಬಾಳಬೇಕಾದ ದಾರುಣ ಸ್ಥಿತಿ ಕಾಡುಗೊಲ್ಲರಲ್ಲಿ ಇಂದಿಗೂ ರೂಢಿಯಲ್ಲಿದೆ (ಅವರೇ: ೧೯೯೭).

ಈ ಕಾವ್ಯದ ಮತ್ತೊಂದು ಪ್ರಮುಖ ಅಂಶವೆಂದರೆ ಅವರು ತಮ್ಮ ದನಕರುಗಳಿಗೆ ನೀಡುವ ಪ್ರಾಧಾನ್ಯತೆ, ದನಗಳೇ ಅವರ ಸರ್ವಸ್ವ. ಅವೇ ಅವರ ಮೂಲ ದೈವಗಳು, ನೂರಾರು ರಾಸುಗಳನ್ನು ನೂರಾರು ಹೆಸರುಗಳಲ್ಲಿ ಗುರುತಿಸಿ ತಮ್ಮ 'ಗಣೆ' ಊದಿ ಕರೆಯುವ ಪರಿಯಂತೂ ಮೋಹಕವಾದದ್ದು. ಜುಂಜಪ್ಪನ ಕಾವ್ಯದ ಬಹುಭಾಗವನ್ನು ಆಕ್ರಮಿಸಿಕೊಂಡಿರುವ ಜುಂಜಪ್ಪನ ನೆಚ್ಚಿನ ಹೋರಿ 'ಬಡಮೈಲ' ಕಾಡುಗೊಲ್ಲರು

ತಮ್ಮ ದಿನಗಳಲ್ಲಿ ಇದ್ದ ನಂಬಿಕೆಗೆ ಪ್ರೀತಿಗೆ ಒಂದು ಪ್ರತೀಕ. ಜುಂಜಪ್ಪನ ಕಾವ್ಯ ಇತರ ಕಾವ್ಯಗಳಂತಲ್ಲ. ಮಂತ್ರದ ರೀತಿಯ ವೇಗ ಗದ್ಯ ಹಾಗೂ ದೀರ್ಘವಾಗಿ ಗಮಕದಂತೆ ಹಾಡಬಲ್ಲ ಪದ್ಯ ಈ ಕಾವ್ಯದ ವಿಶೇಷ. ಹಾಗಾಗಿ ಇದಕ್ಕೆ ಗಣೆಯ ಹಿನ್ನೆಲೆ ಇದ್ದರೆ ಸಾಕು. ತಾಳದ ಅಗತ್ಯವಿಲ್ಲ. ಜುಂಜಪ್ಪನ ಕಾವ್ಯದ ಭಾಷೆಯೂ ಅಷ್ಟೆ ಮಧ್ಯ ಕರ್ನಾಟಕದ ಒಂದು ವಿಶಿಷ್ಟ ರೂಪ ಅದಕ್ಕಿದೆ. ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳ ಒಂದು ರೀತಿಯ ಈ ಉಪಭಾಷೆ ಭಾಷಾ ಅಧ್ಯಯನಕಾರರಿಗೆ ಚಿನ್ನದ ಗಣಿ (ಅವರೇ:೧೯೯೭).

ಕಾಡುಗೊಲ್ಲರ ಮಹಾಕಾವ್ಯಗಳು ಹೇಗಿರುತ್ತವೆ ಎಂಬುದನ್ನು ತಿಳಿಯಲು ಚಲುವರಾಜು (೧೯೯೭) ಸಂಗ್ರಹಿಸಿರುವ ಜುಂಜಪ್ಪನ ಬುಡಕಟ್ಟು ಕಾವ್ಯ ಮಾಲೆಯಲ್ಲಿ 'ಸಿತ್ತಯ್ಯ ಕಾಟುಮುಲಿಂಗರ ಹುಟ್ಟಿನ ಸಂದು'ವಿನ ಬಗ್ಗೆ ಈ ಕೆಳಕಂಡ ಕಾವ್ಯವನ್ನು ಕೊಡಲಾಗಿದೆ.

ಸಿತ್ತಯ್ಯ ಕಾಟುಮುಲಿಂಗರ ಹುಟ್ಟಿನ ಸಂದು

ಹರಹರನೆ ಶಂಕರನೆ
ಕೈಲಾಸದಲ್ಲಿ ಶಿವುನು ಪಾರ್ವತಿಯಮ್ಮ
ಮುನ್ನೂರರವತ್ತು ಕೋಟಿ
ಲಿಂಗುನು ಪೂಜೆಮಾಡಿ
ಆಗಲೆ ಊಟಮಾಡಿ
ತಾಂಬುಲ ಹಾಕ್ಕೊಂಡು
ಪಾರ್ವತಿ ಪರಮೇಶ್ವರ ಕೈಲಾಸದಲ್ಲಿ
ಬಾಳೆವನದೊಳಗೆ
ಶಿವನು ಪಾರ್ವತಿಯು
ದಂಪತಿಗಳಮ್ಮ
ತಾಂಬೂಲ ಮೆಲ್ಲುತ
ಸಂತೋಸದಿಂದ ಕುಂತಿದ್ದರಯ್ಯೋ ಶಿವನಿಗೋ ॥

ಕುಂತುಗಂಡಿರುವಾಗ
ಆಗಲೆ ಆವತ್ತು ಸೋಮಾರವಯ್ಯ
ಶಿವಭಕ್ತರು ನರಲೋಕದೊಳಗೆ
ವಿಪರೀತ ಧೂಪುಗಳಾಕಿ ಶಿವುನಿಗೆ
ಪಾದ ಪೂಜೆ ಮಾಡುತ್ತಿದ್ದಾರೊ
ಆಗಲೆ ಪೂಜೆಗಳ ಮಾಡುವಾಗ
ಕೈಲಾಸದಲ್ಲಿ ಶಂಕರನು
ಕುಂತಿರುವ ಸ್ಥಳಕ್ಕೆ ಶಂಕರನೆ
ಧೂಪುದ ಹೊಗೆಯುನೆ

ಹೊರಟೋಗಿತಯೋ
ಪರಮೇಶ್ವರನು ಅರಮನೆ ಹತ್ತಿರಕೆ
ಬಾಳೆ ವನದೊಳಗೆ
ಶಿವನು ಕುಂತಿರುವ ಸ್ಥಳಕೆ
ಭಕ್ತುರು ಮಾಡಿದು ಪೂಜೆ
ಧೂಪಗಂಧವಣ್ಣಾ
ಸ್ವಾಮಿರುವ ಸ್ಥಳಕೆ
ಹೋಗಿತು ಶಂಕರನೆ
ಆಗಾಲೆ ಆಶ್ಚರ್ಯಪಟ್ಟು
ಶಂಕರನು ನಾಂಟ್ಯವನಾಡುತ ನಿಂತಾನು
ಕೈಲಾಸದಲ್ಲಿ ಶಿವನಿಗೋ ॥

ನಾಂಟ್ಯವನಾಡುವಾಗ
ಶಿವನ ಬೆವರಿನೊಳಗೇ
ಬಲಗಡೆ ಭುಜದೊಳಗೆ
ಸಿತ್ತೂರು ಲಿಂಗ ಅಂಬ
ದೇವಾರೊಡೆದಾನೋ
ಪರಮೇಶ್ವರನೆಡಗಡೆ ಭುಜದೊಳಗೆ
ಕಾಟುಮುಲಿಂಗ ಅಂಬೊಲಿಂಗ
ಒಡುದೀತಯೋ ಶಿವನೀಗೋ ॥

ಬಲಗಡೆ ಬಾಗಾದಲ್ಲಿ ಸಿತ್ತುರು ಲಿಂಗ
ಎಂಬ ದೇವರೊಡೆದು
ಮುಂದುಗಡೆ ಕುಂತಾನೋ
ಪರಮೇಶ್ವರನೆಡಗಡೆ ಭಾಗದಲ್ಲಿ
ಕಾಟುಮುಲಿಂಗ
ಅಂಬೋದೇವುರು ಒಡೆದು
ಆಗಲೆ ಎಡಗಡೆ ಪಕ್ಕದಲ್ಲಿ ಕುಂತಾನೋ
ಪರಮೇಶ್ವರ ಪಾರ್ವತಿ ನೋಡಿ
ಸಂತೋಷಪಟ್ಟಾರು
ನೋಡಿದೆಯಾ ದೇವಿ
ನಮ್ಮ ಭಕ್ತುರು
ನಮ್ಮ ಬೆವರಿನೊಳಗೊಡದು ಕುಂತಾರು

ಇವರಿಗೆ ನಾಮ್ಕರಣ
ಏನೊಂದು ಮಾಡಾಬೇಕೆಂದು
ಪರಮೇಶ್ವರ ಕೇಳಿದುನಣ್ಣ
ಪಾರ್ವತಿ ದೇವೀಗೆ
ಪಾರ್ವತಿದೇವಿ
ಸಿತ್ತುರು ದೇವ್ರುರು ಕಾಟುಮ ಲಿಂಗ
ಅಂದು ಹೆಸರಿಟ್ಟಾಳಮ್ಮ
ಅವರಿಬ್ಬರಿಗೂ ಶಿವನಿಗೋ ॥

ಶಿವ್ವನ ಬೆವ್ವರಿನಲ್ಲಿ
ಕೈಲಾಸದಲ್ಲುಟ್ಟಿದುರು
ಸಿತ್ತೈಕಾಟುಮುಲಿಂಗ
ಸಿತ್ತುರು ದೇವುರು ಕಾಟುಮುಲಿಂಗ
ಅಂದು ಹೆಸರಿಟ್ಟಿರು ಶಂಕರನೆ
ಹೆಸರಿಟ್ಟು ಮೂರು ದಿವ್ವಸ
ಕೈಲಾಸದಲ್ಲಿದ್ದರು
ಮೂರು ದಿವ್ವಸುದು ಮೇಲೆ
ಪರಮೇಶ್ವರನಿಗೇಳೋರು
ಕೇಳೋ ತಂದೆ ದೇವಲೋಕದಲ್ಲಿ
ನಾವಿರುವ್ವೋದಿಲ್ಲಾ
ನರಲೋಕಕ್ಕೋಗಿ
ನಾವು ದೇವುತುಗಳಾಗಿ
ನರಲೋಕದೊಳಗೆ
ಆಗಲೆ ನೆಲೆಗೊಂಬ ಬೇಕೆಂದು
ಕಾಟುಮುಲಿಂಗ ಸಿತ್ತುರು ದೇವುರು
ಕೇಳಿದುರಣ್ಣ ಶಿವ್ವನೀಗೋ ॥

ಆಗೂಲಯ್ಯ
ಸೋಮುವಾರದು ದಿನ
ಮುಂಗೋಳಿ ಕೂಗುವಾಗ
ನರಲೋಕಕು ನೀವು
ಇಳಿದೋಗುವಿರಂತೆ
ನಿಮ್ಮಿಗೆ ಬಂಗಾರುದು ರಥವನು

ತಯ್ಯಾರು ಮಾಡು
ಅದರೊಳಗೈದು ಪಂಚೈದು ಕಳಸುಗಳೋ
ರಥವನು ಹೊಡೆಯದಕ್ಕೊಬ್ಬ
ಓಬಳುಪತಿಯನು
ತಯ್ಯಾರು ಮಾಡಿದುರಣ್ಣ ಕೈಲಾಸದಲ್ಲಿ ಶಿವುನಿಗೋ ॥

ಓಬಳುಪತಿ ಅಂದುರು
ನರಸಿಂಹ ಸ್ವಾಮಿ ಶಂಕರನೆ
ರಥವನು ಒಡೆಯದುಕೆ
ಓಬಳುಪತಿಯನು ಬಿಟ್ಟಾರು
ಪಂಚೈದು ಕಳಸುಗಳ ರಥದಲ್ಲಿಟ್ಟರು
ಶಿವನು ಪಾರ್ವತಿಯು
ಬಂಗಾರದು ರಥವನ್ನ
ಸಿತ್ತುರುದೇವುರಿಗೂ
ಕಾಟುಮುದೇವುರಿಗೂ
ರೆಡಿಮಾಡಿ ಕೊಟ್ಟಾರಮ್ಮ
ಆ ರಥದಲ್ಲಿ ಸಿತ್ಯೆ ಕಾಟುಮುಲಿಂಗ
ಕುಂತಾರು ಶಂಕರನೆ
ಕುಂತಾಗೊತ್ತಿದ್ದಂತೆ
ಏಳು ಕುದುರೆ ರಥುವಣ್ಣ
ರಥವನ್ನ ಹೊಡೆಯಾಕೆ
ಓಬಳುಪತಿ ನರಸಿಂಹಸ್ವಾಮಿ ಕುಂತಾನು
ಉತ್ತುತ್ತೆ ಹಣ್ಣಿನ
ಪಳುವಳುಗೆ ಒಳಗಮ್ಮ
ಸಿತ್ತುರು ದೇವುರು
ಕಾಟುಮುಲಿಂಗನು ರಥವಯ್ಯೊ
ಕೊಂಕಿ ಜರಮಲೆಸೀಮೇಯೊಳಗೆ
ಆಗಲೇ
ಇಳಿದೀತು ಸ್ವಾಮಿ
ಸಿತ್ತಿನಿಗಿರಿ ಕಾಡೀಗೆ ಗಳಿಗಾಗೋ ॥

ಸಿತ್ತಿನಿ ಗಿರಿಯೆಂಬ ಕಾಡೀಗಿಳಿದಿತು
ಸಿತ್ತೈ ಕಾಟುಮುಲಿಂಗನು ರಥವಮ್ಮಾ

ಸಿತ್ತುನು ಗಿರಿಯೆಂಬ ಕಾಡೀಗಿಳುದು
ಅಲ್ಲೊಬ್ಬ ಬ್ರಾಹ್ಮಣ್ಣುನ ಹೊಲವಿರುವೋದು
ಬ್ರಾಹ್ಮಣುನ ಜಮೀನಿನತ್ರ
ಕಲ್ಯಾಣಿ ಇರುವುದು ಶಂಕರನೆ
ಕಲ್ಯಾಣಿ ಹತ್ತುರಕೇ
ಕರಿಯಾಲುದು ಗಿಡದಡಿಕೇ
ಆಗಲೆ ಸಿತ್ತುತುದೇವರು
ಕಾಟುಮುಲಿಂಗೂನು
ರಥವನೆ ಇಳಿದೀತಯ್ಯೋ ಗಳಿಗಾಗೋ ॥

ಅಲ್ಲಿ ಜಪತಪ ಮಾಡಿಕೊಂಡು
ಸಿತ್ತರು ದೇವುತು
ಕಾಟುಮುಲಿಂಗ ಓಬಳುಪತಿ
ಸರಿ ಪಂಚೈದು ಕಳಸಗಳು ಪೂಜೆ ಮಾಡಿಕೊಂಡು
ಕೆಲವಾರು ದಿನ ಸಿತ್ತನಗಿರಿಕಾಡುಯಂಬಲ್ಲಿ ನಿಂತೋದರು
ಸಿತ್ತರು ದೇವುರು ಕಾಟುಮುದೇವುರು
ನಿಂತೋದಂತ ಕಾಲದಲ್ಲಿ
ಸರಿ ಬಹ್ಮಯ್ಯ ಲಿಂಗ ಎಂಬ ಬ್ರಾಹ್ಮಣನಿದ್ದ
ಅವನ ಹೊಲ ಪಕ್ಕದಲ್ಲಿತ್ತು
ಕಲ್ಯಾಣಿ ಹತ್ತಿರಕೆ ಬೆಳಿಗ್ಗೆ ಎದ್ರೆ
ಸ್ನಾನ ಮಡಿ ಮಾಡೋದಕ್ಕೆ ಬರ್ತಿದ್ದ
ಸ್ನಾನ ಮಡಿ ಮಾಡಾಕ ಬರುವಾಗ
ಹೊತ್ತಿನೊಳವಿಗೆ ಇವುರ
ಬಂಗಾರದ ಗೊಡಗು
ತಣತಣನೆ ಮಿಂಚುತಿತ್ತು ಸೂರ್ಯನ ಕಿರಣಕ್ಕೇ
ಯಾರಿರಬಹುದು ಇವತ್ತು
ಇಂಥಾ ರಥ ಮಿಂಚತ್ತೈತಲ್ಲಾ
ನಮ್ಮ ಕಾಡ್ನಲ್ಲಿ ಅಂದುಕೊಂಡು
ಬ್ರಾಹ್ಮಣ ಬೊಮ್ಮಯ್ಯಲಿಂಗ ಎಂಬೋನು ಬಂದು ನೋಡ್ದ
ಅರರೇ ಕಾಡುಗೊಲ್ಲರು ಇವುರು
ಈ ಕಾಡುಗೊಲ್ಲರಿಗೆ
ಇಂಥಾ ರಥಾ ಯಾಕೆ ?

ಇದರಲ್ಲಿ ಪಂಚೈದು ಕಳಸಗಳು
ನಮಗೆ ಬ್ರಾಹ್ಮಣರಿಗೆ ಈ ರಥ
ಸರಿ, ಈ ಪಂಚೈದು ಕಳಸಗಳಿದ್ರೆ
ಪೂಜೆ ಮಾಡಿಕೊಂಬದಕ್ಕೆ ಬಹಳ ಚನ್ನಾಗೈತೆ
ಈ ಕಾಡುಗೊಲ್ಲರಿಗೆ ಇಂಥಾ ರಥಾ ಯಾಕೆ
ಅಂದುಕೊಂಡ ಬ್ರಾಹ್ಮಣ ಬೊಮ್ಮಯ್ಯಲಿಂಗ
ಅಂಗಂದುಕಂಡು
ಇವುರ್ನ ಗುರ್ತು ಪರಿಚಯ ಮಾಡಿಕಂಡು
ಮಾತುಕತೆ ಆಡಿಸಿ
ಕೆಲವಾರು ದಿನಗಳು ಕಳೆದಮೇಲೆ
ನಾನು ನೀವು ಕಲತದ್ದಕ್ಕೆ
ಒಂದಾಟ ಕವುಡೆ ಆಡಬೇಕಂತೇಳಿ
ಕವುಡೇಲಿವರನ್ನ ಸೋಲಿಸಿ ಕಾಡುಗೊಲ್ಲರನ್ನ
ಆ ರಥಾನು ಪಂಚ ಕಳಸವ
ನಾನು ಹೊಡಕಂಬಿಡಬೇಕು ಅಂದುಕೊಂಡು
ಬೊಮ್ಮಯ್ಯ ಲಿಂಗ ಮನಸನಲ್ಲಿ ಮಾಡಿಕಂಡು
ಪ್ರತೀದಿವುಸಾ ಬರುತಾನು ಸ್ವಾಮಿ
ಅಲ್ಲಿ ಕಲ್ಯಾಣಿ ಹತ್ತಿರ
ಸ್ನಾನ ಮಡಿ ಮಾಡೋದು
ಚಂದ್ರ ಸೂರ್ಯಾದಿಗಳಿಗೂ
ಶರಣಾರ್ಥಿ ಮೂಡುತಾನೆ

ಸಿತ್ರದೇವರು ಕಾಟುಮುಲಿಂಗನ
ಯೂವೂರು ಸ್ವಾಮಿ ನಿಮ್ಮದು
ಯಾವ ಕುಲ
ಯಾವ ಬೆಡಗು
ಅಂತ ಮಾತಾಡಸಕೆ ಹೋಗ್ತಾ ಇರ್ತಾನೆ
ಅಯ್ಯ
ನಮ್ಮ ಕುಲ ಬೆಡಗಿನ ಸುದ್ದಿ
ನಿನಗ್ಯಾತಕಯ್ಯಾ ಬಡಬ್ರಾಹ್ಮಣ
ಬಂದ ದಾರಿಯಾ ಹಿಡಿದು ಹೊರಟು ಹೋಗಯ್ಯ
ಕಾಡು ಗೊಲ್ಲುರು ನಾವು

ಊರು ಜನಗಳು ನೀವು
ನಿಮ್ಮೇಗು ನಮ್ಮೇಗೂ
ನೆರಳಾಯಿಸಬಾರುದಯ್ಯಾ
ನಿಮ್ಮ ನೆರಳು ನಮ್ಮ ಮೇಲೆ
ಬೀಳಬಾರುದಯ್ಯ
ಬಂದ ದಾರಿ ಹಿಡಿದು ಹೋಗಯ್ಯ ದೂರ ಅಂದಾರು
ಸಿತ್ತೂರು ದೇವರು ಕಾಟಮುಲಿಂಗಗಲಿಗಾಗೋ ॥

ಆವತ್ತು ಹೊರಟೋದ
ಮಾರನೆ ದಿವುಸ ತಿರುಗಿ ಬಂದ
ಬಂದು,
ಸ್ವಾಮಿ
ನಾವು ನೀವು ಕಲತಿದ್ದಕ್ಕೊಂದು ಸ್ವಲ್ಪ
ಮಾತಾದ್ರೂ ಆಡ್ತೀರಿ ಸ್ವಾಮಿ
ಅಯ್ಯಾ,
ನೀವು ಊರುಜನ
ಈದೆ ಆದ್ರೆ ಒಳಗಡೆ ಇರ್ತರೆ
ನಿಮ್ಮ ಮನೆಯೊಳಗೆ ಹೆಂಗ್ಸುರು ಹೆರಗೆ ಆದ್ರೆ
ಒಳಗೆ ಇತ್ರರಯ್ಯ
ನಮಗೆ ಸೂತಗ ಆಗಕಿಲ್ಲ
ನಾವಿರೋ ಜಾಗಕ್ಕೆ ನೀನು ಬರಬಾರದು
ನಿಮ್ಮ ನೆರಳು ನಮ್ಮ ಮೇಲೆ ಬೀಳಬಾರದು
ನಿಮಗೆ ಯಾವಾಗೂ ಸೂತಗ
ಹೊರಟೋಗಯ್ಯ ಆಚೆಗೆ ಅಂದ್ರು
ಸಿತ್ತೂರು ದೇವ್ರುರು ಕಾಟಮುಲಿಂಗ

ಅವತ್ತೂ ಜಾಗ ಕೊಡಲಿಲ್ಲ
ಇವರೆಂಥಾ ಕಾಡುಗೊಲ್ಲುರು ಅಂದಕಂಡು
ಬೊಮ್ಮಯ್ಯಲಿಂಗ ಮನಿಗೊರಟೋದ
ಪ್ರತಿ ನಿತ್ಯ ಇದೇ ರೀತಿ
ಗುರ್ತು ಪರಿಚಯ ಮಾಡಿಕೊಂಡಿರುವಾಗ
ಒಂದಾನೊಂದು ದಿವುಸ
ಸ್ವಾಮಿ,

ನಾನು ದೂರ ಇರ್ತಿನಿ
ನಿಮ್ಮ ಹತ್ರಕ್ಕೆ ಬರಲ್ಲ
ಒಂದೆರಡು ಮಾತಾಡ್ರಿ
ತಪ್ಪೇನಿದೆ ಅಂದ್ರು
ಏನೇಳಯ್ಯ ಅಂದ್ರು ರೋಸಿ ಅವತ್ತು
ಏನಿಲ್ಲ ಸ್ವಾಮಿ
ನಿಮ್ಮದು ಯಾವೂರು
ಎಲ್ಲಿಂದ ಬಂದ್ರಿ
ಈ ಬಂಗಾರದ ಗೊಡುಗು
ನಿಮಗೆ ಯಂಗ್ ಸಿಕ್ತು ಅಂತ ಕೇಳ್ದ
ಅಯ್ಯಾ,
ನಾವು ದೇವಲೋಕದವರು
ದೇವಲೋಕದಿಂದ ಇಳೀದವುರು ನಾವು
ಪಾರ್ವತಿ ಪರಮೇಶ್ವರರಿಂದ
ಈ ರಥಾಪಡಕೆಬಂದೀವಯ್ಯ
ಅಂತ ಇವರೇಳಿದರು
ಹೇಳಿದಾಗ
ಒಂದು ಮಾತು ಸ್ವಾಮಿ
ನಾವೂ ನೀವೂ ಕಲೆತಿದ್ದಕ್ಕೆ ಒಂದು ಮಾತ್ಯೆತೆ
ಅಂಜಿ ಬಿನ್ನಹ ಮಾಡಲೋ ಸ್ವಾಮಿ
ಅಂತ ಕೇಳ್ದ ಬೊಮ್ಮಯ್ಯ ಲಿಂಗ
ಅಂಜದೆ ಬಿನ್ನಹ ಮಾಡಯ್ಯ ಬ್ರಾಹ್ಮಣ
ಅಂದು ಸಿತ್ತುರು ದೇವರು ಹೇಳ್ದ
ಏನಿಲ್ಲ ಸ್ವಾಮಿ
ನಾವು ನೀವೂ ಕಲಿತದಕ್ಕೆ
ಒಂದಾಟ ಕವುಡೆ ಆಡಬೇಕು ಸ್ವಾಮಿ ಅಂದರು
ಅಯ್ಯಾ,
ನಮ್ಮತ್ರ ಏನಿದೆಯಯ್ಯ ಕವುಡೆ ಆಡಿ ಸೊತರೆ
ಕಟ್ಟಿಕೊಡೋದಕ್ಕೆ ಅಂತ ಕೇಳಿದುರು
ಕೇಳುವಾಗ
ನಿಮ್ಮತ್ತ ಇರೋ ಬಂಗಾರದ ಗೊಡಗು ಕಟ್ಟಿ ಕೊಡ್ರಿ
ನಾನ್ ಸೋತ್ರೆ

ನನ್ನ ತಂಗಿ ಗಂಗಮಾಳಮ್ಮನ ಕೊಟ್ಟು
ಮದುವೆ ಮಾಡ್ತೀನಂತ
ಬ್ರಾಹ್ಮಣ ಸಿತ್ತುರದೇವ್ರುರಿಗೆ ಹೇಳಿದ
ಓಹೋ
ಇದೊಳ್ಳೆ ಸಮಯವೆ ॥

ಅಂದೇಳಿದುನಣ್ಣ
ಸಿತ್ತೂರು ದೇವ್ರುರು
ಬಾರಯ್ಯ ಆಡೋಣು
ತಣ್ಣೀರು ತಡಿಬಟ್ಟೆ ಒಳಗೆ
ಹುಲ್ಲಕಚ್ಚೆ ಕಲ್ಲಕಚ್ಚೆ
ಗೋವುಬೇವಾಕ್ಕೊಂಡು
ಹತ್ತುರುಕೆ ಬಂದು
ಕುಂತ್ಕೊಳಯ್ಯ ಬ್ರಾಹ್ಮಣ
ಅಂದೇಳಿದುನಣ್ಣ ಸಿತ್ತೂರು ದೇವ್ರುರು
ಬ್ರಾಹ್ಮಣ ಬೊಮ್ಮಯ್ಯಲಿಂಗನಗಳಿಗಾಗೋ ॥

ಆಗ
ಒಳ್ಳೆ ಸಮಯವಾಯಿತೆಂದು
ಬ್ರಾಹ್ಮಣ
ಜಾಗ್ರತೆ ಕಲ್ಯಾಣಿಗೊಗವುನೆ
ಸ್ನಾನ ಮಡಿ ಮಾಡೆವುನಣ್ಣ
ಸಿತ್ತೂನಿ ಗಿರಿಯೆಂಬ
ಊರವುನು ಬ್ರಾಹ್ಮಣಗಳಿಗಾಗೋ ॥

ಆಗಲೇ ಹುಲ್ಲಕಚ್ಚೆ ಕಲ್ಲಕಚ್ಚೆ
ಗೋವುಬೇವಾಕ್ಕಂಡು ಬಂದು
ಸ್ವಾಮಿ ಸಿತ್ತೂರು ದೇವ್ರುರು
ಕಾಟುಮಲಿಂಗನು ಗದ್ದಿಗೆ ಮುಂದೆ
ಕುಂತ್ಕಾವುನೊ ಬೊಮ್ಮಯಲಿಂಗಗಳಿಗಾಗೋ ॥

ಆಗಲೆ ಆಡಯ್ಯ ಕವಡೆ ಅಂದಾರೋ
ನಮಗೆ ಕವಡೆ ಆಡೋದಕ್ಕೆ ಬರದಿಲ್ಲ ಕಣಯ್ಯ
ಕಾಡುಗೊಲ್ಲರು ನಾವು

ಪಸ್ಟು ನೀನು ಕವುಡೆ ಆಡಿ ತೋರಿಸಿದರೆ
ಆಮೇಲಿಂದ
ಕವುಡೆ ಆಡ್ತೀನಂತ ಸಿತ್ತುರ ದೇವುರು ಹೇಳಿದ
ಫಸ್ಟು ಬೊಮ್ಮಯ್ಯಲಿಂಗ ಮೂರಾಟ ಕವುಡೆ ಆಡಿದ
ಕವುಡೆ ಆಡಿದರೆ ಸೋಲಿಗೆ ಬಿದ್ದವು
ಇದು ದೇವುರಾಟ ಕಣಯ್ಯ
ಇನ್ನು ಮೂರಾಟ ಆಡ್ತೀನಿ ಅಂದ
ಇನ್ನೂ ಮೂರಾಟ ಆಡ್ದ ಬೊಮಯ್ಯಲಿಂಗ
ಮೂರು ಮೂರಾಟ ಸೊಲಿಗೆ ಬಿದ್ದುವು
ಬೊಮ್ಮಯ ಲಿಂಗ ಬ್ರಾಹ್ಮಣ ಸೋತ್ಹೋದ
ಆಗ ಸಿತ್ರದೇವುರು ಕವುಡೆ ತೊಳಕಂಡು
ಗೋವಿನಲ್ಲಿ ಕವಡೆತೊಳದು
ಪರಮೇಶ್ವರನ ಪಾದವನ್ನನೆನೆಸಿ ಹಾಕಿದ
ಮೂರು ಮೂರುಸಾರಿ ಕವುಡೆನೆ ಗೆಲುಪಿಗೆ ಬಿದ್ವು
ಸರಿ,
ಇನ್ನು ಮೂರು ಮೊರು ಸಾರಿ ಕವುಡೆ ಹಾಕಿದ
ಮೂರು ಮೂರು ಸಾರಿ ಸಿತ್ರದೇವುರು ಗೆದ್ದ
ಆವಾಗ,
ಹೋಗಯ್ಯ ನಿನ್ನ ತಂಗಿ ಗಂಗಮ್ಮಾಳಮ್ಮನ ಕರಕಂಡು ಬಾ
ನಮ್ಮದು ಬಂಗಾರದ ಗೊಡಗು
ಸಿಕ್ಕಬಿಡುತ್ತೈತೆ ಅಂತ್ಹೇಳಿ ಆಸೆಪಟ್ಟು
ನೀನು ಕವುಡೆ ಅಡಲು ಬಂದೆ
ನಮ್ಮೊಡನೆ ಕವುಡೆ ಆಡಿ
ನೀನು ಗೆದಿಯಲಿಕ್ಕೆ ಸಾಧ್ಯವೇನಯ್ಯಾ ?
ನಾವು ಕಾಡುಗೊಲ್ಲರು ಅಂತ ತಿಳಕಂಬಿಟ್ಟಿಯಾ
ಎರಿಬಿರಿ ಇರೊದಕ್ಕೆ ನಮ್ಮನ್ನ
ಹೋಗು ಶಿವಾ ಪಾರ್ವತಿ ಮಕ್ಕಳು ನಾವು
ಹೋಗಯ ನಿನ್ನ ತಂಗಿ ಗಂಗಮಾಳಮ್ಮನ ಕರಕಂಡು ಬಂದು
ನನಗೆ ಮದುವೆ ಮಾಡು ಆಡಿದ ಮಾತಿನಂತೆ
ಅಂದ ಸಿತ್ರದೇವುರು
ಆಗಲಿ ಸ್ವಾಮಿ ಕರಕಂಬತ್ತೀನಿ ಅಂತೇಳಿಬಿಟ್ಟು
ಬೊಮ್ಮಯ್ಯಲಿಂಗ ಊರೊಳಕೆ ಹೋಗಿ

ಅವುರೆಂಗೂ ಕಾಡು ಗೊಲ್ದರು
ನಾವಿರೋದು ಊರು ಮನೇವೊಳಗೆ
ಊರೊಳಕ್ಕೆ ಅವುರು ಬರದಿಲ್ಲ
ನಾನು ಅಲ್ಲಿಗೆ ಹೋದ್ರೆತಾನೆ
ನನ್ನ ತಂಗಿ ಕೊಟ್ಟವರಿಗೆ ಮದ್ವೆ ಮಾಡಾದು
ಗೊಲ್ಲರಿಗೆ ಬ್ರಾಹ್ಮಣ ತಂಗಿ ಕೊಟ್ಟು
ಮದುವೆ ಮಾಡ್ದ
ಗಂಗಮಾಳಮ್ಮನ ಅಂದುಬುಟ್ರೆ
ನನಗೆ ಸರಿ ಅಪಕೀರ್ತಿ ಆಗಿಬಿಡುತ್ತೈತೆ
ನಮ್ಮ ಕುಲಕೆಟ್ಹೊಗಿಬಿಡ್ತೀವಿ
ಬ್ಯಾಡ ಅಂದು ಊರೊಳಗೆ ಸೇರ್ಕಂಬಿಟ್ಟ
ಊರು ಬಿಟ್ಟು ಈಚಗೆ ಬರದಂತೆ ಬೊಮ್ಮಯ್ಯಲಿಂಗ ॥

ಬೇಕಾದಷ್ಟು ದಿನ ಸಿತ್ರದೇವರು ಕಾಟುಮುದೇವರು
ಬಹಳ ದಿನಗಂಟ ನೋಡಿದ್ರು
ಈಚೆಗೆ ಬರಲಿಲ್ಲ
ಸರಿ ಅವಾಗ ಏನ್ಮಾಡ್ದ
ಕೆಲವಾರ ದಿನ ಕಳೆದ ಮೇಲೆ
ಬೊಮ್ಮಯ್ಯಲಿಂಗ
ಸಿತ್ರದೇವುರು ಹೇಳ್ದ
ಕಾಟಮುಲಿಂಗ,
ನಮ್ಮ ತಾತಕುರಿ ಬಿಟ್ಕೊಂಡ್ ಬತ್ತೈತಲ್ಲ ಪ್ರತಿದಿನ
ಆ ತಾತನ ಅತ್ರ
ಒಂದು ಕೊಬ್ಬಿನ ಕುರಿ ಹಿಡದು
ಕೊಯ್ದು ಬಿಡಾನ
ಕೊಯ್ದು ಬಿಟ್ಟು
ನಾವೂ ಮಾಂಸದ ಎಡೆ ಊಟ ಮಾಡಿಬಿಟ್ಟು
ಅದರೊಳಗೆ ಇರತ್ತೈತಲ್ಲಾ ತುಪ್ಪ
ಅದನ್ನೆಲ್ಲ ಕರಗಸಿಬಿಟ್ಟು ತುಪ್ಪ ಮಾಡಿ
ಬ್ರಾಹ್ಮಣನ ಮನೆ ಕೆಳಗಾಳಿಗೆ ಬಿಟ್ಟಗಂಡು
ಮ್ಯಾಗಾಳಿ ಒಳಗೆ ಹೊತ್ತಗಂಡು ಹೋಗಿಬಿಡು
ನೀನು ತುಪ್ಪದ ಡಬ್ಬನ
ತುಪ್ಪ ಕೊಳ್ಳಕ ಬರ್ತಾನೆ

ಗಮುಲುದು ವಾಸನೆ ಹಿಡಕಂಡು
ಆವಾಗ ತುಪ್ಪಕೊಟ್ಟು ಬಂದುಬಿಡು
ಆವಾಗ ರೆಡಿ ಆಗಿ ಕುದುರೆ ಹಾಕ್ಕಂಡು
ಹೋಗಿ ಬ್ರಾಮರ ಬತಕೆಡಿಸಿ
ಗಂಗಮಾಳಮ್ಮನ ತಂದು
ಮದುವೆ ಆಗಬೇಕು ಬಿಡಾಕಿಲ್ಲ
ಅಂತೇಳಿ ಸಿತ್ರದೇವ್ರುರು ಹೇಳ್ದ
ಹೇಳ್ತಿದ್ದಂತೆ
ಗೊಲ್ಲರಜ್ಜ ಒಂದು ಕುರಿಬಿಟ್ಟಗಂಡು ಬಂದಿದ
ಆವಜ್ಜನತ್ರ ಹಿಡಕಂಡ್ರು ಒಂದು ಕೊಬ್ಬಿನಕುರಿ
ಒಂದು ಬಂಡೆ ಮ್ಯಾಲೆ ಹಿಡಕಂಡು ಕೊಯ್ದುಬಿಟ್ರು ॥

ಕೊಯ್ದು ಶಂಕರನೆ
ಆಗಲೆ ಮಾಂಸದ
ಎಡೆಯನ್ನ ಮಾಡಿಕಂಡಾರಣ್ಣ
ಸಿತ್ತೂರು ದೇವುರು ಕಾಟುಮು ಲಿಂಗ
ಎಡೆಯನು ಮಾಡಿಕಂಡು
ದೇವುರು ಕರುಣದಿಂದ
ಆ ಕೊಬ್ಬುತಗದು ಸ್ವಾಮಿ
ಆಗಾಲೆ ಕೊಬ್ಬನ್ನು ತಗುದಾವುರೆ
ತುಪ್ಪ ಕಾಸೆವರಯ್ಯೊ
ಒಂದು ಡಬ್ಬಕು ಹಾಕೆವುರಣ್ಣ
ಮುಂದಕು ಹೊರಟಾರಯ್ಯೋಗಳಿಗಾಗೋ ॥

ಬ್ರಾಹ್ಮಣನ ಅರಮನೆ ಎಡಭಾಗಕ್ಕೆ ಬಿಟ್ಟಗೊಂಡು
ಮ್ಯಾಗಾಳಿ ವಳಗೆ ಹೊರಟೋದ
ಕಾಟಮುಲಿಂಗ ತುಪ್ಪ ಹೊತ್ತುಗಂಡು
ಹೋಗುತ್ತಿದ್ದಂತೆ ಶಂಕರನೆ
ಆಗಾಲೆ ಬ್ರಾಹ್ಮಣನು
ತುಪ್ಪದ ವಾಸನೆಗೆ
ಬಾಯಿ ತಕ್ಕಂಡು ಬಡ ಬಡನೆ ಓಡಿ ಬಂದ
ಓಡಿ ಬಂದ ಬ್ರಾಹ್ಮಣ
ಯಾವುರಯ್ಯ ನಿಂದು?

ಎಂಥಾ ಚನ್ನಾಗೈತಯ್ಯಾ ತುಪ್ಪ!
ಅದಕೆಷ್ಟು ವರಹ ಬೇಕಾದ್ರು
ಇಕ್ಕೇರಿ ವರಹ ಕೊಡತ್ತೀನಿ
ಆ ತುಪ್ಪ ನನಗೆ ಕೊಟ್ಟು ಬಿಡಪ್ಪ ಅಂದ
ಅಯ್ಯಾ,
ಮಹಾರಾಜರ ಮನೆಗೆ
ಉಲುಪೆ ಹೋಗೋ ತುಪ್ಪ ಇದು
ಎಲ್ಲಾರುಗು ಕೊಡೋದಲ್ಲ ಕಣಯ್ಯ
ಅಂತ ಕಾಟುಮುಲಿಂಗ ಹೇಳ್ದ
ಮಹಾರಾಜರಿಗಿಂತ ಒಂದು ವರಹಾ ಹೆಚ್ಚಾಗಿ ಕೊಡತೀನಿ
ಕೊಡಪ್ಪ ಅಂದ್ರು
ಆಗ ಮೂರು ಹಿಡಿ ಇಕ್ಕೇರಿ ಹೊನ್ನು ಇಸ್ಕಂಡು
ತುಪ್ಪದ ಡಬ್ಬ ಅವುನ ಕೈಗೆ ಕೊಟ್ಟುಬಿಟ್ಟ
ಬ್ರಾಹ್ಮಣ ಅರಮನೆಗೋದ
ಅರಮನೆಗೋಗಿ ಸ್ನಾನ ಮಡಿ ಮಾಡ್ದ
ಶಿವ ಪೂಜೆ ಮಾಡ್ಕಡು ಊಟಕ್ಕೆ ಕುಂತುಗಂಡ
ಅರ್ಧ ಊಟಮಾಡ್ದ
ತುಪ್ಪ ಹಾಕ್ಕೊಂಡು
ಅನ್ನಕಲಸಗಂಡು
ಅರ್ಧ ಊಟ ಮಾಡೋತ್ತಿಗೆ
ಪಿತ್ರುದೇವುರು ಕಾಟಮುಲಿಂಗ ಕುದುರೆ ಹತ್ತಿದರು
ಗವಾಕ್ಷಿವೊಳಗಾಸಿ ಕುದುರೆ ಇಳಿಸಿದ್ರು
ಬ್ರಾಹ್ಮಣನ ಮನೀವೊಳಿಕೆ
ಅಯ್ಯೋ ಬ್ರಾಹ್ಮಣ
ನೀನು ನನಗೆ ತಂಗಿ ಕೊಟ್ಟು ಮದುವೆ ಮಾಡಿದ್ರೆ
ಮಾತ್ರ ನಿನಗೆ ಕುಲ ಕೆಡತೈತ
ಮಾಂಸ ತಿಂದ್ರೆ ಕುಲ ಕೊಡೊದಿಲ್ಲವೇನೋ ?
ಎಲ್ಲಿ ತಿಂತೀದ್ದೀನಯ್ಯಾ ಮಾಂಸನ
ಬಗ್ಗಿ ನೋಡು ಅಗಲನ್ನ ಅಂದ್ರು
ಬಗ್ಗಿ ನೋಡುವಾಗ
ಕುರಿತುಪ್ಪ ಕೊಯ್ದಿದ್ದು ಕೊಟ್ಟು ಕಲುಹಿಸಿದ್ರಲ್ಲ
ಅದನ್ನಾಕಂಡು ಉಂಬುತ್ತಿದ್ದನಲ್ಲ
ಅದನ್ನೆಲ್ಲ ಅಚ್ಚಕಟ್ಟಾಗಿ

ಮಾಂಸ ಆಗಂಗೆ ಮಾಡಿಬಿಟ್ರು
ಆಗ ನೋಡಿ
ಈಗ ನಿಮ್ಮ ಕುಲದ ಸ್ವಾಮಿಗಳಿಗೆಲ್ಲ ಹೇಳಿ
ನಿನ್ನ ಕುಲಕೆಡ್ಸಿದ ಕೆಟ್ಟ ಬ್ರಾಹ್ಮಣ ಅಂತೇಳಿ
ಎಲ್ಲ ಟಾಂ ಹೊಡಿಸಿಬಿಡ್ತೀವಿ
ಅಂದ್ರು ಸಿತ್ರುಮುದೇವರು ಕಾಟುಮುಲಿಂಗ ॥

ತಪ್ಪಾಯಿತು ಸ್ವಾಮಿನಂದು
ನನ್ನ ತಂಗಿ ಗಂಗಮಾಳಮ್ಮನ
ಕಳಸ್ತೀನಿ ನಿಮ್ಮಿಂದೆ
ಮದುವೆ ಮಾಡಿಕಳ್ಳಿಂದಾನೋ
ಬ್ರಾಹ್ಮಣ ಬೊಮ್ಮಯ್ಯಲಿಂಗ ॥

ಮೊದಲೇ ನೇನುದೇವ್ರೋ
ಮದುನಾರೀ ವೀರನಾ
ಮದುಗುದು ಗುಡ್ಡದ ಕಲಿ ಬೀರೋ
ಮದುಗುದು ಗುಡ್ಡದ ಕಲಿಬೀರೋ ಜುಂಜಪ್ಪನ
ಮೊದಲೆ ಸೊಲ್ಲಾಗಿ ನೇನುದೇವ್ರೋ ॥

ಆಗಲೆ ಸ್ವಾಮಿ
ಗಂಗಮಾಳಮ್ಮನ್ನ
ಸಿತ್ತುರು ದೇವುರಿಂದೆ
ಕಳಿಸಿದುರೋ ಸ್ವಾಮಿಗೆ
ಅದೇ ಸಿತ್ತುನುಗಿರಿ ಕಾಡಿನೊಳಗಣ್ಣ
ಶಿವನು ಪಾರ್ವತಿ ಇಳಿದೂ
ತಾಯಿ ಗಂಗಮಾಳಮ್ಮನ
ಸಿತ್ತುರು ದೇವುರಿಗೆ ಕೊಟ್ಟು
ಮದುವೆನೆ ಮಾಡಿದುರಯ್ಯಗಳಿಗಾಗೋ ॥

ಶಿವ ಪಾರ್ವತಿ ಸಿತ್ತಿನಿಗಿರಿ ಎಂಬ ಕಾಡಿಗಿಳಿದು
ಬ್ರಾಹ್ಮರು ಹೆಣ್ಣು ಮಗಳು ಗಂಗಮಾಳಮ್ಮನ್ನ
ಸಿತ್ತುರ ದೇವುರಿಗೆ ಕೊಟ್ಟು ವಿವಾಹವನ್ನು ಮಾಡಿದರು

ಮದುವೆ ಮಾಡಿ ಶಿವುನು ಪಾರ್ವತಿ
ಕೈಲಾಸಕೆ ಹೊರಟರು ಶಂಕರನೆ ॥

ಸಂಗ್ರಹ: (ಚೆಲುವರಾಜು:೧೯೯೭: ೯–೨೨).

ಒಗಟುಗಳು

ಕಾಡುಗೊಲ್ಲರಲ್ಲಿ ಒಗಟುಗಳ ಮತ್ತು ಗಾದೆಗಳ ಬಂಡಾರವೇ ತುಂಬಿದೆ. ಇವತ್ತಿಗೂ ಸಮುದಾಯದ ಹಿರಿಯರು ಲೆಕ್ಕವಿಲ್ಲದಷ್ಟು ಒಗಟುಗಳನ್ನು ಬಿಡಿಸುತ್ತಾರೆ ಮತ್ತು ಗಾದೆಗಳನ್ನು ಹೇಳುತ್ತಾರೆ. ಕುಟುಂಬದ ಹಿರಿಯರು ಮಕ್ಕಳಿಗೆ ವಿರಾಮದ ವೇಳೆಯಲ್ಲಿ ವಿನೋದಕ್ಕಾಗಿ ಒಗಟುಗಳನ್ನು ಬಿಡಿಸುತ್ತಾರೆ. ಅಂತಹ ಕೆಲವು ಒಗಟುಗಳನ್ನು ಈ ಕೆಳಗೆ ನೀಡಲಾಗಿದೆ.

- ರಾಜಗಿರಿ ಬೆಟ್ಟದ ಮೇಲೆ ಚಿನ್ನದ ಕಣ, ರನ್ನದ ಮೇದು, ಕಾಳ ಬಿಟ್ಟು ಉಬ್ಬಲು ಹುಂಡೋಗವ್ರೆ,
  **ಅರ್ಥ:** ಕುರಿಗಳನ್ನು ಕತ್ತರಿಸುವುದಕ್ಕೆ ಮಾಡಿದ ಕಣ,
  ರನ್ನದ ಮೇಟಿ – ಕುರಿ ತುಪ್ಪಟ ಕತ್ತರಿಸುವವರು ಕುರಿ ಬಿಟ್ಟು ತುಪ್ಪಟವನ್ನು ತೆಗೆದುಕೊಂಡು ಹೋಗುವುದು.
- ಕತ್ತಲೆ ಮನೇಲಿ ಕರಿದೆವ್ವ ಕೂತೈತೆ
  **ಅರ್ಥ:** ಎಣ್ಣೆ ಗಡಿಗೆ
- ಹಗ್ಗ ಹಾಸ್ಯೆತೆ ಕೋಣ ಮಲಗ್ಯೆತೆ
  **ಅರ್ಥ:** ಕುಂಬಳಕಾಯಿ ಬಳ್ಳಿ ಮತ್ತು ಕುಂಬಳಕಾಯಿ
- ಇಳ್ಳೆಲ್ಲಾ ಎದ್ದಿರುತ್ತೆ, ಹಗಲೆಲ್ಲ ಮಲಗಿರುತ್ತೆ
  **ಅರ್ಥ:** ದನಕಟ್ಟು ಕೆಣ್ಣು
- ಹುಟ್ಟಬಾರದ ಜಾಗದಾಗೆ ಹುಟ್ಟಿದವರ್‍ಯಾರು? ಕೊಟ್ಟು ಕೆಟ್ಟೋವರ್‍ಯಾರು? ಕೊಡದಲೆ ಕೆಟ್ಟೋರು ಯಾರು?
  **ಅರ್ಥ:** ಕರ್ಣ – ಪಾಂಡವರು – ಕೌರವರು
- ಅಂಬರದಾಗೆ ಆಡೋಗಿಡಗ, ಅದರ ಕಾಲಿಗೆ ಪಚ್ಚೆ ಕಡಗ, ಅದ್ನ ಮಾಡ್ದೋನು ಬಡಗಿ ಹುಡಗ, ಅದು ತಿರುಗೋದು ತೆಂಕ ಬಡಗ
  **ಅರ್ಥ:** ಒನಕೆ, ಬಳೆ, ಬಡಗಿ, ಬತ್ತ ಕುಟ್ಟುವಾಗ ಕಾಲ್ನಲ್ಲಿ ಒರಳಿಗೆ ಬತ್ತ ನೂಕಿಕೊಂಡು ಕುಟ್ಟುವುದು
- ಜಮ್ಮನೇರಳೆ ಮರಜಗ್ಗಿಸಿ ಎಳೆದರೆ ನಾಲ್ಕು ಬಾವಿ ನೀರು ಏಕವಾದವು.
  **ಅರ್ಥ:** ಹಸು – ಅದರ ನಾಲ್ಕು ಮೊಲೆ ಮತ್ತು ಹಾಲು
- ಮರಗೊಳಗೆ ಮರಹುಟ್ಟಿ ಭೂ ಚಕ್ರದ ಕೊಡೆಯಾಗಿ, ತಿನ್ನಭಾರದ ಹಣ್ಣು ಬಹು ರುಚಿ.
  **ಅರ್ಥ:** ಮಗು
- ತುಂಬಿದ ಕೆರೆ, ಅರಗೆರೆ, ಬರಿಗೆರೆ
  **ಅರ್ಥ:** ಎಳೆನೀರು, ಕಾಯಿ, ಕೊಬ್ಬರಿ

- ಒಂಟಿ ಕಾಲ ಕೊಕ್ಕರೆ ಎಂಟು ನೂರು ಮೊಟ್ಟೆ ಇಡುತ್ತೆ
  ಅರ್ಥ: ಅಡಿಕೆ ಮರ
- ಚಿಕ್ಕ ಮನೇಲಿ ಚಕ್ಕೆ ತುಂಬೈತೆ
  ಅರ್ಥ: ಬಾಯಲ್ಲಿರುವ ಹಲ್ಲು
- ಗುಡ್ಡದ ಸುತ್ತ ಬೆಳ್ಳಿ ಉಡುದಾರ
  ಅರ್ಥ: ರಾಗಿಕಟ್ಲು, ರಾಗಿ ಹಿಟ್ಟು
- ಬೆಟ್ಟವೆಲ್ಲಾ ಬೇಯುತ್ತೆ, ಬೆಟ್ಟವಾಗಲ ಕಡ್ಡಿ ಬೇಯಲ್ಲ
  ಅರ್ಥ: ಮುದ್ದೆ, ಮಡಕೆ, ಮುದ್ದೆಕೋಲು
- ಸುತ್ತಮುತ್ತ ಸುಣ್ಣದ ಗೋಡೆ, ಎತ್ತ ನೋಡಿದರೂ ಬಾಗಿಲಿಲ್ಲ
  ಅರ್ಥ: ಕೋಳಿ ಮೊಟ್ಟೆ

ಈ ಒಗಟುಗಳನ್ನು ಹೇಳಿದವರು ತಿಪಟೂರು ತಾಲ್ಲೂಕು ಶೆಟ್ಟಿಹಳ್ಳಿ ಗೊಲ್ಲರಹಟ್ಟಿಯವರಾದ ಚಿತ್ತಮ್ಮ, ಚಿಕ್ಕಮ್ಮ, ಕರಿಯಮ್ಮ, ಗಂಗಮ್ಮ, ಸುನಂದಮ್ಮ, ನಾಗಮ್ಮ, ಸಣ್ಣ ಬುಂಜಮ್ಮ, ಚಿಕ್ಕಮ್ಮ ಮುಂತಾದವರು. ಇವುಗಳನ್ನು ಸಂಗ್ರಹಿಸಿದವರು ಡಿ ಕರಿಯಪ್ಪನವರು.

ಇತರೆ ಸಾಹಿತ್ಯ ಪ್ರಕಾರಗಳು

**ಜಾನಪದ ಲೋಕದ ದ್ರುವ ತಾರೆ ಜನಾಂಗದ ಮಹಿಳೆ ನಾಡೋಜ ಸಿರಿಯಜ್ಜಿ**

ಕಾಡುಗೊಲ್ಲ ಸಮುದಾಯದ ಜಾನಪದ ಸಾಹಿತ್ಯದ ಶ್ರೀಮಂತಿಕೆಗೆ ಜಾನಪದ ಸಿರಿಯಜ್ಜಿಯೇ ಸಾಕ್ಷಿ. ಅಭಿಜಾತ ಕಲಾವಿದೆ ಸಿರಿಯಜ್ಜಿಯು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಯಲಗಟ್ಟೆ ಗೊಲ್ಲರ ಹಟ್ಟಿಯ ನಿವಾಸಿ. ಸಿರಿಯಜ್ಜಿಯ ತಂದೆ ಗುಡ್ಡದ ಈರಪ್ಪ, ತಾಯಿ ಕಾಡಮ್ಮ, ಹನ್ನೆರಡನೇ ವಯಸ್ಸಿಗೆ ಮದುವೆ. ಗಂಡ ತಿಪ್ಪೇಸ್ವಾಮಿಯವರೊಂದಿಗೆ ಸಂಸಾರ, ಮಕ್ಕಳು, ಮೊಮ್ಮಕ್ಕಳು. ಅದ್ಭುತ ಕಲಾವಿದೆಯಾದ ಸಿರಿಯಜ್ಜಿಗೆ ಬಾಲ್ಯದಿಂದಲೇ ಹಾಡಿನ ನಂಟು. ಇಂದು ಮೂವತ್ತೈದು ಸಾವಿರ ಹಾಡಿನ ಒಡತಿಯಾಗಿದ್ದಾರೆ ಎಂದರೆ ಎಂತಹವರಿಗೂ ಆಶ್ಚರ್ಯವಾಗದೇ ಇರದು. ಅಸಾಧಾರಣ ಸ್ಮರಣ ಶಕ್ತಿಯ ಈಕೆಯ ಸಾಹಿತ್ಯದ ಕಣಜದಲ್ಲಿ ರಾಶಿ ರಾಶಿ ಹಾಡುಗಳು ತುಂಬಿವೆ. ಸಿರಿಯಜ್ಜಿಯವರು ಹಾಡುವುದನ್ನ ಕಲಿತಿದ್ದು ಸೋದರತ್ತೆ ಕರಿ ಸಿರಿಯಜ್ಜಿ, ಕೊಂಡದ ಕಾಟವ್ವ ಮತ್ತು ತಾಯಿ ಕಾಡಮ್ಮನಿಂದ. ಬೆಳಗೆರೆ ಕೃಷ್ಣಶಾಸ್ತ್ರಿ, ಎಸ್ ಎಲ್ ಬೈರಪ್ಪ, ರಾಮಾನುಜಂ, ಸಿರಿಯಜ್ಜಿಯ ಪ್ರತಿಭೆಯನ್ನ ಗುರುತಿಸಿ ಪ್ರೋತ್ಸಾಹಿಸಿದರು. ಡಾ ಕೃಷ್ಣಮೂರ್ತಿ ಹನೂರು ಸಿರಿಯಜ್ಜಿಯ ಹಾಡುಗಳನ್ನ ದಾಖಿಲು ಮಾಡಿದ್ದಾರೆ. ಈ ಹಾಡುಗಳು ಮಹಾಸತಿ ಕಾಟವ್ವ ಕಥನ ಗೀತೆ, ಕತ್ತಲೆ ದಾರಿ ದೂರ ಎಂಬ ಸಂಗ್ರಹದಲ್ಲಿ ಪ್ರಕಟವಾಗಿವೆ. ಕಾಡುಗೊಲ್ಲ ಸಮುದಾಯದ ದೇವರುಗಳಾದ ಕ್ಯಾತಪ್ಪ,

ಈರಣ್ಣ, ಸಿದ್ದಯ್ಯ, ಜುಂಜಪ್ಪ, ಕದರಪ್ಪ, ಎತ್ತಪ್ಪ, ಚಿತ್ರ ದೇವರುಗಳ ಮೇಲೆ ಹಾಡು ಕಟ್ಟಿ ಹಾಡುತ್ತಾರೆ. ಗೊಲ್ಲ ಸಮುದಾಯದ ವಿಶ್ವಕೋಶದಂತಿರುವ ಇವರನ್ನ ನಡೆದಾಡುವ 'ಜನಪದ ವಿಶ್ವಕೋಶ' ಎಂದರೆ ಅತಿಶಯೋಕ್ತಿಯಾಗಲಾರದು. ಸಿರಿಯಜ್ಜಿಗೆ ದೊರಕಿರುವ ಸನ್ಮಾನಗಳು ಮತ್ತು ಪ್ರಶಸ್ತಿಗಳು ಅನೇಕ. ೧೯೮೭ ರಲ್ಲಿ ಕರ್ನಾಟಕ ಸರ್ಕಾರ ಜಾನಪದ ಅಕಾಡೆಮಿಯ ಪ್ರಶಸ್ತಿ ನೀಡಿ ಗೌರವಿಸಿದೆ. ೧೯೯೯ ರಲ್ಲಿ ಸಿರಿಯಜ್ಜಿಯವರು ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದಾರೆ. ಇತ್ತೀಚಿಗೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯವು ಸಿರಿಯಜ್ಜಿಗೆ ಪ್ರತಿಷ್ಠಿತ ನಾಡೋಜ ಪ್ರಶಸ್ತಿ ನೀಡಿ ಗೌರವಿಸಿದೆ. ಅನೇಕ ಸನ್ಮಾನಗಳು ನಡೆದಿವೆ. ಇಂತಹ ಜಾನಪದ ಸಿರಿಯಜ್ಜಿಯನ್ನ ಗೊಲ್ಲಸಮುದಾಯ ಪಡೆದಿರುವುದು ಸಮುದಾಯದ ಹಿರಿಮೆಯನ್ನ ಎತ್ತಿ ಹಿಡಿದಿದೆ.

## ಭಾಷೆ

ಕರ್ನಾಟಕ ರಾಜ್ಯದಲ್ಲಿ ಕಂಡು ಬರುವ ಕಾಡುಗೊಲ್ಲರು ಕನ್ನಡವನ್ನು ಮಾತನಾಡುತ್ತಾರೆ. ಅಲ್ಲದೆ ಕನ್ನಡವು ಇವರ ಮಾತೃಭಾಷೆಯಾಗಿರುತ್ತದೆ. ಅಂದರೆ ಕಾಡುಗೊಲ್ಲರ ಭಾಷೆ ಕನ್ನಡ. ಆದಾಗ್ಯೂ, ರಾಜ್ಯದ ಗಡಿ ಭಾಗಗಳಾದ ಮಧುಗಿರಿ ಪಾವಗಡ, ಕೊರಟಗೆರೆ ಮುಂತಾದ ಪ್ರದೇಶಗಳಲ್ಲಿ ಕಂಡುಬರುವ ಕಾಡುಗೊಲ್ಲರು ಕನ್ನಡದ ಜೊತೆಗೆ ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಆದರೆ ಅವರ ಮಾತೃಭಾಷೆ ಕನ್ನಡವೇ ಆಗಿರುತ್ತದೆ. ಮಧ್ಯ ಕರ್ನಾಟಕದಲ್ಲಿ ಕಂಡುಬರುವ ಕಾಡುಗೊಲ್ಲರಿಗೆ ಕನ್ನಡ ಒಟ್ಟಾರೆ ಬೇರೆ ಭಾಷೆ ಇರುವುದೇ ಗೊತ್ತಿಲ್ಲ.

ಪ್ರಸ್ತುತ ಸಮೀಕ್ಷೆಯಲ್ಲಿಯೂ ಶೇಕಡ ನೂರಕ್ಕೆ ೧೦೦ರಷ್ಟು ಕನ್ನಡವನ್ನು ಮಾತನಾಡುವುದು ದಾಖಲಾಗಿದೆ. ಹೀಗಾಗಿ ರಾಜ್ಯದ ಕಾಡುಗೊಲ್ಲರು ಕನ್ನಡವನ್ನು ಮಾತನಾಡುವುದರಿಂದ ರಾಜ್ಯದ ಮೂಲ ನಿವಾಸಿಗಳಾಗಿದ್ದಾರೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ.

ಹೆಚ್ ವಿ ನಂಜುಡಯ್ಯನವರು ಕಾಡುಗೊಲ್ಲರ ಭಾಷೆಯ ಬಗ್ಗೆ ಈ ರೀತಿ ಹೇಳಿದ್ದಾರೆ. Kadu Gollas invariably speak Kannada, in this state, and are said to have adopted the language prevailing wherever they settled, having no distinct language for the caste (Nanjundaiah, H V: 1908:1). ಎ ಎ ಡಿ ಲೂಯಿಸ್‌ರವರು ಕಾಡುಗೊಲ್ಲರು ಬಳಸುವ ಭಾಷೆಯ ಬಗ್ಗೆ ಈ ರೀತಿಯ ಅಭಿಪ್ರಾಯಪಟ್ಟಿದ್ದಾರೆ. Unlike Uru Gollas, who speak a dialect of Telugu the Kadu Gollas of this state speak a dialect with many words and phrases from Marathi and Urdu, and have a talking knowledge of Kannada (Luiz, A A D:1963:84). ಇದು ಕಾಡುಗೊಲ್ಲರು ತಮ್ಮ ಭಾಷೆಯಲ್ಲಿ ಉರ್ದು ಮಿಶ್ರಿತ ಭಾಷೆಯನ್ನು ಮಾತನಾಡುತ್ತಾರೆ ಎಂಬುದನ್ನು ತೋರಿಸುತ್ತದೆ.

| | | | |
|---|---|---|---|
| ಕೈಬೆರಳು | ಕೈಬೆಳ್ಳು | ಕರುಳು | ಕಳ್ಳು |
| ಸೊಂಟ | ನಡ | ಮಣಿಕಟ್ಟು | ಮುಂಗೈ |
| ತಲೆಬುರುಡೆ | ತಲೆಬುಳ್ಡೆ | ಕತ್ತು-ಕುತ್ತಿಗೆ | ಪಟ್ಟಿಶಿರ |
| ಗರ್ಭ | ಬಸಿರು | ರೊಟ್ಟಿ | ರಟ್ಟಿ |
| ಸಕ್ಕರೆ | ಸಕ್ರಿ | ಷರಬತ್ತು | ಸರಬತ್ತು |
| ಕೊತ್ತಂಬರಿ | ಧನ್ಯ | ವಿಲಕ್ಕಿ | ಯಾಲಕ್ಕಿ |
| ಲೇಖನಿ | ಪೆನ್ನು | ಬಿರುಡೆ | ಮುಚ್ಚಳ |
| ಕಾರ್ಡ್ | ಕಾಗದ | ನಾನ್ನೊರು | ನಾನ್ನೂರು |
| ಆರುನೂರು | ಆರ್ನೂರು | ಏಂಟುನೂರು | ಏಂಟ್ನೂರು |
| ಒಂದುಸಾವಿರ | ಒಂದ್ಸಾವಿರ | ಹತ್ತುಸಾವಿರ | ಹತ್ಸಾವಿರ |
| ಕಾಲುಭಾಗೆ | ಕಾಲ್ ಬಾಗಾ | ಎರಡನೆಯದು | ಎಲ್ಡನೆಯದು |
| ಸಾಲಗಾರ | ಸಾಹುಕಾರ | ಹಣ | ದುಡ್ಡು |
| ಮಧ್ಯಸ್ಥಿಕೆ | ದಲ್ಲಾಳಿ | ಪೇಟೆ | ಪ್ಯಾಟೆ |
| ಬಾಕಿ | ಸಾಲ | ಕೊಕ್ಕು | ಕೊಕ್ಕರೆ |
| ಗಿಳಿ | ಗಿಣಿ | ಗಿಡುಗ | ಅಲೇಗೆದ್ದೆ |
| ಕೋಳಿ | ಹ್ಯಾಟೆ | ನವಿಲು | ನವುಲು |
| ಏಡಿ | ಎಂಡ್ರುಕಾಯಿ | ಮೊಟ್ಟೆ | ಗುಡ್ಡು |
| ಪಾರಿವಾಳ | ಪಾರ್ವಾಳ | ರಣಹದ್ದು | ಗೋರ್ಪ |
| ಗುಬ್ಬಚ್ಚಿ | ಕ್ವಾಟೂಗೊಸೆ | ಗೂಡು | ಬಚ್ಚು |
| ನಗದು ಚೀಟಿ | ರಸೀದಿ | ಕಡಲಾಮೆ | ತ್ಯಾಂಬಲಿ |
| ಎರೆಹುಳ | ಗಾಣದಹುಳ | ಜೀರುಂಡೆ | ಗುಂಗರಿ |
| ವಿಷ | ಇಸ | ಚಿಟ್ಟೆ | ಮುತ್ತಲಕ್ಕ |
| ಚೇಳು | ಸೇಳು | ಟಗರು | ಪಟ್ಲಿ |
| ಬೇಟೆನಾಯಿ | ಬ್ಯಾಟೆನಾಯಿ | ನಗದು ಸಾಲ | ಕೈ ಸಾಲ |
| ಅಳಿಲು | ಉರುತೆ | ಬಾಲ | ತ್ವಾಕೆ |
| ಹಿಡಿಕೆ | ಹಿಡಿ | ಭತ್ತ | ನೆಲ್ಲು |
| ಕುರಿಮಾಂಸ | ಕುರಿಬಾಡು | ವಕೀಲ | ಲಾಯರ್ |
| ಆಯಾ | ಆಳು | ಗೌಳಿಗಿತ್ತಿ | ದನಕಾಯುವವನು |
| ಉಪಾಧ್ಯಾಯ | ಮೇಷ್ಟ್ರು | ಕಿವಿವೋಲೆ | ಬೆಂಡೋಲೆ |
| ಕಡ್ಡಿಪೆಟ್ಟಿಗೆ | ಬೆಂಕಿಪಟ್ನ | ದುಪ್ಪಟ | ರಗ್ಗು |
| ಮಲತಂದೆ | ಚಿಕ್ಕಪ್ಪ | ಮೂತ್ರ | ಉಚ್ಚೆ |

೯

# ಪ್ರದರ್ಶಕ ಕಲೆಗಳು

## ಜನಪದ ನೃತ್ಯ

ರಾಜ್ಯದ ಗೊಲ್ಲ ಸಮುದಾಯದ ಕಲೆ ಮತ್ತು ಸಾಹಿತ್ಯ ತುಂಬಾ ಶ್ರೀಮಂತವಾದುದು. ಅದರಲ್ಲಿಯೂ ಬುಡಕಟ್ಟು ಜನರಾದ ಹಟ್ಟಿಗೊಲ್ಲರಲ್ಲಿ ಕಲೆ ಮತ್ತು ಸಾಹಿತ್ಯದ ಭಂಡಾರವೇ ತುಂಬಿದೆ. ಜಾನಪದ ಕಲೆ ಮತ್ತು ಸಾಹಿತ್ಯ ಇವರ ಜೀವನದ ಅವಿಭಾಜ್ಯ ಅಂಗವಾಗಿವೆ. ಅದರೆ ವಿಪರ್ಯಾಸವೆಂದರೆ ಕಾಡುಗೊಲ್ಲ ಬುಡಕಟ್ಟಿನ ಜಾನಪದ ಕಲೆ ಮತ್ತು ಸಾಹಿತ್ಯವು ಲಿಖಿತವಾಗಿ ದಾಖಲಾಗದಿರುವುದು. ಇತ್ತೀಚಿನ ದಿನಗಳಲ್ಲಿ ಸಂಶೋಧಕರು ಗಳು ಅಲ್ಲೊಮ್ಮೆ ಇಲ್ಲೊಮ್ಮೆ ಇವರ ಜಾನಪದ ಕಲೆ ಮತ್ತು ಸಾಹಿತ್ಯವನ್ನ ದಾಖಲಿಸುವ ಪ್ರಯತ್ನ ಮಾಡುತ್ತಿದ್ದಾರೆ. ಗೊಲ್ಲರು ಅನಕ್ಷರಸ್ಥರಾದರೂ ಜಾನಪದ ಕಲೆಯಲ್ಲಿ ಅತ್ಯಂತ ಶ್ರೀಮಂತರು. ಇವರಲ್ಲಿರುವ ಜಾನಪದ ಕಲೆಯು ಬೇರೆ ಇನ್ಯಾವ ಜಾತಿ–ಬುಡಕಟ್ಟು ಗಳಲ್ಲಿಯೂ ಕಂಡು ಬರುವುದಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗೊಲ್ಲ ಸಮುದಾಯದ ಹಿರಿಯರು ಅನಕ್ಷರಸ್ಥರಾದರೂ ತಮ್ಮ ಕಲೆಯನ್ನ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಅವ್ಯಾಹತವಾಗಿ ವರ್ಗಾಯಿಸುತ್ತಾ ಸಾಂಸ್ಕೃತಿಕ ಹಿರಿಮೆಯನ್ನ ಮೆರೆಸುತ್ತಾ, ಬೆಳೆಸುತ್ತಾ ಬಂದಿದ್ದಾರೆ. ನಾಟಕ, ಬಯಲಾಟ, ಕೋಲಾಟ, ಗಣೆ ಊದುವುದು, ಪೂಜಾ ಕುಣಿತ, ಡೋಲು ಬಾರಿಸುವುದು, ನಗಾರಿ ಬಾರಿಸುವುದು, ಸೋಬಾನೆ ಪದ ಹಾಡುವುದು, ಮಣೋವು ಹಾಕುವುದು ಮುಂತಾದವುಗಳು ಕಾಡುಗೊಲ್ಲರ ಜನಪದ ನೃತ್ಯಗಳಾಗಿವೆ.

**ಕೋಲಾಟ :** ಗೊಲ್ಲರ ಹಟ್ಟಿಗಳಲ್ಲಿರುವ ಜಾನಪದ ಕಲೆಗಳಲ್ಲಿ ಕೋಲಾಟವು ಮುಖ್ಯವಾದಂತಹದು. ಗ್ರಾಮೀಣ ಪ್ರದೇಶದ ಜನರಲ್ಲಿ ಗೊಲ್ಲ ಸಮುದಾಯದ ಕೋಲಾಟವು ಅತ್ಯಂತ ಶ್ರೀಮಂತವಾದುದು ಎಂಬುದಾಗಿ ಜಾನಪದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಿನವಿಡೀ ಕುರಿ ಸಾಕಣೆ, ಪಶುಪಾಲನೆ ಅಥವಾ ಕೃಷಿ ಕಾರ್ಯದಲ್ಲಿ ತೊಡಗಿ ದುಡಿದು ಸಂಜೆಯ ವೇಳೆ ಹಟ್ಟಿಯ ಜನರು ಮನರಂಜನೆ ಗೋಸ್ಕರ ಕೋಲಾಟವಾಡುತ್ತಾರೆ. ಇವರು ಹಬ್ಬ ಜಾತ್ರೆ ಮತ್ತು ದೇವರ ಉತ್ಸವಗಳ ದಿನದಂದು ಕೋಲಾಟ ಆಡುತ್ತಾರೆ. ರಾಜ್ಯದ ಯಾವುದೇ ಗೊಲ್ಲರ ಹಟ್ಟಿಗೆ ಹೋದರೂ ಅಲ್ಲಿ ಕೋಲಾಟದ ತಂಡ ಮತ್ತು ಕಲಾವಿದರನ್ನ ಕಾಣಬಹುದು. ಇವರು ಕಾಲಿಗೆ

ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಕೋಲು ಹಿಡಿದು ಕೋಲಾಟವಾಡುತ್ತಾರೆ. ಕೋಲಾಟ ಆಡುವವರು ಮೊದಲು ಪ್ರಾರ್ಥನೆಯೊಂದಿಗೆ ಪ್ರಾರಂಭ ಮಾಡಿ ಹಿಮ್ಮೇಳ ಮತ್ತು ಮುಮ್ಮೇಳದೊಂದಿಗೆ ಮುಗಿಸುತ್ತಾರೆ. ಪ್ರತಿಯೊಬ್ಬರೂ ಒಬ್ಬರ ಕೋಲಿಗೆ ಮತ್ತೊಬ್ಬರ ಕೋಲನ್ನ ಬಡಿಯುತ್ತಾ ಒಳಗೆ-ಹೊರಗೆ ಸುತ್ತುವುದು ಗೆಜ್ಜೆ ಕಾಲಿನ ಹೆಜ್ಜೆಗಳು ತುಂಬಾ ಆಕರ್ಷಣೀಯವಾಗಿರುತ್ತವೆ. ಕೋಲಾಟದಲ್ಲಿ ಕೋಲುಗಳೇ ಪ್ರಧಾನವಾಗಿರುವುದರಿಂದ, ಹಾಡು ಮತ್ತು ನೃತ್ಯವೂ ಇದರಲ್ಲಿ ಸೇರಿರುವುದರಿಂದ ಈ ಜಾನಪದ ಕಲೆಗೆ ಮತ್ತಷ್ಟು ಮೆರುಗು ಬಂದಿದೆ. ಕೋಲಾಟವಾಡುವಾಗ ಕಲಾವಿದರು ಬಹಳ ಉತ್ಸಾಹಭರಿತ ರಾಗಿರುತ್ತಾರೆ. ಕೋಲಾಟದ ಒಂದು ಸುತ್ತನ್ನ ಮುಗಿಸುವಾಗ ಅಥವಾ ಕುಣಿದು ಸುಸ್ತಾದಾಗ ಥೆಯ್ಯೊ ಉಡದಯ್ಯೋ ಎಂದು ಮುಗಿಸುತ್ತಾರೆ. ಕೋಲಾಟವಾಡುವ ಈ ಕಲಾವಿದರಿಗೆ ಅವರಲ್ಲಿಯೇ ಒಬ್ಬ ಗುರುವಿರುತ್ತಾನೆ. ಸಾಮಾನ್ಯವಾಗಿ ಗುರುವು ಸಮುದಾಯದ ಹಿರಿಯ ವ್ಯಕ್ತಿಯಾಗಿದ್ದು ಕಿರಿಯರಿಂದ ಹಿಡಿದು ಹಿರಿಯವರಿಗೆ ಕೋಲಾಟವನ್ನ ಉಚಿತವಾಗಿ ಅಂದರೆ ಯಾವುದೇ ಪ್ರತಿಫಲಾಪೇಕ್ಷೆಗಳನ್ನ ನಿರೀಕ್ಷಿಸದೆ ಕಲಿಸಿಕೊಡುತ್ತಾನೆ. ಇವನ ಕಲೆ ಇವನ ಹಟ್ಟಿಯ ಜನರಿಗೆ ಸೀಮಿತವಾಗಿರುವುದಿಲ್ಲ. ಇವನು ಬೇರೆ ಬೇರೆ ಹಟ್ಟಿಗಳಿಗೆ ಹೋಗಿ ಅಲ್ಲಿಯ ಜನರಿಗೆ ಕೋಲಾಟ ಕಲಿಸುತ್ತಾನೆ. ಕೋಲಾಟವಾಡುವಾಗ ತಮ್ಮ ಬುಡಕಟ್ಟು ದೇವರುಗಳಾದ ಜುಂಜಪ್ಪ, ಎತ್ತಪ್ಪ, ಈರಮುದ್ದಪ್ಪ, ಹಾಲಪ್ಪ, ಚಿಕ್ಕಣ್ಣ ಸ್ವಾಮಿ, ಚಿತ್ರದೇವರು ಮುಂತಾದವುಗಳ ಮೇಲೆ ಹಾಡು ಕಟ್ಟಿ ಹಾಡುತ್ತಾರೆ. ಕೋಲಾಟವಾಡುವಾಗ ನಾವು ಇದರಲ್ಲಿ ವೈವಿಧ್ಯಕತೆಯನ್ನ ಕಾಣಬಹುದು. ಹಾಡುಗಳ ವೈವಿಧ್ಯಕ್ಕೆ ತಕ್ಕಂತೆ ಕುಣಿತದಲ್ಲಿಯೂ ವಿವಿಧ್ಯತೆಯಿದೆ. ಇವರ ಕುಣಿತದಲ್ಲಿ ಜಾನಪದ ಕಲೆ, ಶೈಲಿಯೂ, ಹಾಡುಗಳಲ್ಲಿ ಜಾನಪದ ಸಾಹಿತ್ಯವನ್ನ ಕಾಣಬಹುದು. ಇತ್ತೀಚೆಗೆ ಟಿವಿ ಮಾಧ್ಯಮದ ಪ್ರಭಾವ ಗೊಲ್ಲರ ಹಟ್ಟಿಯ ಜನತೆಯ ಮೇಲೂ ಉಂಟಾಗಿದೆ. ಇಂದು ಹಟ್ಟಿಯ ಬಹುತೇಕ ಯುವಕರು ತಮ್ಮ ಸಾಂಪ್ರದಾಯಿಕ ಕಲೆಯಾದ ಕೋಲಾಟವನ್ನ ಮರೆಯುತ್ತಿದ್ದಾರೆ. ಇದರಿಂದಾಗಿ ಕೋಲಾಟದ ಕಲೆ ನಶಿಸುತ್ತಿರುವುದು ಒಂದು ಬೇಸರ ಸಂಗತಿಯಾಗಿದೆ. ಆದರೂ, ಹಿರಿಯ ವ್ಯಕ್ತಿಗಳು ಈ ಜಾನಪದ ಕಲೆಯನ್ನ ಮುಂದುವರಿಸಿಕೊಂಡು ಹೋಗುತ್ತಿರುವುದು ಸಮಾಧಾನಕರ ಸಂಗತಿ. ಉದಾಹರಣೆ ಕೆಲವು ಕೋಲಾಟ ಪದಗಳನ್ನು ನೋಡಬಹುದು.

**ಕೋಲಾಟ ಪದಗಳು**

ಸುಳ್ಳೇ ನಮ್ಮ ದೂರ ಬೇಡ
ನಮ್ಮ ನಿಮ್ಮ ಮಾಯಕೃಷ್ಣ ಕೇಳಮ್ಮಯ್ಯ ॥ಸುಳ್ಳೇ ನಮ್ಮ ॥
ಗೋಪಿ ನಿನ್ನ ಮಗನಿಗೆ ಮುದ್ದು ಬಿಟ್ಟು
ಬುದ್ಧಿ ಹೇಳೇ ಮುದ್ದು ಬಿಟ್ಟು
ಬುದ್ಧಿ ಹೇಳಮ್ಮ ಕೇಳಮ್ಮಯ್ಯ ॥ಸುಳ್ಳೇ ನಮ್ಮ ॥

ಅಡಿಗೆ ಕೂಗೆ ದೇವರ ಪೂಜೆ
ಸಡಗರದಿಂದ ಹೋಳಿಗೆ ಮಾಡಿ
ಭೀಮಸೇನಾ ತಿಂದು ಹೊರಟಾನ ಕೇಳಮ್ಮಯ್ಯ ॥ಸುಳ್ಳೇ ನಮ್ಮ ॥

ಕಿನ್ನರಿ ಕಿರುಗೆಜ್ಜೆ ಕಿವಿಗೇನಾಗರಸುತ್ತಾ ॥
ಕಿನ್ನೂರಿ ಮ್ಯಾಲೆ ಕಿರುಗೆಜ್ಜೆ ತಂದಿನಿ ತಾನೆ ॥
ಕುಂತಿ ಕೊಟ್ಟಾ ಕಟ್ಟಿ
ಭೀಮಾ ಭಿಕ್ಷೆಯ ನೆತ್ತಿ ॥
ಎಂತ್ತೋರಿಗಿಂತ ವನವಾಸ ತಂದನಿತಾನ ॥
ಎಂತ್ತೋರಿಗಿಂತ ವನವಾಸ ಬರುವಾಗ ॥
ಅಲ್ಲೋಬ್ಬ ಕೃಷ್ಣ ಜನಿಸಿದ ತಂದನಿತಾನ ॥
ಅಲ್ಲೋಬ್ಬ ಹರಿಯು ಜನಿಸಿದ ತಂದನಿತಾನ ॥
ಚಿನ್ನಾವ ತೂಗ್ಯಾರೆ ರನ್ನಾವ ತೂಗ್ಯಾರ‍್ರೆ
ಹೊನ್ನಾಕ್ಕ ಮಳೆಗೇರಿ ತೂಗ್ಯಾರ‍್ರೆ ತಂದನಿತಾನ ॥ಕಿನ್ನರಿ ಕಿರುಗೆಜ್ಜೆ ॥

ಕೃಷ್ಣನ ಆರಾಧಕರಾದ ಕಾಡುಗೊಲ್ಲರು ತಮ್ಮ ಕೋಲಾಟದ ಪದಗಳಲ್ಲಿ ಕೃಷ್ಣನನ್ನು ಕೊಂಡಾಡುವುದನ್ನು ಮೇಲಿನ ಕೋಲಾಟದ ಪದಗಳಿಂದ ಕಾಣಬಹುದಾಗಿದೆ.

**ಗಣೆ ಊದುವುದು** : ಗೊಲ್ಲ ಸಮುದಾಯದವರು ಗಣೆ ಊದುವ ಕಲೆಯನ್ನ ಕರಗತ ಮಾಡಿಕೊಂಡಿದ್ದಾರೆ. ಗಣೆ ಊದುವುದು ಬಿದಿರು ಕೋಲಿನಿಂದ ಮಾಡಿದ ಗಣೆಯಿಂದ ಸುಶ್ರಾವ್ಯವಾಗಿ ರಾತ್ರಿ ಇಡೀ ಊದುತ್ತಾರೆ. ಸಾಮಾನ್ಯವಾಗಿ ಪ್ರತಿಯೊಂದು ಹಟ್ಟಿ ಅಥವಾ ಆಯಾಯ ಪ್ರದೇಶದಲ್ಲಿ ಇವರು ಕಂಡುಬರುತ್ತಾರೆ. ಇವರು ಜುಂಜಪ್ಪನ ಕಥೆ, ಎತ್ತಪ್ಪನ ಸಾಹಸದ ಕಥೆ. ಪುರಲಳ್ಳಿಯ ಭೂತಪ್ಪನ ಕಥೆ ಹೀಗೆ ಹಲವಾರು ಐತಿಹ್ಯಗಳ ಬಗ್ಗೆ ರಾತ್ರಿ ಇಡೀ ಮಲಗದೇ ಹಟ್ಟಿಯ ಮಧ್ಯದಲ್ಲಿ ಅಥವಾ ದೇವಾಲಯದ ಎದುರು ಕುಳಿತು ಗಣೆ ಊದುತ್ತಾರೆ. ಕಥೆ ಕೇಳುವವರು ಸಹ ರಾತ್ರಿ ಇಡೀ ನಿದ್ದೆ ಗೆಟ್ಟು ಗಣೆ ಊದುವವರ ಮಾತಿಗೆ ಓಗೊಟ್ಟು ಕಥೆ ಕೇಳುತ್ತಾರೆ. ಇದು ಒಂದು ವಿಶಿಷ್ಟ ಜಾನಪದ ಕಲೆಯಾಗಿದ್ದು, ಇದರಲ್ಲಿ ಮಹಾಕಾವ್ಯಗಳ ಭಂಡಾರವೇ ಅಡಗಿದೆ. ಗಣೆ ಊದುವವರಿಗೆ ಅಕ್ಷರ ಗೊತ್ತಿಲ್ಲದಿದ್ದರೂ ಅವರ ಜ್ಞಾನ ಸಂಪತ್ತಿಗೆ ಮತ್ತು ಜಾನಪದ ಕಲೆಗೇನು ಕೊರತೆಯಿಲ್ಲ. ಗಣೆ ಊದುವವರ ಕರಿ ಕಂಬಳಿ ಹಾಸಿಕೊಂಡು ಕೂತು ಗಣೆ ಊದುವುದನ್ನ ಪ್ರಾರಂಭಿಸಿದರೆ ಅದರಲ್ಲಿ ತಲ್ಲೀನರಾಗಿ ರಾತ್ರಿ ಹೇಗೆ ಮುಗಿದು ಹೋಗುತ್ತದೆ ಎಂಬುದು ಗೊತ್ತಾಗುವುದೇ ಇಲ್ಲ. ಗಣೆ ಊದುವವರು ದೂರದರ್ಶನದಲ್ಲಿ ಗಣೆ ಊದುವ ಜಾನಪದ ಕಾರ್ಯಕ್ರಮವನ್ನ ನೀಡಿ ಜನ ಮನ್ನಣೆಗಳಿಸಿದ್ದಾರೆ. ಇಂತಹ ಅಪಾರ ಜಾನಪದ ಭಂಡಾರವಿರುವ ಕಲೆ ಉಳಿದು ಬೆಳೆದು ಸಂರಕ್ಷಿಸಲ್ಪಡಬೇಕಾಗಿದೆ.

**ಭಜನೆ ಮೇಳ**

ಗೊಲ್ಲರ ಹಟ್ಟಿಗಳಲ್ಲಿ ಮನರಂಜನೆ, ಕಲೆ ಮತ್ತು ದೈವಭಕ್ತಿಯ ದ್ಯೋತಕವಾಗಿ ಭಜನೆಗಳನ್ನ ಮಾಡುತ್ತಾರೆ. ಇದರಲ್ಲಿ ಆಸಕ್ತಿ ಇರುವವರು ಗುರುಭೋಧ ತೆಗೆದುಕೊಳ್ಳುತ್ತಾರೆ. ಇವರು ಸಮಾನ ಮನಸ್ಕರಾಗಿದ್ದು ಭಜನೆ ಕಾರ್ಯಕ್ರಮ ನಡೆಸಿಕೊಡುತ್ತಾರೆ. ಇವರು ಭಜನೆಯನ್ನ ಒಂದು ಕಲೆಯಾಗಿ ಭಾವಿಸದೆ ದೈವಭಕ್ತಿಯ ಉದ್ದೇಶದಿಂದ ಕಾರ್ಯಕ್ರಮ ಮಾಡುತ್ತಾರೆ. ಆದರೆ ವಾಸ್ತವಿಕವಾಗಿ ಭಜನೆಕಾರ್ಯದಲ್ಲಿ ಅವರು ಹಾಡುವ ಹಾಡುಗಳಲ್ಲಿ ಜಾನಪದ ಸೊಗಡು ಎದ್ದು ಕಾಣುತ್ತದೆ. ಭಜನೆಯ ದಿನದಂದು ಇವರು ಯಾವುದೇ ವೇಷ ಭೂಷಣವಿಲ್ಲದೆ ಅವರ ದಿನನಿತ್ಯದ ಸರಳ ಉಡುಪಿನಲ್ಲಿಯೇ ಕುಳಿತು ಭಜನೆ ಮಾಡುತ್ತಾರೆ. ಭಜನೆಗೆ ತಾಳ, ತಂಬೂರಿ, ಘಟಂ, ದಂಬಡಿ ಬಳಸಿ ಸಂಗೀತ ಸಂಯೋಜನೆ ಮಾಡುತ್ತಾರೆ. ಹೆಂಗಸರು, ಗಂಡಸರು ಒಟ್ಟಿಗೆ ಕುಳಿತು ಹಾಡುತ್ತಾರೆ. ಇವರು ಅನಕ್ಷರಸ್ತರಾದರೂ ಭಜನೆ ಹಾಡುಗಳನ್ನ ತಾಳಕ್ಕೆ ಹೊಂದಿಸಿ ಹಾಡುವುದರಲ್ಲಿ ನಿಪುಣರು. ಪ್ರತಿಯೊಂದು ಹಾಡಿನಲ್ಲಿ ಆಧ್ಯಾತ್ಮಿಕ ತತ್ವಗಳು, ಹುಟ್ಟು, ಸಾವು ಮೊದಲಾದ ಪರಮಾರ್ಥಿಕ ಅಂಶಗಳನ್ನ ಒಳಗೊಂಡಿರುತ್ತವೆ. ಕೆಲವರು ಭಜನೆ ಮಾಡುತ್ತಿದ್ದರೆ ಉಳಿದವರು ಸುತ್ತ ಕುಳಿತು ಕೇಳುತ್ತಾರೆ. ಈ ಭಜನೆಗಳಿಗೆ ಒಬ್ಬ ಗುರು ಇರುತ್ತಾನೆ. ಗುರುವು ಹೇಳಿದಂತೆ ಮಂಡಳಿಯ ಸದಸ್ಯರು ಕೇಳುತ್ತಾರೆ. ಭಜನೆ ಮಂಡಳಿಯವರು ದೂರದ ಬೇರೆ ಬೇರೆ ಊರುಗಳಿಗೆ ಹೋಗಿ ಕಾರ್ಯಕ್ರಮ ನೀಡಿ ಬರುತ್ತಾರೆ. ಕೆಲವೊಂದು ಬಾರಿ ಬೇರೆ ಊರಿನ ಬೇರೆ ಸಮುದಾಯದ ಜನರು ಭಜನೆ ಮಾಡಬೇಕೆಂದು ಅಪೇಕ್ಷಿಸಿದರೆ ಅಂತಹವರ ಮನೆಗೂ ಹೋಗಿ ಕಾರ್ಯಕ್ರಮ ನೀಡಿ ಬರುತ್ತಾರೆ. ರಾಜ್ಯದ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಯ ಗೊಲ್ಲರ ಹಟ್ಟಿಗಳಲ್ಲಿ ಭಜನೆ ಮಂಡಳಿಗಳನ್ನ ಕಾಣಬಹುದು. ಭಜನೆ ಹಾಡುಗಳನ್ನ ಹಾಡುವವರು ಜಾನಪದ ಪ್ರಶಸ್ತಿಗಳನ್ನ ತೆಗೆದುಕೊಂಡ ನಿದರ್ಶನಗಳಿವೆ.

**ಸೋಬಾನೆ ಪದ :** ಕಾಡುಗೊಲ್ಲರ ಸಾಹಿತ್ಯ ತುಂಬಾ ಶ್ರೀಮಂತವಾದುದು. ಇವರಲ್ಲಿ ಇರುವಂತಹ ಸಾಹಿತ್ಯವೆಲ್ಲವೂ ಜಾನಪದ ಸಾಹಿತ್ಯವೇ. ಮದುವೆ, ಹಬ್ಬ, ಜಾತ್ರೆ, ದೇವರ ಉತ್ಸವ, ಮೈನೆರೆದಾಗ ಮುಂತಾದ ಸಂದರ್ಭಗಳಲ್ಲಿ ಹೆಂಗಸರು ಸೋಬಾನೆ ಪದವನ್ನ ಹಾಡುತ್ತಾರೆ. ಅಲ್ಲದೆ ಹೊಲ-ಗದ್ದೆಗಳಲ್ಲಿ, ಪೈರು ನಾಟಿ ಮಾಡುವಾಗ ಇವರು ಹಾಡುವ ಜಾನಪದ ಹಾಡುಗಳು ತುಂಬಾ ಸೊಗಸಾಗಿರುತ್ತವೆ. ಸೋಬಾನೆ ಪದವು ಬಹಳ ಪ್ರಮುಖವಾದ ಜಾನಪಧ ಹಾಡಾಗಿದ್ದು, ಎರಡು-ಮೂರು ಜನ ಹೆಂಗಸರಿಂದ ಕೂಡಿದ ಎರಡು-ಮೂರು ಗುಂಪುಗಳಾಗಿ ಹಾಡುತ್ತಾರೆ. ಮದುವೆ ಮತ್ತು ದೇವರ ಉತ್ಸವಗಳಲ್ಲಿ ಹೆಂಗಳೆಯರು ತಮ್ಮ ಬುಡಕಟ್ಟು ದೇವರುಗಳಾದ ಜುಂಜಪ್ಪ, ಎತ್ತಪ್ಪ, ಚಿಕ್ಕಣ್ಣ ಸ್ವಾಮಿ, ಈರಮುದ್ದಪ್ಪ, ಚಿತ್ರ ದೇವರುಗಳ ಮೇಲೆ ಹಾಡು ಕಟ್ಟಿ ಹಾಡುತ್ತಾರೆ. ಈ ಮಹಿಳೆಯರಲ್ಲಿ ಇವರ ಸೋಬಾನೆ ಪದಗಳು ಎಲ್ಲೂ ಅಕ್ಷರ ಸಂಸ್ಕೃತಿಯಲ್ಲಿ ದಾಖಲಾಗಿಲ್ಲವಾದರೂ, ಅಕ್ಷರ ಜಗತ್ತಿಗಿಂತ ಅತ್ಯಂತ ವ್ಯವಸ್ಥಿತವಾಗಿ

ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸಿಕೊಂಡು ಬರುತ್ತಿದ್ದಾರೆ. ಈ ಶ್ರೀಮಂತ ಜಾನಪದ ಪರಂಪರೆಯಿರುವ ಸಮುದಾಯದ ಸಾಹಿತ್ಯದ ಅಧ್ಯಯನ ಮತ್ತು ದಾಖಲಾತಿಯ ಕೆಲಸ ಇನ್ನೂ ಆಗಿಲ್ಲ. ಆದರೆ ಕೆಲವು ಜಾನಪದ ಮತ್ತು ಬುಡಕಟ್ಟು ವಿದ್ವಾಂಸರುಗಳು ಇತ್ತೀಚೆಗೆ ಕಾಡು ಗೊಲ್ಲರ ಸಾಹಿತ್ಯದ ಅಧ್ಯಯನ ಮತ್ತು ಸಾಹಿತ್ಯ ದಾಖಲಿಸುವ ಪ್ರಯತ್ನ ಮಾಡುತ್ತಿದ್ದಾರೆ.

**ರಂಗಭೂಮಿ**

ಅನಾದಿ ಕಾಲದಿಂದಲೂ ಗೊಲ್ಲರ ಹಟ್ಟಿಗಳಲ್ಲಿ ಮನರಂಜನೆ ಒದಗಿಸಿಕೊಂಡು ಬರುತ್ತಿರುವ ಹವ್ಯಾಸಿ ಕಲೆಯೆಂದರೆ ನಾಟಕ. ಜಾನಪದ ಕಲೆಗಳಲ್ಲಿ ನಾಟಕವೂ ಒಂದಾಗಿರುವುದರಿಂದ ಹೆಚ್ಚು ಕಡಿಮೆ ಎಲ್ಲಾ ಗೊಲ್ಲರ ಹಟ್ಟಿಗಳಲ್ಲಿ ಬಯಲಾಟದ ನಾಟಕ ಪ್ರದರ್ಶನಗಳೇ ಹೆಚ್ಚು. ನಾಟಕಗಳನ್ನ ಸಾಮಾನ್ಯವಾಗಿ ಫೆಬ್ರವರಿ ತಿಂಗಳಿನಿಂದ ಮೇ ತಿಂಗಳಿನವರೆ ಆಡುತ್ತಾರೆ. ಸಾಮಾನ್ಯವಾಗಿ ಈ ತಿಂಗಳುಗಳಲ್ಲಿ ಹಟ್ಟಿಯ ಜನರು ತಮ್ಮ ಕೃಷಿ ಕೆಲಸದಿಂದ ಬಿಡುವಾಗಿರುತ್ತಾರೆ. ಮೊದಲನೆಯದಾಗಿ ಹಟ್ಟಿಯ ಜನರು ಯಾವ ನಾಟಕ ಆಡಬೇಕು ಎಂಬುದನ್ನ ತೀರ್ಮಾನಿಸಿ ನಂತರ ಇದಕ್ಕೆ ನಿರ್ದೇಶಕರನ್ನ ಹುಡುಕುತ್ತಾರೆ. ನಾಟಕದ ನಿರ್ದೇಶಕರನ್ನ ನಾಟಕದ ಮೇಸ್ತ್ರು ಅಥವಾ ಹಾರ್ಮೋನಿಯಂ ಮಾಸ್ಟರು ಎಂದು ಕರೆಯುತ್ತಾರೆ. ಇವರು ಸಾಮಾನ್ಯವಾಗಿ ಆಡುವ ನಾಟಕಗಳೆಂದರೆ, ರಾಮಾಯಣ, ಕುರುಕ್ಷೇತ್ರ, ಶನಿ ಮಹಾತ್ಮೆ, ದಕ್ಷಯಜ್ಞ, ಕೃಷ್ಣಲೀಲೆ, ದಾನಶೂರ ಕರ್ಣ, ಸತ್ಯ ಹರಿಶ್ಚಂದ್ರ ಮುಂತಾದ ಪೌರಾಣಿಕ ನಾಟಕಗಳು. ಇವರು ಸಾಮಾಜಿಕ ನಾಟಕಗಳನ್ನ ಆಡುವುದು ಕಡಿಮೆ. ಇವರು ಬಡವರಾದರೂ ನಾಟಕಕ್ಕೆ ಬೇಕಾದ ಹಣಕಾಸಿನ ಅವಶ್ಯಕತೆಯನ್ನ ಇವರೇ ಸರಿದೂಗಿಸಿಕೊಳ್ಳುತ್ತಾರೆ. ನಿಜವೆಂದರೆ ಇವರು ಕೂಲಿ ಮಾಡುತ್ತಿದ್ದರೂ, ಉಪವಾಸವಿದ್ದರೂ ನಾಟಕವಾಡುವ ಅಥವಾ ನಾಟಕದಲ್ಲಿ ಪಾತ್ರ ಮಾಡುವ ಗೀಳನ್ನ ಬಿಡುವುದಿಲ್ಲ. ನಾಟಕದಲ್ಲಿ ಪಾತ್ರ ಮಾಡುವ ವ್ಯಕ್ತಿಗಳು ನೂರಕ್ಕೆ ನೂರರಷ್ಟು ಬಡವರಾದರೂ ಅವರಲ್ಲಿರುವ ಕಲೆ ಮಾತ್ರ ಶ್ರೀಮಂತವಾದುದು. ಕುತೂಹಲಕಾರಿ ವಿಷಯವೆಂದರೆ ಇವರಲ್ಲಿ ನೂರಕ್ಕೆ ನೂರರಷ್ಟು ಅನಕ್ಷರಸ್ತರು, ಓದು ಬರಹ ಗೊತ್ತಿಲ್ಲ. ಆದರೂ, ಬಾಯಿ ಮಾತಿನಲ್ಲೋ, ನಾಟಕದ ಮಾಸ್ಟರು ಹೇಳಿ ಕೊಟ್ಟ ಹಾಡನ್ನ, ಸಂಭಾಷಣೆಯನ್ನ, ಚಾಚೂ ತಪ್ಪದೆ ಲಯಬದ್ಧ, ತಾಳಬದ್ಧವಾಗಿ ಹಾಡುತ್ತಾರೆ. ವಿಪರ್ಯಾಸವೆಂದರೆ ಇಂತಹ ಕಲಾತ್ಮಕ, ಕಲಾಸಕ್ತ ಶ್ರೀಮಂತ ಜಾನಪದ ಕಲೆಯುಳ್ಳ ಬುಡಕಟ್ಟು ಜನರ ಕಲೆ ಮುಖ್ಯವಾಹಿನಿಗೆ ಬರದೇ ಇರುವುದು.

**ಜನಪದ ವಾದ್ಯ ಪರಿಕರಗಳು**

ಕಾಡುಗೊಲ್ಲರು ಉಪಯೋಗಿಸುವ ಜನಪದ ವಾದ್ಯ ಪರಿಕರಗಳು ಕಡಿಮೆ ಪ್ರಮಾಣದಲ್ಲಿ ಕಂಡು ಬರುತ್ತವೆ. ಜನಪದ ವಾದ್ಯಗಳೆಂದರೆ, ಡಮರುಗ, ದಂಬಡಿ, ಡೋಲು, ನಗಾರಿಕಾಯಿ, ಕೊಳಲು ಮುಂತಾದವುಗಳು. ಭಜನೆ ಮುಂತಾದ ಮೇಳಗಳಲ್ಲಿ ದಂಬಡಿಯನ್ನು ಬಳಸುತ್ತಾರೆ. ಬುಡಕಟ್ಟು ಜಾತ್ರೆಗಳಲ್ಲಿ ಡೋಲು ಮತ್ತು ನಗಾರಿಯನ್ನು

ಬಾರಿಸುತ್ತಾರೆ. ಗಣೆಯು ಕಾಡುಗೊಲ್ಲ ಸಮುದಾಯದ ಅತ್ಯಂತ ಮುಖ್ಯವಾದ ಜನಪದ ವಾದ್ಯವಾಗಿದ್ದು ಸಮುದಾಯದ ಸಂಸ್ಕೃತಿಯ ಸಂಕೇತವಾಗಿದೆ.

**ಜನಪದ ಕ್ರೀಡೆಗಳು**

ಸಾಮಾನ್ಯವಾಗಿ ಕಾಡುಗೊಲ್ಲರ ಮಕ್ಕಳು ಇತರ ಸಮುದಾಯದ ಮಕ್ಕಳಂತೆಯೇ ಕುಂಟೆಬಿಲ್ಲೆ, ಬುಗುರಿ, ಗೋಲಿ, ಲಗೋರಿ, ಕಣ್ಣಾಮುಚ್ಚಾಲೆ ಆಟ, ಚಿನ್ನದಾಂಡುಗಳನ್ನು ಆಡುತ್ತಾರೆ. ಹಿರಿಯರು ದನ ಕಾಯಲು ಹೋದಾಗ ಮರದ ನೆರಳಿನಲ್ಲಿ ಕುಳಿತು ದನ–ಹುಲಿ ಆಟ, ಚೌಕಾಬಾರ ಮುಂತಾದ ಆಟಗಳನ್ನು ಆಡುವುದನ್ನು ಕಾಣಬಹುದಾಗಿದೆ.

**ಜನಪದ ಕುಶಲಕಲೆಗಳು, ಹಚ್ಚೆ, ರಂಗೋಲಿ, ಕಸೂತಿ ಇತ್ಯಾದಿ**

ಸಾಮಾನ್ಯವಾಗಿ ಬುಡಕಟ್ಟು ಕಲೆಯು ಇತರೆ ಕಲೆಗಿಂತ ಭಿನ್ನವಾಗಿರುತ್ತದೆ. ಬುಡಕಟ್ಟು ಕಲೆಯಲ್ಲಿ ಸ್ವಂತಿಕೆ ಮತ್ತು ಸಮುದಾಯದ ಅನನ್ಯತೆಯು ಬಿಂಬಿತವಾಗಿರುತ್ತದೆ. ರಾಜ್ಯದ ಕಾಡುಗೊಲ್ಲ ಸಮುದಾಯವು ಬುಡಕಟ್ಟು ಕಲೆಯನ್ನ ಉಳಿಸಿಕೊಂಡು ಬಂದಿದ್ದು, ಇಂದಿಗೂ ಅವರ ದಿನನಿತ್ಯ ಜೀವನದಲ್ಲಿ ಕಾಣಬಹುದಾಗಿದೆ. ಇವರ ಬುಡಕಟ್ಟು ಕಲೆ ಸ್ವಾಭಾವಿಕವಾದುದು. ಇವರ ಬುಡಕಟ್ಟು ಕಲೆಯನ್ನ ಇವರ ಮನೆ ಕಟ್ಟುವಿಕೆಯಲ್ಲಿ, ದೇವಾಲಯ ನಿರ್ಮಿಸುವಲ್ಲಿ ರಂಗೋಲಿ ಹಾಕುವಲ್ಲಿ ಮನೆಯನ್ನ ಶೃಂಗರಿಸುವಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ಕಾಡುಗೊಲ್ಲರ ಮನೆಗಳು ಗುಡಿಸಲುಗಳಾಗಿದ್ದು, ಚೌಕಾಕಾರದ ಮಣ್ಣಿನ ಗೋಡೆಗಳಿಂದ ನಿರ್ಮಿತವಾಗಿರುತ್ತವೆ. ಮನೆಯ ಹೊದಿಕೆಗೆ ಹುಲ್ಲು ಅಥವಾ ಗರಿಗಳನ್ನ ಹಾಕಲಾಗಿರುತ್ತದೆ. ಈ ಗುಡಿಸಲು ಮನೆಗಳಿಗೆ ಮಣ್ಣು ಮತ್ತು ಸಗಣಿಯಿಂದ ಸಾರಿಸಿ ತುಂಬಾ ಚೊಕ್ಕವಾಗಿದ್ದು, ಕಲಾತ್ಮಕವಾಗಿ ಕಾಣುತ್ತವೆ. ಇವರು ಯಾವುದೇ ಆಧುನಿಕ ಬಣ್ಣಗಳನ್ನ ಮನೆಗಳನ್ನ ಅಲಂಕರಿಸಲು ಬಳಸುವುದಿಲ್ಲ. ಬದಲಾಗಿ ಸುಣ್ಣ, ಸಗಣಿ, ಕಾಗೆ ಬಂಗಾರ, ಸಿದ್ದೆಮಣ್ಣು, ಕೆಮ್ಮಣ್ಣು ಬಳಸಿ ಮನೆಯ ಸುತ್ತ ಗೋಡೆಗೆ ಬಳಿಯುತ್ತಾರೆ. ಮನೆಯ ಮುಂಬಾಗದ ಬಾಗಿಲ ಪಕ್ಕದ ಎರಡೂ ಕಡೆಯ ಗೋಡೆಗಳಿಗೆ ಕೆಮ್ಮಣ್ಣು ಮತ್ತು ಸುಣ್ಣದಿಂದ ಪಟ್ಟಿಗಳನ್ನ ಬರೆಯುತ್ತಾರೆ. ಇದು ಕಡಿಮೆ ಖರ್ಚಿನದಾಗಿದ್ದು, ಬುಡಕಟ್ಟು ಕಲೆಯ ಮುಂದುವರಿಯುವಿಕೆಯನ್ನ ತೋರಿಸುತ್ತದೆ.

ಗೊಲ್ಲ ಸಮುದಾಯದ ಹೆಣ್ಣು ಮಕ್ಕಳು ರಂಗೋಲಿ ಬರೆಯುವುದರಲ್ಲಿ ಎತ್ತಿದ ಕೈ. ಇವರು ನಾನಾ ರೀತಿಯ ಅಂದವಾದ ರಂಗೋಲಿಯನ್ನ ಬಿಡಿಸುತ್ತಾರೆ. ಮನೆಯ ಮುಂದೆ ಬೆಳಿಗ್ಗೆ ಮತ್ತು ಸಾಯಂಕಾಲ ಮನೆಯ ಅಂಗಳವನ್ನ ಆಕಳ ಸಗಣಿಯಿಂದ ಸಾರಿಸಿ, ಅದರ ಮೇಲೆ ರಂಗೋಲಿ ಹಾಕುತ್ತಾರೆ. ಹಬ್ಬ ಹರಿದಿನಗಳಲ್ಲಿ ರಂಗೋಲಿಯನ್ನ ದೊಡ್ಡದಾಗಿ ಬರೆಯುತ್ತಾರೆ. ದೇವರ ಜಾತ್ರೆ–ಹಬ್ಬಗಳಲ್ಲಿ ಇಡೀ ಹಟ್ಟಿಯನ್ನ ಸಗಣಿಯಿಂದ ಸಾರಿಸಿ, ದೇವಾಲಯದ ಮುಂದೆಯೂ ಸೇರಿದಂತೆ ರಂಗೋಲಿ ಹಾಕುತ್ತಾರೆ. ಇವರ ರಂಗೋಲಿ ಸಂಸ್ಕೃತಿಯು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ

ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ಇವರ ರಂಗೋಲಿ ಕಲೆಯಲ್ಲಿ ಬುಡಕಟ್ಟಿನ ಕಲೆಯು ಎದ್ದು ಕಾಣುತ್ತದೆ. ಇದೇ ರೀತಿ ಮದುವೆ ಸಮಾರಂಭಗಳಲ್ಲಿ ಕರಿ ಕಂಬಳಿ ಜಾಡಿಯ ಮೇಲೆ ಅಕ್ಕಿಯಿಂದ ನಾನಾ ಚಿತ್ತಾರದ ರಂಗೋಲಿಗಳನ್ನ ಬಿಡಿಸುತ್ತಾರೆ. ಇವರು ರಂಗೋಲಿ ಬಿಡಿಸಲು ಮದುವೆ ಸಂದರ್ಭಗಳಲ್ಲಿ ಅಕ್ಕಿಯನ್ನ ಬಳಸಿದರೆ, ಮನೆಯ ಮುಂದೆ ರಂಗೋಲಿ ಬಿಡಿಸಲು ಸಿದ್ದೆಮಣ್ಣನ್ನ ಪುಡಿ ಮಾಡಿ ಬಳಸುತ್ತಾರೆ. ಆಧುನಿಕ ರೀತಿಯ ಬಣ್ಣಗಾರಿಕೆ ಬಂದಿರುವ ಈ ಕಾಲದಲ್ಲಿ ಗ್ರಾಮೀಣ ಭಾಗದ ಗೊಲ್ಲ ಸಮುದಾಯವು ಇಂದಿಗೂ ತಮ್ಮ ಬುಡಕಟ್ಟು ಕಲೆಯನ್ನ ಉಳಿಸಿಕೊಂಡು ಬಂದಿದ್ದಾರೆ. ಆದರೆ ಬದಲಾವಣೆಯ ಗಾಳಿ ಇಲ್ಲಿಯೂ ಬೀಸಿ ಕ್ರಮೇಣವಾಗಿ ಬುಡಕಟ್ಟು ಕಲೆ ನಶಿಸುತ್ತಿರುವುದು ವಿಷಾದದ ಸಂಗತಿ.



# ೧೦

# ಸಮಸ್ಯೆ, ಸಂಘಟನೆ ಮತ್ತು ಪರಿಹಾರ

## ಸಮಸ್ಯೆಗಳು

ರಾಜ್ಯದಲ್ಲಿ ಗೊಲ್ಲ ಸಮುದಾಯದವರು ಅತ್ಯಂತ ಹಿಂದುಳಿದ ಅಲೆಮಾರಿ ಮತ್ತು ಅಲೆ-ಅಲೆಮಾರಿ ಬುಡಕಟ್ಟಿಗೆ ಸೇರಿದವರಾಗಿದ್ದು, ಆರ್ಥಿಕ-ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ಭಾರತ ಸಮಾಜದ ಈಗಿನ ಜಾತಿ ಪದ್ಧತಿಯ ಶ್ರೇಣೀಕೃತ ವ್ಯವಸ್ಥೆಯಲ್ಲಿ ರಾಜ್ಯದ ಗೊಲ್ಲ ಸಮುದಾಯದ ಸ್ಥಾನಮಾನ ಕೆಳಸ್ತರವಾಗಿದೆ. ಇವರ ಬಲಹೀನತೆಗಳು ಮತ್ತು ಹಿಂದುಳಿದಿರುವಿಕೆಯು (back-wardness) ಬಹುಮುಖಿ ರೂಪದ್ದಾಗಿವೆ. ಮಹಿಳೆಯರ ಸಾಮಾಜಿಕ-ಧಾರ್ಮಿಕ ಶೋಷಣೆಯೂ ಸೇರಿದಂತೆ ಎಲ್ಲಾ ರಂಗದಲ್ಲಿಯೂ ಹಿಂದುಳಿದಿದ್ದಾರೆ. ಇವರ ಜೀವನ ವೆಲ್ಲಾ ಹಳ್ಳಿ, ಊರು, ಪಟ್ಟಣಗಳಿಂದ ದೂರ. ಸಾಮಾನ್ಯವಾಗಿ ಇವರು ತಳವೂರಿದ ನೆಲೆಗಳಲ್ಲಿ ಹತ್ತಾರು ಹುಲ್ಲಿನ ಗುಡಿಸಲುಗಳು ನಿರ್ಮಿಸಲ್ಪಡುತ್ತವೆ. ಗೊಲ್ಲ ಸಮುದಾಯ ದವರು ಬುಡಕಟ್ಟು ಜನರಾದುದರಿಂದ ವೇಷ, ಭೂಷಣ, ಆಹಾರ, ಜೀವನ ವಿಧಾನ, ರೂಢಿ ಸಂಪ್ರದಾಯಗಳಲ್ಲಿ ಇತರ ಸಮುದಾಯದವರಿಗಿಂತ ಭಿನ್ನರಾಗಿದ್ದಾರೆ. ಇವರು ತಮ್ಮದೇ ಆದ ಪ್ರತ್ಯೇಕ ಹಟ್ಟಿಗಳನ್ನ ನಿರ್ಮಿಸಿಕೊಂಡು ಪ್ರತ್ಯೇಕವಾಗಿ ವಾಸಿಸುವುದರಿಂದ ತಮ್ಮ ಸಾಂಸ್ಕೃತಿಕ ಅನನ್ಯತೆ (identity) ಉಳಿಸಿ ಕೊಂಡಿದ್ದಾಗ್ಯೂ, ಆ ಹಟ್ಟಿಗಳು ಸರ್ಕಾರದ ದಾಖಲಾತಿಗಳಲ್ಲಿ ಇಲ್ಲದೆ ಇರುವುದರಿಂದ ನಾಗರೀಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸರ್ಕಾರದ ಅಭಿವೃದ್ಧಿಯ ಕಾರ್ಯಕ್ರಮ ಗಳು ಮತ್ತು ಯೋಜನೆಗಳು ತಾಂತ್ರಿಕ ತೊಡಕಿನಿಂದಾಗಿ ಗೊಲ್ಲರ ಹಟ್ಟಿಗಳಿಗೆ ತಲುಪುವುದಿಲ್ಲ. ಆದ್ದರಿಂದ ಗೊಲ್ಲರ ಹಟ್ಟಿಗಳು ಮೂಲಭೂತ ಸೌಕರ್ಯವಿಲ್ಲದೆ ಜನರು ಹಲವಾರು ಮೂಢನಂಬಿಕೆಗಳಿಂದ ನರಳುವಂತಾಗಿದೆ.

ರಾಜ್ಯದ ಗೊಲ್ಲ ಸಮುದಾಯದ ಹಿಂದುಳಿದಿರುವಿಕೆಯ ಇನ್ನೊಂದು ಮಗ್ಗುಲೆಂದರೆ ಶೈಕ್ಷಣಿಕ ಹಿಂದುಳಿದಿರುವಿಕೆ. ಇವರ ಸಾಕ್ಷರತೆ ಪ್ರಮಾಣ ರಾಜ್ಯದ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕಿಂತ ಮತ್ತು ಸಮುದಾಯಗಳಿಗಿಂತ ಕಡಿಮೆ ಇದೆ. ಅಲ್ಲದೆ ಔಪಚಾರಿಕ ವಿದ್ಯಾವಂತರ ಸಂಖ್ಯೆ ಅದರಲ್ಲಿಯೂ ಉನ್ನತ ಶಿಕ್ಷಣ ಪಡೆದವರ ಸಂಖ್ಯೆ ತುಂಬಾ ಕಡಿಮೆ ಎಂದೇ ಹೇಳಬಹುದು. ರಾಜ್ಯದಲ್ಲಿ ಬಹುತೇಕ ಗೊಲ್ಲ ಸಮುದಾಯದ

ತಂದೆ-ತಾಯಂದಿರು ತಮ್ಮ ಮಕ್ಕಳನ್ನ ಶಾಲೆಗೆ ಕಳುಹಿಸದೆ ದನ-ಕುರಿಗಳನ್ನ ಕಾಯಲು ಮತ್ತು ಬೇರೆಯವರ ಜಮೀನಿನಲ್ಲಿ ಕೂಲಿಯಾಳಾಗಿ ದುಡಿಯಲು ಕಳುಹಿಸುತ್ತಾರೆ. (ಹೆಚ್ಚಿನ ವಿವರಗಳನ್ನ ಅಧ್ಯಾಯ ೩ ರಲ್ಲಿ ವಿವರಿಸಲಾಗಿದೆ). ಈ ಸಮುದಾಯದ ಅಂಕಿ ಅಂಶಗಳನ್ನ ತೆಗೆದುಕೊಂಡರೆ ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯಿಂದಾಗಿ, ವ್ಯಾಪಾರದಲ್ಲಿ, ರಾಜಕೀಯ ಕ್ಷೇತ್ರದಲ್ಲಿ, ಖಾಸಗಿ ಮತ್ತು ಸಾರ್ವಜನಿಕ ಉದ್ದಿಮೆಗಳ ಕ್ಷೇತ್ರಗಳಲ್ಲಿ, ಮುಖ್ಯವಾಗಿ ಸರ್ಕಾರಿ ಉದ್ಯೋಗಗಳಲ್ಲಿ ಇವರ ಪಾಲು ತುಂಬಾ ಕಡಿಮೆ ಇದೆ ಎಂದು ಹೇಳಬಹುದು. ಇಂದು ಸರ್ಕಾರಿ-ಆಧುನಿಕ ಕಸುಬುಗಳು ಸಾಮಾಜಿಕ ಚಲನೆಯ ಸಾಧನಗಳು ಅಥವಾ ವಾಹಕಗಳಾಗುವ ಸಂದರ್ಭದಲ್ಲಿ ಹಿಂದುಳಿದ ಬುಡಕಟ್ಟುಗಳಾದ ಗೊಲ್ಲ ಸಮುದಾಯದ ಮಟ್ಟಿಗೆ ಸರ್ಕಾರಿ ಉದ್ಯೋಗಗಳು ಅತ್ಯಂತ ಪರಿಣಾಮಕಾರಿಯಾದ ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುವ ಸಾಧನವಾಗಬೇಕು. ಕರ್ನಾಟಕದ ಕೆಲವು ಭಾಗಗಳಲ್ಲಂತೂ ಗೊಲ್ಲ ಸಮುದಾಯದವರಿಗೆ ನಾಗರೀಕ ಸಮಾಜದ ಗಾಳಿ ತಾಗಲಿಲ್ಲವೇನೋ ಅನ್ನಿಸುತ್ತದೆ. ಇಂತಹ ನಿಕೃಷ್ಟ ಸ್ಥಿತಿಯಲ್ಲಿರುವ ಗೊಲ್ಲ ಸಮುದಾಯದ ಸರ್ವತೋಮುಖ ಅಭಿವೃದ್ಧಿಗೆ ಸರ್ಕಾರವಾಗಲೀ ಅಥವಾ ಸರ್ಕಾರೇತರ ಸಂಸ್ಥೆಗಳಾಗಲೀ ವಿಶೇಷ ಗಮನ ಹರಿಸಿಲ್ಲದಿರುವುದು ಕಣ್ಣಿಗೆ ಕಟ್ಟಿದ ಕನ್ನಡಿಯಂತಿದೆ. ಈ ಸಮುದಾಯದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯ ಬಲಹೀನತೆಗಳನ್ನ ಅಥವಾ ಹಿಂದುಳಿದಿರುವಿಕೆಗಳನ್ನ ಮನಗಂಡ ಅರೆ-ಸುಶಿಕ್ಷಿತ ಮತ್ತು ಕೆಲವು ಸುಶಿಕ್ಷಿತ ಸಮುದಾಯದ ಮುಖಂಡರು ಸಮುದಾಯದ ಏಳಿಗೆಗಾಗಿ, ಸಂಘಟಿತರಾಗಿ ರಾಜ್ಯದ ವಿವಿಧ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದಲ್ಲಿ ಜಾತಿ ಸಂಘಗಳನ್ನ ಸ್ಥಾಪಿಸಿ, ಶಿಕ್ಷಣಕ್ಕೆ ಪ್ರೋತ್ಸಾಹಿಸುತ್ತಾ, ನ್ಯಾಯಯುತ ಬೇಡಿಕೆಗಳಿಗಾಗಿ ಹೋರಾಟ ಮಾಡುತ್ತಾ ತಮ್ಮ ಸಮುದಾಯದ ಹಿತರಕ್ಷಣೆಯನ್ನ ಕಾಪಾಡಲು ಪ್ರಾರಂಭಿಸಿದರು. ಇವರ ಪ್ರಯತ್ನಗಳು ಮತ್ತು ಹೋರಾಟಗಳು ಕೆಲವು ಸಲ ಸಾಮಾಜಿಕ ಚಳುವಳಿಗಳಾಗಿ ರೂಪುಗೊಂಡಿರುವುದನ್ನ ಇತಿಹಾಸ ತಿಳಿಸುತ್ತದೆ.

### ಸಂಘಟನೆ

ರಾಜ್ಯದ ಗೊಲ್ಲ ಜನತೆ ತಮ್ಮ ಅಭಿವೃದ್ಧಿಗೆ ಸ್ವತಂತ್ರ ಪೂರ್ವದಲ್ಲೇ ಪ್ರಯತ್ನಗಳನ್ನ ನಡೆಸಿದ್ದಾಗ್ಯೂ, ವ್ಯವಸ್ಥಿತ ಮತ್ತು ಸಂಘಟನಾತ್ಮಕ ಹೋರಾಟಗಳು ಸಂಭವಿಸಿದ್ದುದು ಸ್ವತಂತ್ರದ ನಂತರವೇ. ಬ್ರಿಟಿಷ್ ಶಿಕ್ಷಣದಿಂದ ಪ್ರಭಾವಿತರಾದ ಕೆಲವೇ ಕೆಲವು ಸಮುದಾಯದ ಮುಖಂಡರು ಬೆಂಗಳೂರು ಹಾಗೂ ರಾಜ್ಯದ ಇತರೆಡೆಗಳಲ್ಲಿ ಜಾತಿ ಸಂಘ ಮತ್ತು ವಿದ್ಯಾರ್ಥಿನಿಲಯಗಳನ್ನ ಸ್ಥಾಪಿಸುವುದರ ಮೂಲಕ ಸಮುದಾಯದ ಅಭಿವೃದ್ಧಿಗೆ ಅಡಿಪಾಯ ಹಾಕಿದರು. ಇದರ ಒಂದು ಪ್ರಯತ್ನವಾಗಿ ೧೯೨೪ ರಲ್ಲಿ ಬಿ ಅಬ್ಬಯ್ಯ ನಾಯ್ಡು ಮತ್ತು ಎಂ ರಂಗಪ್ಪ ಅವರುಗಳ ಮುಖಂಡತ್ವದಲ್ಲಿ ಗೊಲ್ಲ ಸಮುದಾಯದ ವಿದ್ಯಾರ್ಥಿಗಳ ಶಿಕ್ಷಣದ ಅನುಕೂಲಕ್ಕಾಗಿ ಬೆಂಗಳೂರಿನ ಗಾಂಧಿ ನಗರದಲ್ಲಿ ವಿದ್ಯಾರ್ಥಿ ನಿಲಯವನ್ನ ಸ್ಥಾಪಿಸಲಾಯಿತು. ಇದು ಇಂದು 'ಯಾದವ'

ಹಾಸ್ಟೆಲ್ ಎಂಬ ನಾಮಾಂಕಿತದಿಂದ ಅನೇಕ ಬಡ ಮತ್ತು ರಾಜ್ಯದ ಗ್ರಾಮೀಣ ಗೊಲ್ಲ ಸಮುದಾಯದ ವಿದ್ಯಾರ್ಥಿಗಳ ಶೈಕ್ಷಣಿಕ ಉನ್ನತಿಗೆ ಮತ್ತು ಆ ಮೂಲಕ ಉನ್ನತ ನೌಕರಿಗೆ ರಹದಾರಿಯಾಗುವಲ್ಲಿ ಒಂದು ಮೈಲಿಗಲ್ಲಾಗಿದೆ. ಬೆಂಗಳೂರಿನ ಆಗಿನ ಲೋಕಸಭಾ ಸದಸ್ಯರಾದ ಶ್ರೀ ರಾಮಯ್ಯ, ಗೊಲ್ಲ ಸಮುದಾಯದವರಾಗಿದ್ದು ಕೊಂಡು ಗೊಲ್ಲ ಸಮುದಾಯದ ಅಭಿವೃದ್ಧಿಗೆ ಹಲವು ಕಲ್ಯಾಣ ಕಾರ್ಯಕ್ರಮಗಳನ್ನ ರೂಪಿಸಿದರು. ಇದೇ ರೀತಿ ಗೊಲ್ಲ ಸಮುದಾಯದ ವ್ಯಾಪಾರಸ್ಥರಾದ ಮುನಿವೆಂಕಟಪ್ಪ ಯಾದವರವರು ಬೆಂಗಳೂರಿನ ಗಾಂಧಿ ನಗರದಲ್ಲಿ ಯಾದವ ಹಾಸ್ಟೆಲ್ ನಿರ್ಮಿಸುವುದಕ್ಕೆ ಹಣಕಾಸಿನ ನೆರವನ್ನ ನೀಡಿರುವುದು ದಾಖಲಿಸ್ಪಟ್ಟಿದೆ. ಸರ್ಕಾರ ಅಥವಾ ಬೇರೆ ಯಾರು ಗಮನಿಸದಿದ್ದ ಆ ಸಮಯದಲ್ಲಿ ಅಂದರೆ ಏಳೆಂಟು ದಶಕಗಳ ಹಿಂದೆಯೇ ಶ್ರೀಗಳಾದ ಕೆ ಕುಪ್ಪಸ್ವಾಮಿಯವರು. ಎಂ ಎಂ ಸಂತತಿಯವರು, ದೊಡ್ಡಕುಂಟೆ ಶ್ರೀ ಕದಿರಪ್ಪನವರು, ಡಾ ಬಿ ಜಯರಾಮ್, ಎನ್ ನಾಗರಾಜು, ಎಸ್ ಸಿದ್ದಪ್ಪ, ಎ ಕೃಷ್ಣಪ್ಪ, ಎಂ ವಿ ವೀರಪ್ಪ, ದೊಡ್ಡಿನ ಕುಂಟೆ ರಾಮಕೃಷ್ಣಪ್ಪ ಮುಂತಾದ ಮಹನೀಯರು ಸಮುದಾಯದ ಒಳಿತಿಗಾಗಿ ಕೈಗೊಂಡ ಸೇವಾ ಕರ್ತವ್ಯಗಳಿಂದಾಗಿ ಸಮುದಾಯದ ಯುವಕರು ಸ್ವಲ್ಪ ಮಟ್ಟಿಗೆ ವಿದ್ಯಾವಂತರಾಗುವುದರಲ್ಲಿ ಯಶಸ್ವಿಯಾದರು. ಈ ಮಹನೀಯರುಗಳು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಿಂದ ಹಿಡಿದು ಸ್ನಾತಕೋತ್ತರ ವಿದ್ಯಾರ್ಥಿಗಳವರೆಗೆ ವಿದ್ಯಾರ್ಥಿ ವೇತನದ ಸೌಕರ್ಯ ಒದಗಿಸಿದರು. ಇವರುಗಳು ಹೋರಾಟದ ಹಾದಿಯನ್ನ ಕಂಡುಕೊಂಡು ೧೯೪೨ ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ಗೊಲ್ಲರ ಸಂಘವನ್ನ ಸ್ಥಾಪಿಸಿದರು. ಈ ಮಹತ್ತರ ಹೆಜ್ಜೆ ಕರ್ನಾಟಕದಲ್ಲಿ ಗೊಲ್ಲರ ಚಳುವಳಿಗೆ ನಾಂದಿಯಾಗಿ ಒಂದು ಮೈಲಿಗಲ್ಲಾಯಿತು. ಜೊತೆಗೆ ವಿದ್ಯಾವಂತ ಸಮುದಾಯದ ಯುವಕರು ರಾಜ್ಯದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಗೊಲ್ಲರನ್ನು ಸಂಘಟಿಸಿ ಜಾತಿ ಸಂಘಗಳನ್ನ ಸ್ಥಾಪಿಸಿ ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಕಾರಣರಾಗಿ, ಅಲ್ಲಲ್ಲಿ ಸಮುದಾಯದ ಸಮ್ಮೇಳನಗಳನ್ನ ನಡೆಸಿ, ಶಿಕ್ಷಣ, ರಾಜಕೀಯ ಮತ್ತು ಸಂಘಟನೆಯ ಅರಿವು ಬರುವಂತೆ ಪ್ರೇರೇಪಿಸಿದರು.

ಸುಮಾರು ೮೦ ವರ್ಷಗಳ ಹಿಂದೆ ಅಂದರೆ ೧೯೨೪ ರಲ್ಲಿ ರಾಜ್ಯದ ಗೊಲ್ಲ ಸಮುದಾಯದ ಒಂದು ಆಶಾಕಿರಣವಾಗಿ ಕರ್ನಾಟಕ ರಾಜ್ಯ ಪ್ರದೇಶ ಗೊಲ್ಲರ ಸಂಘವು ಅಸ್ತಿತ್ವಕ್ಕೆ ಬಂದು ಸಮುದಾಯದ ಸಂಘಟಿತ ಹೋರಾಟಕ್ಕೆ ಮತ್ತು ಅಭಿವೃದ್ಧಿಗೆ ದಿಕ್ಸೂಚಿಯಾಯಿತು. ಈ ಸಂಘದ ಸ್ಥಾಪನೆಗೆ ಹಲವಾರು ಸಮುದಾಯದ ಮಹನೀಯರುಗಳು ಕಾರಣಕರ್ತರಾಗಿದ್ದಾರೆ. ಅವರುಗಳಲ್ಲಿ ಮಾಗಡಿ ರಂಗಪ್ಪನವರು ಮತ್ತು ದುರ್ಗದ ಕೃಷ್ಣಪ್ಪನವರು ಸ್ಥಾಪಕರಲ್ಲಿ ಮುಖ್ಯವಾದವರುಗಳಾಗಿದ್ದಾರೆ. ಗೊಲ್ಲ ಸಮುದಾಯಕ್ಕೆ ೫ ಸಾವಿರ ವರ್ಷಗಳ ಇತಿಹಾಸವಿದ್ದರೂ, ಇಲ್ಲಿಗೆ ೮೦ ವರ್ಷಗಳ ಹಿಂದೆಯೇ ಜಾತಿಯ ಸಂಘಟನೆಗೆ ಸಂಘವನ್ನ ಸ್ಥಾಪಿಸಿದುದು ಒಂದು ಮೈಲಿಗಲ್ಲಾ ಯಿತು. ಈ ಪ್ರದೇಶ ಗೊಲ್ಲರ ಸಂಘದ ಸ್ಥಾಪನೆಯು ರಾಜ್ಯದ ಇತರೆ ಜಿಲ್ಲಾ ಮತ್ತು

ತಾಲ್ಲೂಕು ಕೇಂದ್ರಗಳಲ್ಲಿ ಸಂಘವನ್ನ ಸ್ಥಾಪಿಸಲು ಪ್ರೇರಣೆಯಾಯಿತು. ಅಂದಿನಿಂದ ಇಂದಿನವರೆಗೆ ಸಮುದಾಯದ ಮುಖಂಡರುಗಳು, ರಾಜ್ಯದೆಲ್ಲೆಡೆ ಸಂಚರಿಸಿ, ಜಾತಿ ಸಂಘಗಳನ್ನ ಸ್ಥಾಪಿಸುವ ಮೂಲಕ ಸಮುದಾಯದ ಸಂಘಟನೆಗೆ ಕಾರಣಕರ್ತರಾಗಿದ್ದಾರೆ.

**ಶೈಕ್ಷಣಿಕ ಸ್ಥಿತಿಗತಿ**

ಶಿಕ್ಷಣವು ಒಂದು ಸಾಮಾಜಿಕ ಬದಲಾವಣೆಯ ನಿಯೋಗಿಯಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು, ಮೇಲ್ಮುಖ ಚಲನೆಗೆ ಅನುವು ಮಾಡಿ ಕೊಡುತ್ತದೆ. ಶಿಕ್ಷಣವು ವ್ಯಕ್ತಿಯ ಅಂತಸ್ತಿನ ನಿರ್ಧಾರಕ ಅಂಶವಾಗಿದೆ. ಒಂದು ದೇಶದ ಸಮುದಾಯದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನ ಅವಲಂಭಿಸಿದೆ. ಶಿಕ್ಷಣ ವಿಲ್ಲದ ವ್ಯಕ್ತಿ ವೈಯಕ್ತಿಕವಾಗಿಯೇ ಆಗಲಿ ಸಾಮಾಜಿಕವಾಗಿಯೇ ಆಗಲಿ ಉನ್ನತಿ ಯಾಗಲು ಸಾಧ್ಯವಿಲ್ಲ. ವ್ಯಕ್ತಿಯ ಮತ್ತು ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದಲ್ಲಿ ಮತ್ತು ಸಮಾಜದ ಮುಖ್ಯವಾಹಿನಿಯಲ್ಲಿ ಮಿಳಿತ ವಾಗಬೇಕಾದರೆ ಶಿಕ್ಷಣ ಅತ್ಯಂತ ಅಗತ್ಯವಾಗಿದೆ.

ರಾಜ್ಯದ ಗೊಲ್ಲ ಸಮುದಾಯವು ಶಿಕ್ಷಣ ರಂಗದಲ್ಲಿ ಮತ್ತು ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದಿದೆ. ಇವರ ಸಾಕ್ಷರತ್ತೆ ರಾಜ್ಯದ ಸರಾಸರಿ ಸಾಕ್ಷರತೆಗಿಂತ ಅತ್ಯಂತ ಕಡಿಮೆ ಇದೆ. ಗ್ರಾಮೀಣ ಭಾಗದಲ್ಲಿ ವಾಸಿಸುವವರು ಬಹುಸಂಖ್ಯಾತರು ಅನಕ್ಷರಸ್ಥರು. ಇತ್ತೀಚೆಗೆ ರಾಜ್ಯದ ಸಾಮೂಹಿಕ ಸಾಕ್ಷರತಾ ಆಂದೋಲನದ ಪ್ರಭಾವದಿಂದಾಗಿ ಅಲ್ಲೊಬ್ಬ ಇಲ್ಲೊಬ್ಬ ಅಕ್ಷರಸ್ಥರಾಗಿದ್ದಾರೆ. ಔಪಚಾರಿಕ, ಆಧುನಿಕ ಶಿಕ್ಷಣ ಅಂದರೆ ಶಾಲಾ ಶಿಕ್ಷಣ ಗೊಲ್ಲ ಸಮುದಾಯದಕ್ಕೆ ಅತ್ಯಂತ ಹೊಸದು ಮತ್ತು ಇತ್ತೀಚಿನದು. ಹಿಂದೆ ಮಕ್ಕಳು ತಮ್ಮ ತಂದೆ-ತಾಯಿ ಮತ್ತು ಕುಟುಂಬದ ಸದಸ್ಯರಿಂದ ಅನೌಪಚಾರಿಕ ಶಿಕ್ಷಣವನ್ನ ಕೆಲಸ ಕಾರ್ಯಗಳ ಮೂಲಕ ಪಡೆಯುತ್ತಿದ್ದರು. ಅಂದರೆ ಹೊಲ ಉಳುವುದು ಹೇಗೆ ಕುರಿ, ಮೇಕೆ, ದನಗಳನ್ನ ಸಾಕುವುದು ಹೇಗೆ ಎಂಬುದರ ಬಗ್ಗೆ ತಮ್ಮ ಕುಟುಂಬದ ಸದಸ್ಯರಿಂದಲೇ ಅನೌಪಚಾರಿಕ ಶಿಕ್ಷಣವನ್ನ ಪಡೆಯುತ್ತಿದ್ದರು. ಇತರೆ ಔದ್ಯೋಗಿಕ ಶಿಕ್ಷಣವನ್ನ ಕುಟುಂಬದ ಮತ್ತು ಸಮುದಾಯದ ಜನರೊಂದಿಗೆ ಬೆರೆತು ಕಲಿಯುತ್ತಿದ್ದರು. ಗೊಲ್ಲ ಸಮುದಾಯದ ಮಕ್ಕಳು ಶಾಲಾ-ಕಾಲೇಜೆಂಬುದನ್ನ ತಿಳಿದಿರಲಿಲ್ಲ.

ಆಧುನಿಕ, ಬ್ರಿಟಿಷ್, ಔಪಚಾರಿಕ ಶಿಕ್ಷಣ ಜಾರಿಗೆ ಬಂದ ಮೇಲೆ, ರಾಜ್ಯದ ಬೇರೆ ಬೇರೆ ಜಾತಿ ಸಮುದಾಯದ ಅವರವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣವನ್ನ ಪಡೆದು ವಿದ್ಯಾವಂತರಾಗತೊಡಗಿದರು. ಆದರೆ ಗೊಲ್ಲ ಸಮುದಾಯ ದವರಿಗೆ ಔಪಚಾರಿಕ ಶಿಕ್ಷಣದ ಅವಕಾಶವೇ ಸಿಗಲಿಲ್ಲ. ಕಾರಣ ಇವರ ಅತೀ ಹಿಂದುಳಿದಿರುವಿಕೆ ಮತ್ತು ಗ್ರಾಮೀಣ ಭಾಗದಲ್ಲಿ ವಾಸವಾಗಿರುವುದರಿಂದ. ಇದು ಇವರು ತಮ್ಮ ಮಕ್ಕಳನ್ನ ಶಾಲೆಗೆ ಕಳುಹಿಸುವ ಆಸಕ್ತಿಯನ್ನೇ ಕಡಿಮೆಮಾಡಿದೆ. ಈ ಸಮುದಾಯದ ಬಹುತೇಕ ತಂದೆ-ತಾಯಿಗಳು ತಮ್ಮ ಮಕ್ಕಳನ್ನ ಶಾಲೆಗೆ ಕಳುಹಿಸದೆ

ದನ–ಕುರಿಗಳನ್ನ ಮೇಯಿಸಲು ಕಳುಹಿಸುತ್ತಾರೆ. ಯಾರಾದರೂ ಮಕ್ಕಳನ್ನ ಏಕೆ ಶಾಲೆಗೆ ಕಳುಹಿಸುವುದಿಲ್ಲ ಎಂದು ಕೇಳಿದರೆ 'ಶಾಲೆಗೆ ಹೋಗಿ ಓದಿ ಯಾರು ಉದ್ಧಾರ ಆಗಿದ್ದಾರೆ? ನಮ್ಮ ಅಪ್ಪ ಓದಿಲ್ಲ, ನಮ್ಮ ತಾತ ಓದಿಲ್ಲ ಅವರೆಲ್ಲಾ ಜೀವನ ಮಾಡಲಿಲ್ಲವೇ? ಎಂದು ಮೂದಲಿಸುತ್ತಾರೆ. ಇದು ಇವರ ಶಿಕ್ಷಣದ ಹಿಂದುಳಿದಿರುವಿಕೆ (backwardness) ಯನ್ನ ತೋರಿಸುತ್ತದೆ. ಇದಕ್ಕೆ ಅತ್ಯಂತ ಬಲವಾದ ಕಾರಣವೆಂದರೆ ಇವರು ಪ್ರತ್ಯೇಕ(isolated)ವಾಗಿ ಹಟ್ಟಿಗಳಲ್ಲಿ ವಾಸಿಸುವುದರಿಂದ. ಈ ಹಟ್ಟಿಗಳಲ್ಲಿ ಶಿಕ್ಷಣದ ಅರಿವು ಮತ್ತು ಶಾಲಾ ಸೌಲಭ್ಯಗಳಿರುವುದಿಲ್ಲ. ಒಂದು ವೇಳೆ ಈ ಹಟ್ಟಿಗಳಲ್ಲಿರುವ ಮಕ್ಕಳು ಶಾಲೆಗೆ ಹೋಗಬೇಕಾದರೆ ಹಟ್ಟಿಯಿಂದ ಬಹುದೂರ ಬೇರೆ ಹಳ್ಳಿಗೆ ಹೋಗಿ ಕಲಿಯಬೇಕಾಗುತ್ತದೆ. ಜೊತೆಗೆ ಹಟ್ಟಿಗಳಲ್ಲಿರುವ ಸಾಮಾಜಿಕ ಪರಿಸರ (social environment) ವನ್ನ ನೋಡಿದರೆ ಶಾಲೆ ಮತ್ತು ಶಿಕ್ಷಣದ ಬಗ್ಗೆ ಯೋಚಿಸುವ ಮನಸ್ಸು ಬರುವುದಿಲ್ಲ. ಇನ್ನೂ ಕಲಿಕೆಯ ಮಾತೆಲ್ಲಿ ಬಂತು. ಆ ಮಟ್ಟಿಗೆ ಸಾಮಾಜಿಕ ಪರಿಸರ ನಿರ್ಮಾಣವಾಗಿರುತ್ತದೆ. ಕರ್ನಾಟಕದ ಬಹುತೇಕ ಗೊಲ್ಲರ ಹಟ್ಟಿಗಳು ಮೂಲ ಅಗತ್ಯ ನಾಗರೀಕ ಸೌಲಭ್ಯಗಳಿಲ್ಲದೆ ಕೊಳಗೇರಿಗಳಂತಾಗಿವೆ. ಕೆಲವು ಹಟ್ಟಿಗಳಲ್ಲಿ ಕೆಲವು ಗ್ರಾಮೀಣ ಅಭಿವೃದ್ಧಿ ಯೋಜನೆಗಳಾದ ರಸ್ತೆ, ನೀರು, ಚರಂಡಿಗಳು ನಿಸರ್ಗದತ್ತವಾದ ಹಟ್ಟಿಗಳ ನೈರ್ಮಲ್ಯವನ್ನ ಕೆಡಿಸಿವೆ ಎಂದರೆ ತಪ್ಪಾಗಲಾರದು. ಇಂತಹ ಪರಿಸರದಲ್ಲಿ ಜನಿಸಿದ ಮಕ್ಕಳಿಗೆ ಎಂತಹ ಶಿಕ್ಷಣ ಸಿಕ್ಕೀತು? ಶಿಕ್ಷಣ ಕಲಿಯಲು ಮನಸ್ಸು ಹೇಗೆ ಬಂದೀತು? ಪ್ರೋತ್ಸಾಹ ಮತ್ತು ಸ್ಫೂರ್ತಿ ಹೇಗೆ ಬರುತ್ತದೆ? ಇತ್ತೀಚೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಶಿಕ್ಷಣದ ಘೋಷಣೆಗಳಾದ ೧೪ ವರ್ಷದವರೆಗಿನ ಮಕ್ಕಳಿಗೆ ಉಚಿತ ಮತ್ತು 'ಕಡ್ಡಾಯ ಶಿಕ್ಷಣ'ದ ಪರಿಣಾಮದಿಂದಾಗಿ ಮತ್ತು ರಾಜ್ಯ ಸರ್ಕಾರದ ಪ್ರಾಥಮಿಕ ಶಿಕ್ಷಣಕ್ಕೆ ಕೊಡುತ್ತಿರುವ ಹಲವು ಉತ್ತೇಜನಗಳಿಂದಾಗಿ ಗೊಲ್ಲ ಸಮುದಾಯದ ಮಕ್ಕಳು ಇಗೀಗ ಶಾಲೆಗೆ ಹೋಗಲು ಪ್ರಾರಂಭಿಸಿದ್ದಾರೆ. ಜೊತೆಗೆ ಇಂದು ಬಹುತೇಕ ಗೊಲ್ಲರ ಹಟ್ಟಿಗಳಲ್ಲಿ ಕೊನೇ ಪಕ್ಷ ಒಂದು ಪ್ರಾಥಮಿಕ ಶಾಲೆಯನ್ನ ಸ್ಥಾಪಿಸುತ್ತಿರುವುದನ್ನ ಕಾಣಬಹುದು. ಇದು ಈಗಿನ ಪೀಳಿಗೆಯ ಮಕ್ಕಳಿಗೆ ವರದಾನವಾಗಬಹುದು. ಆದರೆ ಈ ಸಮುದಾಯದ ಬಹುತೇಕ ವಯಸ್ಕರು ಮತ್ತು ಯುವಕರು ಅನಕ್ಷರಸ್ಥರು ಮತ್ತು ಔಪಚಾರಿಕ ಶಿಕ್ಷಣದಿಂದ ವಂಚಿತರಾದವರು.

**ಕೋಷ್ಟಕ: ೧೦.೧ ಸಮೀಕ್ಷೆಗೊಳಪಟ್ಟವರ ಶೇಕಡಾವಾರು ಶೈಕ್ಷಣಿಕ ಮಟ್ಟ**

| ಸಂ | ಶೈಕ್ಷಣಿಕ ಮಟ್ಟ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಕ್ಷರಸ್ಥರು | ೪೨.೮೪ | ೩೨.೭೩ | ೩೮.೧೭ |
| ೨ | ಅನಕ್ಷರಸ್ಥರು | ೫೭.೧೬ | ೬೭.೨೭ | ೬೧.೮೩ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ಕಾಡುಗೊಲ್ಲ ಸಮುದಾಯವು ಶಿಕ್ಷಣದಲ್ಲಿ ಹಿಂದುಳಿದಿರುವುದನ್ನು ನಾವು ಈಗಾಗಲೇ ತಿಳಿದುಕೊಂಡಿದ್ದೇವೆ. ಪ್ರಸ್ತುತ ಸಮೀಕ್ಷಾ ಕಾರ್ಯದಲ್ಲಿ ಕಂಡು ಬಂದ ಅಧ್ಯಯನದ ಫಲಿತಾಂಶವನ್ನು ನೋಡಿದಾಗ ಈ ಸಮುದಾಯವು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಗೆ ಸಾಕ್ಷಿಯಾಗುತ್ತದೆ. ಶಿಕ್ಷಣದ ಮಟ್ಟವನ್ನು ತೋರಿಸುವ ಕೋಷ್ಟಕದ ಪ್ರಕಾರ ರಾಜ್ಯದಲ್ಲಿ ಅಕ್ಷರಸ್ಥರ ಸಂಖ್ಯೆ ಕೇವಲ ಶೇಕಡಾ ೩೮.೧೭ ರಷ್ಟು ಮಾತ್ರ. ಇನ್ನು ಶೇಕಡಾ ೬೧.೮೩ ರಷ್ಟು ಜನಸಂಖ್ಯೆ ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಅವರಲ್ಲಿ ಶೇಕಡಾ ೩೨.೭೩ ರಷ್ಟು ಮಹಿಳೆಯರು ಮತ್ತು ಶೇಕಡಾ ೪೨.೮೪ ರಷ್ಟು ಪುರುಷರು ಅಕ್ಷರಸ್ಥರಾಗಿದ್ದಾರೆ. ಶೇಕಡಾ ೬೭.೨೭ ರಷ್ಟು ಮಹಿಳೆಯರು ಹಾಗೂ ಶೇಕಡಾ ೫೭.೧೬ ರಷ್ಟು ಪುರುಷರು ಅನಕ್ಷರಸ್ಥರಾಗಿದ್ದಾರೆ. ಇದು ಕೇವಲ ಅನಕ್ಷರಸ್ಥರ ಮಟ್ಟವನ್ನು ತೋರಿಸಿದರೆ ಇನ್ನು ಶಾಲಾ ಕಾಲೇಜಿಗೆ ಹೋಗುವವರ ಸಂಖ್ಯೆ ಅಂದರೆ ಔಪಚಾರಿಕ ಶಿಕ್ಷಣ ಪಡೆಯುವರ ಸಂಖ್ಯೆ ಇನ್ನು ಕಡಿಮೆ ಎಂದೇ ಹೇಳಬಹುದು.

**ಶೈಕ್ಷಣಿಕ ಮಟ್ಟ**

**ಕೋಷ್ಟಕ: ೧೦.೨ ಸಮೀಕ್ಷೆಗೊಳಪಟ್ಟವರ ಶೇಕಡಾವಾರು ಶೈಕ್ಷಣಿಕ ಸ್ಥಾನಮಾನ**

| ಕ್ರಸಂ | ಸ್ಥಾನಮಾನ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಕ್ಷರಸ್ಥರು | ೪೨.೮೪ | ೩೨.೭೩ | ೩೮.೧೭ |
| ೧ | ಪ್ರಾಥಮಿಕ | ೧೬.೦೬ | ೨೨.೪೮ | ೧೮.೬೦ |
| ೨ | ಮಾಧ್ಯಮಿಕ | ೨೯.೫೫ | ೨೯.೬೪ | ೨೯.೫೯ |
| ೩ | ಪ್ರೌಢ | ೩೨.೫೫ | ೩೫.೧೮ | ೩೩.೫೯ |
| ೪ | ಪಿಯುಸಿ | ೧೪.೧೩ | ೧೦.೪೨ | ೧೨.೬೬ |
| ೫ | ಡಿಪ್ಲೊಮ | ೦.೨೧ | ೦.೦೦ | ೦.೧೩ |
| ೬ | ಪದವಿ | ೪.೯೩ | ೧.೬೩ | ೩.೬೨ |
| ೭ | ಸ್ನಾತಕೋತ್ತರ ಪದವಿ | ೦.೮೬ | ೦.೦೦ | ೦.೫೨ |
| ೮ | ಇತರ ಪದವಿ | ೧.೭೧ | ೦.೬೫ | ೧.೨೯ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ಪ್ರಸ್ತುತ ಅಧ್ಯಯನದ ಪ್ರಕಾರ ರಾಜ್ಯದಲ್ಲಿ ಶೇಕಡಾ ೧೮.೬೦ ರಷ್ಟು ಜನರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದರೆ, ಅವರಲ್ಲಿ ಶೇಕಡಾ ೨೨.೪೮ ರಷ್ಟು ಮಹಿಳೆಯರಾಗಿದ್ದು, ಶೇಕಡಾ ೧೬.೦೬ ರಷ್ಟು ಪುರುಷರಾಗಿದ್ದಾರೆ. ಶೇಕಡಾ ೨೯.೫೯ರಷ್ಟು ಜನರು ಮಾಧ್ಯಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಅಂತೆಯೇ ಶೇಕಡಾ ೩೩.೫೯ ರಷ್ಟು ಹೈಸ್ಕೂಲ್ ಶಿಕ್ಷಣ ಹೊಂದಿದವರಾಗಿದ್ದಾರೆ, ಅವರಲ್ಲಿ ಶೇಕಡಾ ೩೫.೧೮ ರಷ್ಟು ಮಹಿಳೆಯರಾಗಿದ್ದಾರೆ, ಶೇಕಡಾ ೩೨.೫೫ ರಷ್ಟು ಜನರು ಪುರುಷರಾಗಿದ್ದಾರೆ.

ಕೇವಲ ಶೇಕಡಾ ೧೨.೬೬ ರಷ್ಟು ಜನ ಪಿಯುಸಿ ಹಂತದವರೆಗೆ ಓದಿರುವುದು ಈ ಅಧ್ಯಯನದಿಂದ ಕಂಡುಬರುತ್ತದೆ. ಅವರಲ್ಲಿ ೧೦.೪೨ ರಷ್ಟು ಜನ ಮಹಿಳೆಯರಾಗಿದ್ದಾರೆ, ೧೪.೧೩ ರಷ್ಟು ಪುರುಷರಾಗಿದ್ದಾರೆ. ಪದವಿ ಹಂತದವರೆಗೆ ಓದಿರುವವರಲ್ಲಿ ಈ ಸಮುದಾಯದಲ್ಲಿ ಶೇಕಡಾ ೩.೬೨ ರಷ್ಟಿದ್ದಾರೆ. ಅವರಲ್ಲಿ ಶೇಕಡಾ ೧.೬೩ ರಷ್ಟು ಮಹಿಳೆಯರಿದ್ದಾರೆ, ಶೇಕಡಾ ೪.೯೩ ರಷ್ಟು ಪುರುಷರಿದ್ದಾರೆ. ಇದು ಮಹಿಳೆಯರನ್ನು ಉನ್ನತ ಶಿಕ್ಷಣಕ್ಕೆ ಪ್ರೇರೇಪಿಸಿಲ್ಲದಿರುವುದನ್ನು ತೋರಿಸುತ್ತದೆ. ಸ್ನಾತಕೋತ್ತರ ಶಿಕ್ಷಣದಲ್ಲಿ ಕಾಡುಗೊಲ್ಲ ಸಮುದಾಯದ ಪ್ರಾತಿನಿಧ್ಯ ಕೇವಲ ಶೇಕಡಾ ೦.೫೨. ಅಂದರೆ ಶೇಕಡಾ ಒಂದಕ್ಕಿಂತಲೂ ಕಡಿಮೆ ಎಂದು ಹೇಳಬಹುದು. ಇದು ಈ ಸಮುದಾಯದ ಉನ್ನತ ಶಿಕ್ಷಣದ ಹಿಂದುಳಿದಿರುವಿಕೆಯನ್ನು ತೋರಿಸುತ್ತದೆ. ಪದವಿ ಮತ್ತು ಸ್ನಾತಕೋತ್ತರ ಪದವಿ ಮಟ್ಟದಲ್ಲಿ ಕಾಡುಗೊಲ್ಲ ಸಮುದಾಯದ ಶೇಕಡಾ ೪ ರಷ್ಟು ಮಂದಿ ಇದ್ದಾರೆ. ಇದು ಕಾಡುಗೊಲ್ಲ ಸಮುದಾಯದ ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ತೋರಿಸುತ್ತದೆ. ಇತ್ತೀಚೆಗಷ್ಟೆ ಕಾಡುಗೊಲ್ಲ ಸಮುದಾಯದವರು ಔಪಚಾರಿಕವಾಗಿ ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸಲು ಪ್ರಾರಂಭಿಸುವುದರಿಂದ ಶೈಕ್ಷಣಿಕ ಮುನ್ನಡೆಗೆ ಬಹುದೂರ ಕ್ರಮಿಸಬೇಕಾಗಿದೆ. ಈ ಕಾರಣದಿಂದಾಗಿ ಶೈಕ್ಷಣಿಕ ಹಿಂಬೀಳಿಕೆ ತುಂಬಾ ಹೆಚ್ಚಾಗಿದೆ. ಅಕ್ಷರಸ್ತರಲ್ಲದೆ, ಔಪಚಾರಿಕ ಶಿಕ್ಷಣ ಪಡೆದಿರುವವರ ಸಂಖ್ಯೆಯು ಕಡಿಮೆ ಎಂದೇ ಹೇಳಬಹುದು.

**ಸಾಮಾಜಿಕ ಸ್ಥಿತಿಗತಿ**

ಭಾರತೀಯ ಸಮಾಜವು ಏಣಿಶ್ರೇಣಿಯಿಂದ ಕೂಡಿದ್ದು, ಜಾತಿಯ ಅಸಮಾನತೆಗಳು ಪ್ರಮುಖ ಸ್ಥಾನ ಪಡೆದಿವೆ. ಭಾರತೀಯ ಸಮಾಜದಲ್ಲಿ ಸುಮಾರು ೬೫೦೦ ಜಾತಿ ಸಮುದಾಯಗಳಿದ್ದು, ಈ ಸಮುದಾಯಗಳು ಸಾಮಾಜಿಕವಾಗಿ ಸಮನಾಗಿರದೆ ಕೀಳು ಮತ್ತು ಮೇಲು ಎಂಬ ಭಾವನೆಯನ್ನು ಹೊಂದಿವೆ. ಇಂತಹ ಸ್ತರೀಕೃತ ಇಂಡಿಯಾದ ಸಮಾಜದಲ್ಲಿ ದಲಿತ ಸಮುದಾಯದ ಹಾಗೆ ಬುಡಕಟ್ಟು ಸಮುದಾಯಗಳದ್ದು ಅತ್ಯಂತ ಕೆಳಸ್ತರವಾಗಿದೆ. ಅದರಲ್ಲಿಯೂ ಅಲೆಮಾರಿ ಸಮುದಾಯಗಳ ಪಾಡು ಅತ್ಯಂತ ನಿಕೃಷ್ಟವಾಗಿದೆ ಎಂದೇ ಹೇಳಬೇಕು. ಇಂತಹ ಸ್ತರೀಕೃತ (stratified) ಸಮಾಜದಲ್ಲಿ ಕಾಡುಗೊಲ್ಲರ ಸ್ಥಾನಮಾನವು ಅತ್ಯಂತ ಕೆಳಮಟ್ಟದ್ದು. ಜಾತಿಯ ಏಣಿಶ್ರೇಣಿಯಲ್ಲಿ ಕಾಡುಗೊಲ್ಲರು ಇತರ ದುರ್ಬಲ ಸಮುದಾಯಗಳ ಹಾಗೆ ಅತ್ಯಂತ ಕೆಳಸ್ತರವನ್ನು ಅಲಂಕರಿಸಿದ್ದಾರೆ. ಅಂದರೆ ಸಾಮಾಜಿಕವಾಗಿ ಅತ್ಯಂತ ಹಿಂದುಳಿದಿದ್ದು, ಹಲವಾರು ಸಾಮಾಜಿಕ ನ್ಯೂನ್ಯತೆಗಳಿಂದ ಬಳಲುತ್ತಿದ್ದಾರೆ. ಇವರ ಮೇಲೆ ಹಲವಾರು ಅನರ್ಹತೆಗಳನ್ನು ಹೋರಲಾಗುತ್ತಿದೆ.

ಸಾಮಾಜಿಕವಾಗಿ ಹಿಂದುಳಿದ್ದಿದ್ದಾರೆ ಎಂದರೆ ಒಟ್ಟು ಸಮುದಾಯದಲ್ಲಿ ಇವರ ಸಾಮಾಜಿಕ ಅಂತಸ್ತು ಹೇಗೆ ನಿರ್ಧಾರವಾಗುತ್ತಿದೆ ಎಂಬುದು. ಇಂದಿಗೂ ಜನರು ಕಾಡುಗೊಲ್ಲರನ್ನು ಗೊಲ್ಲ, ಹಟ್ಟಿಯವರು, ಗೊಲ್ರು, ಹಟ್ಟಿ ಜನ, ಗೊಲ್ಲರಟ್ಟಿಯವರು

ಎಂದು ಸಂಬೋಧಿಸುತ್ತಾರೆ. ಕೆಲವೊಂದು ಬಾರಿ ಗೊಲ್ಲರನು, ಗೊಲ್ಲರಟ್ಟಿಯನು ಎಂದು ಸಂಬೋಧಿಸುವುದನ್ನು ನೋಡಿದರೆ ಸಮಾಜ ಹೇಗೆ ಸಾಮಾಜಿಕವಾಗಿ ಕೆಳ ಹಂತಸ್ತಿನಲ್ಲಿಟ್ಟು ನೋಡುತ್ತದೆ ಎಂಬುದು ಅರ್ಥವಾಗಲಿಕ್ಕೆ ಕಷ್ಟವಾಗುವುದಿಲ್ಲ. ಇಂತಹ ಸಮಾಜದಲ್ಲಿ ಕಳಂಕಿತ (stigmatised) ಸಮುದಾಯದಂತೆ ಸಮಾಜ ದೂಡಿದೆ ಎಂಬುದು ಅರ್ಥವಾಗುತ್ತದೆ.

ಜೊತೆಗೆ ಹಟ್ಟಿಯಲ್ಲಿರುವ ಸಾಮಾಜಿಕ ಪರಿಸರ (social enviornment) ಮತ್ತು ಜೀವನ ವಿಧಾನ(living conditions)ವನ್ನು ನೋಡಿದರೆ ಹಟ್ಟಿ ಜನರ ಸಾಮಾಜಿಕ ಹಿಂದುಳಿದಿರುವಿಕೆ (social backwardness) ಅರ್ಥವಾಗುತ್ತದೆ. ನಮ್ಮಷ್ಟಕ್ಕೆ ನಾವು ನಮ್ಮ ಸಂಸ್ಕೃತಿ ಶ್ರೇಷ್ಠ, ಶ್ರೀಮಂತ ಎಂದು ಹೇಳಿಕೊಂಡರೆ ಅದು ಸಾಮಾಜಿಕ ಮುನ್ನಡೆಯನ್ನು ತೋರಿಸುವುದಿಲ್ಲ. ಒಟ್ಟಾರೆ ಸಮಾಜದಲ್ಲಿ ಜನರು ನಮ್ಮನ್ನು ಯಾವ ಸ್ತರದಲ್ಲಿಟ್ಟು ನೋಡುತ್ತಾರೆ ಎಂಬುದು ಮುಖ್ಯವಾಗುತ್ತದೆ. ಆದ್ದರಿಂದಲೇ ಇಂದಿಗೂ ಇಂಡಿಯಾದ ಸಮುದಾಯಗಳಿಗೆ ಮೀಸಲಾತಿಯನ್ನು ಕಲ್ಪಿಸುವಾಗ ಯಾವುದೇ ಮಾನದಂಡಕ್ಕಿಂತ ಸಾಮಾಜಿಕವಾಗಿ ಆ ಸಮುದಾಯ ಯಾವ ರೀತಿ ಹಿಂದುಳಿದೆ ಎಂಬುದನ್ನು ನಿರ್ಧಾರಕ್ಕೆ ತೆಗೆದುಕೊಳ್ಳಲಾಗುತ್ತದೆ. ಅಂದರೆ ಜಾತಿ ಅಥವಾ ಸಮುದಾಯವೇ ಮುಖ್ಯವಾದ ಮಾನದಂಡವಾಗುತ್ತದೆ. ಇದಲ್ಲದೆ ಕಾಡುಗೊಲ್ಲ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಇದು ಸಾಮಾಜಿಕ ಹಿಂದುಳಿದಿರುವಿಕೆಗೆ ಕಾರಣವಾಗುತ್ತದೆ. ಇವರಲ್ಲಿ ಬಹುತೇಕ ಜನ ಅನಕ್ಷರಸ್ಥರು ಮತ್ತು ಅಕ್ಷರ ಸಂಸ್ಕೃತಿಯಿಂದ ವಂಚಿತರಾದವರು. ಇವುಗಳಲ್ಲದೆ ಮೌಢ್ಯ, ಅಮಾನವೀಯ ಪದ್ಧತಿಗಳ ಆಚರಣೆಗಳು, ನಂಬಿಕೆಗಳಿಂದಾಗಿ ಇವರು ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದರೂ ಇವರು ಅಧಿಕೃತವಾಗಿ ಪರಿಶಿಷ್ಟ ಬುಡಕಟ್ಟಿನ ಸ್ಥಾನಮಾನ ಪಡೆಯಲಿಕ್ಕೆ ಸಾಧ್ಯವಾಗಿಲ್ಲದಿರುವುದು ಇವರ ಸಾಮಾಜಿಕ ಹಿಂದುಳಿದಿರುವಿಕೆಗೆ ಕೈಗನ್ನಡಿಯಾಗಿದೆ.

ಸಾಮಾಜಿಕವಾಗಿ ಗೊಲ್ಲ ಸಮುದಾಯವು ಹಿಂದುಳಿದ ಬುಡಕಟ್ಟಾಗಿದ್ದು, ಸಮಾಜ ಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಮತ್ತು ಜಾನಪದ ವಿದ್ವಾಂಸರು ಜಾತಿ ಮತ್ತು ಬುಡಕಟ್ಟಿನ ನಡುವೆ ಇರುವ ವ್ಯತ್ಯಾಸವನ್ನ ಗುರುತಿಸಿ ಅಧ್ಯಯನ ಮಾಡಿರುವುದರಿಂದ ಇವರ ದೃಷ್ಟಿಕೋನದಲ್ಲಿಯೂ ಗೊಲ್ಲ ಸಮುದಾಯ ಒಂದು ಅಪ್ಪಟ ಬುಡಕಟ್ಟು ಎಂದು ಪರಿಗಣಿತವಾಗುತ್ತದೆ. ಅಲ್ಲದೆ ಅನೇಕ ಸಂಶೋಧನೆಗಳೂ ಕೂಡ ಇದರ ಮೇಲೆ ಬೆಳಕು ಚೆಲ್ಲಿ ಗೊಲ್ಲರು ಬುಡಕಟ್ಟು ಜನರು ಎಂದು ಸಾರಿ ಹೇಳುತ್ತಿವೆ. ಇದು ಸತ್ಯವೂ ಹೌದು. ಗೊಲ್ಲ ಸಮುದಾಯದ ನೆಲೆ(settlement), ಸ್ತರವಿನ್ಯಾಸ, ಕುಟುಂಬ ಮತ್ತು ಬಂಧುತ್ವ, ವಿವಾಹ ಪದ್ಧತಿ, ಭಾಷೆ, ವೇಷ-ಭೂಷಣ, ಆಹಾರ, ಮಡಿ-ಮೈಲಿಗೆಯ ಅಂಶಗಳು, ಧರ್ಮ, ಕಲೆ, ದೇವರು-ದಿಂಡರು, ನ್ಯಾಯ ಪದ್ಧತಿ, ಪಂಚಾಯತಿ ಮತ್ತು ಇತರೆ ಸಾಮಾಜಿಕ-ಸಾಂಸ್ಕೃತಿಕ ಅಂಶಗಳನ್ನ ನೋಡಿದರೆ

ಗೊಲ್ಲ ಸಮುದಾಯ ಬುಡಕಟ್ಟು ಸಮುದಾಯವೆಂದು ಸಾಬೀತಾಗುತ್ತದೆ. ಆದರೆ ಗೊಲ್ಲ ಸಮುದಾಯದವರ ನೋವು ಏನೆಂದರೆ ಈ ಸಮುದಾಯ ಬುಡಕಟ್ಟು ಲಕ್ಷಣಗಳನ್ನ ಹೊಂದಿದ್ದು, ನಿಜವಾದ ಬುಡಕಟ್ಟಾಗಿದ್ದು, ಸಂವಿಧಾನಾತ್ಮಕವಾಗಿ ಪರಿಶಿಷ್ಟ ಬುಡಕಟ್ಟು ಪಟ್ಟಿಗೆ ಸೇರಿಸಲ್ಪಡದೇ ಇರುವುದು. ಗೊಲ್ಲಸಮುದಾಯದ ನಾಯಕರುಗಳಲ್ಲದೆ ಕೆಲವು ಬೇರೆ ಜಾತಿಯ ಮಂತ್ರಿಗಳು, ಶಾಸಕರು ಗೊಲ್ಲರ ಜೀವನವನ್ನ ಕಣ್ಣಾರೆ ಕಂಡಿದುದರಿಂದ ಇವರನ್ನ ಬುಡಕಟ್ಟುಗಳ ಪಟ್ಟಿಗೆ ಸೇರಿಸುವಂತೆ ಸರ್ಕಾರಕ್ಕೆ ಒತ್ತಾಯಿಸುತ್ತಾ ಬಂದಿರುವುದನ್ನ ನಾವು ಕಾಣಬಹುದಾಗಿದೆ. ಜೊತೆಗೆ ಇತ್ತೀಚಿನ ದಿನಗಳಲ್ಲಿ ಸಮುದಾಯದ ಮುಖಂಡರೂ ಲೋಕಸಭಾ ಮಾಜಿ ಸದಸ್ಯರೂ ಆದ ಪಿ ಕೋದಂಡರಾಮಯ್ಯನವರು ೧೯೯೭ ರ ಆಗಸ್ಟ್‌ನಲ್ಲಿ ಲೋಕಸಭೆಯಲ್ಲಿ ಖಾಸಗಿ ಮಸೂದೆಯೊಂದನ್ನ ಮಂಡಿಸಿ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಕೆಲವು ಭಾಗಗಳಲ್ಲಿರುವ ಬುಡಕಟ್ಟು ಜನರಾದ ಕಾಡುಗೊಲ್ಲರು ಮತ್ತು ಹಟ್ಟಿ ಗೊಲ್ಲರನ್ನ ಪರಿಶಿಷ್ಟ ಬುಡಕಟ್ಟಿಗೆ ಸೇರಿಸಲು ಸಂವಿಧಾನದ (ಪರಿಶಿಷ್ಟ ಬುಡಕಟ್ಟು) ಆಜ್ಞೆ ೧೯೫೦ ಕ್ಕೆ ತಿದ್ದುಪಡಿ ತರಬೇಕೆಂದು ಕೇಂದ್ರ ಸರ್ಕಾರವನ್ನ ಒತ್ತಾಯಿಸುತ್ತಾ, ಸರ್ಕಾರವು ೧೯೭೪ ರಲ್ಲಿ ಆಜ್ಞೆಯೊಂದನ್ನ ಹೊರಡಿಸಿ ಈ ಬುಡಕಟ್ಟು ಜನರನ್ನ ಹಿಂದುಳಿದ ವರ್ಗಗಳಿಗೆ ಸೇರಿಸಿದೆ ಎಂದು ಹೇಳಿದರು. ಆದರೆ ಈ ಜನರು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವುದರಿಂದ ಈಗ ಇತರೆ ಬುಡಕಟ್ಟು ಜನರಿಗೆ ಸಿಗುತ್ತಿರುವ ಸವಲತ್ತುಗಳು ಲಭ್ಯವಾಗಲು ಈ ಮಸೂದೆಯನ್ನ ಅಂಗೀಕರಿಸಬೇಕೆಂದು ಮನವಿ ಮಾಡಿದರು (ಪ್ರಜಾವಾಣಿ, ದಿನಾಂಕ ೫-೫-೧೯೯೭). ಆದರೆ ಈ ಪ್ರಯತ್ನದಿಂದ ಯಾವುದೇ ಪ್ರಯೋಜನವಾಗಲಿಲ್ಲ. ಉಳಿದಂತೆ ರಾಜ್ಯದ ಸಮುದಾಯದ ಮುಖಂಡರು ಅಲ್ಲಲ್ಲಿ ಸಮ್ಮೇಳನಗಳನ್ನ, ಸಂಘಟನೆ ಮಾಡಿ ಬುಡಕಟ್ಟು ಪಟ್ಟಿಗೆ ಗೊಲ್ಲ ಸಮುದಾಯವನ್ನು ಸೇರಿಸುವಂತೆ ಸರ್ಕಾರವನ್ನ ಒತ್ತಾಯ ಮಾಡುತ್ತಾ ಬಂದಿರುವುದನ್ನ ನಾವು ಕಾಣಬಹುದು. ಇವರ ಪ್ರಯತ್ನಗಳು ಹಲವಾರು ಬಾರಿ ಬೃಹತ್ ಚಳುವಳಿಗಳಾಗಿ ರೂಪುಗೊಂಡವು. ಚಳುವಳಿಗಳ ಪರಿಣಾಮವಾಗಿ ರಾಜ್ಯ ಸರ್ಕಾರ ಗೊಲ್ಲ ಸಮುದಾಯವನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಿ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿಯನ್ನ ನೀಡಿತು. ಆದರೆ ಪರಿಶಿಷ್ಟ ಬುಡಕಟ್ಟಿಗೆ ಗೊಲ್ಲ ಸಮುದಾಯವನ್ನು ಸೇರಿಸುವ ವಿಚಾರ ಕನಸಾಗಿಯೇ ಉಳಿಯಿತು.

### ಆರ್ಥಿಕ ಸ್ಥಿತಿಗತಿ

ಕಾಡುಗೊಲ್ಲರು ಇತರ ಅಲೆಮಾರಿ ಸಮುದಾಯದವರ ಹಾಗೆ ಆರ್ಥಿಕವಾಗಿ ಹಿಂದುಳಿದ ಬುಡಕಟ್ಟು ಸಮುದಾಯದವರಾಗಿದ್ದಾರೆ. ಸಂಪತ್ತಿನ ಅಸಮಾನ ಹಂಚಿಕೆಯಿಂದಾಗಿ ಇವರಲ್ಲಿ ಶ್ರೀಮಂತರೇ ಇಲ್ಲ. ಭೂಮಿ ಒಂದು ಮುಖ್ಯವಾದ ಆರ್ಥಿಕ ಜೀವನದ ಮೂಲವಾಗಿರುವುದರಿಂದ ಭೂಮಿ ಹೊಂದಿರುವವರ ಸಂಖ್ಯೆ ಕಡಿಮೆ. ಕೆಲವೊಂದು ವೇಳೆ ಭೂಮಿ ಇದ್ದರೂ ಸಣ್ಣ ಸಣ್ಣ ಭೂ ಹಿಡುವಳಿದಾರರಾಗಿ

ರುತ್ತಾರೆ. ಇವರಲ್ಲಿ ಕೂಲಿಕಾರರು, ಕೃಷಿ ಕಾರ್ಮಿಕರೇ ಹೆಚ್ಚು. ಇವರು ಬುಡಕಟ್ಟು ಜನರಾಗಿ ಸಾಮಾಜಿಕ ಪ್ರತ್ಯೇಕತೆಯನ್ನು ಕಾಯ್ದು ಕೊಂಡಿರುವುದರಿಂದ ನಾಗರೀಕ ಪ್ರಪಂಚದ ಅನುಕರಣೆ ಇಲ್ಲದೆ ವ್ಯಾಪಾರದಲ್ಲಿ ಇವರ ಭಾಗವಹಿಸುವಿಕೆ ಇಲ್ಲವೆಂದೇ ಹೇಳಬೇಕು. ಇತರೆ ಆರ್ಥಿಕ ಸಂಪನ್ಮೂಲಗಳು ಇವರಿಗೆ ಗೊತ್ತೇ ಇಲ್ಲ. ಕಾಡುಗಳು ನಾಶವಾಗಿ ಕಾಡಿನ ಉತ್ಪನ್ನಗಳೂ ದೊರೆಯುವುದಿಲ್ಲ. ಕಾಡುಗೊಲ್ಲರು ಹೊಂದಿರುವ ಜಮೀನುಗಳು ದಿಣ್ಣೆಗಳೋ, ಜೌಗು ಪ್ರದೇಶಗಳೋ ಆಗಿರುವುದರಿಂದ ಇವರು ಆಧುನಿಕ ನೀರಾವರಿ ಪದ್ಧತಿಯನ್ನು ಅಳವಡಿಸಲಾಗುವುದಿಲ್ಲ. ಜೊತೆಗೆ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಸಾಧ್ಯವಾಗದೇ, ಆಹಾರ ಧಾನ್ಯಗಳನ್ನು ಬೆಳೆಯುವುದರಿಂದ ಇವರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದಿಲ್ಲ. ಕೆಲವೊಂದು ವೇಳೆ ವಾಣಿಜ್ಯ ಬೆಳೆಗಳಿಗೂ ಸರಿಯಾದ ಬೆಲೆ ಸಿಗದೆ ಇವರು ಸಂಕಷ್ಟಕ್ಕೆ ಸಿಲುಕುತ್ತಾರೆ.

ಸರ್ಕಾರಿ ನೌಕರಿ ಇವರಿಗೆ ಕಷ್ಟವೆಂದೇ ಹೇಳಬೇಕು. ಇವರ ಜನಸಂಖ್ಯೆಗೆ ಸೂಕ್ತವಾಗಿ ಸರ್ಕಾರಿ ನೌಕರಿಗಳು ಸಿಗುತ್ತಿಲ್ಲ. ಒಂದು ವೇಳೆ ಸಿಕ್ಕಿದ್ದರೂ ಸಣ್ಣ ಕೆಳಹಂತದ ನೌಕರಿಗಳಿಗೇ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ. ಇವರು ಹಟ್ಟಿಗಳಲ್ಲಿ ವಾಸಿಸುವುದರಿಂದ ಆ ಪರಿಸರ ಇವರ ಶಿಕ್ಷಣಕ್ಕೆ ಮಾರಕವಾಗಿ ಗುಣಾತ್ಮಕ ಶಿಕ್ಷಣ (Qualitative education) ದೊರೆಯುವುದಿಲ್ಲ. ಗುಣಾತ್ಮಕ ಶಿಕ್ಷಣದ ಕೊರತೆಯಿಂದಾಗಿ ಸ್ಪರ್ಧಾತ್ಮಕವಾದ ಈ ಜಗತ್ತಿನಲ್ಲಿ ಆಧುನಿಕ ಉದ್ಯೋಗಗಳು ದೊರೆಯುತ್ತಿಲ್ಲ. ಕೇವಲ ಇವರು ಸಾಮಾನ್ಯ ಶಿಕ್ಷಣಕ್ಕೆ ಪ್ರವೇಶ ತೆಗೆದುಕೊಳ್ಳುವುದರಿಂದ ಅದರಿಂದ ನಗರವಾಸಿ ಸಮುದಾಯಗಳ ಜನರ ಜೊತೆ ಸ್ಪರ್ಧೆ ಮಾಡುವುದು ಕಷ್ಟವಾಗುತ್ತದೆ. ಹಟ್ಟಿಗಳು ಗ್ರಾಮೀಣ ಪ್ರದೇಶದಲ್ಲಿ ಇರುವುದರಿಂದ ಶಿಕ್ಷಣಕ್ಕೆ ಉತ್ತೇಜನ ಸಿಗುವುದಿಲ್ಲ. ಇವೆಲ್ಲಾ ಕಾರಣಗಳಿಂದಾಗಿ ಅಲ್ಲೊಬ್ಬ ಇಲ್ಲೊಬ್ಬ ವಿದ್ಯಾವಂತರಾದರೂ ನಿರುದ್ಯೋಗಿಗಳಾಗಿಯೇ ಉಳಿಯುತ್ತಾರೆ. ಕೆಲವು ಸಮುದಾಯದ ಜನರು ಕುರಿ ಮತ್ತು ದನಕರುಗಳನ್ನು ಸಾಕುತ್ತಿದ್ದರು. ಇವು ಆರ್ಥಿಕ ಜೀವನಕ್ಕೆ ಸಹಕಾರಿಯಾಗುತ್ತಿದ್ದವು. ಆದರೆ ಇಂದು ಅರಣ್ಯ ನಾಶ, ಗೋಮಾಳಗಳ ನಾಶ, ಕಾಯಿಲೆ ಮುಂತಾದ ಕಾರಣಗಳಿಂದಾಗಿ ಪಶು ಸಂಪತ್ತನ್ನು ನಿರ್ವಹಿಸಲಾಗದೆ ಕಾಡುಗೊಲ್ಲರು ಆರ್ಥಿಕ ಸಂಕಷ್ಟಕ್ಕೆ ಇಡಾಗುತ್ತಿದ್ದಾರೆ. ಇದು ಇವರ ಅತೀ ಆರ್ಥಿಕ ಹಿಂದುಳಿದಿರುವಿಕೆಯನ್ನು ತೋರಿಸುತ್ತದೆ. ಎ ಎ ಡಿ ಲೂಯಿಸ್ ರವರು ಕಾಡು ಗೊಲ್ಲರು ಮತ್ತು ಊರುಗೊಲ್ಲರ ಆರ್ಥಿಕತೆಯ ಬಗ್ಗೆ ಈ ರೀತಿ ಹೇಳುತ್ತಾರೆ. The prefix Kadu Golla ( Forest) is necessary to distinguish the Tribal section, who have a culture of their own, distinct from Uru Gollas who are socially culturally advenced, have a more stable economy and are settled in developed areas (Luiz, A A D: 1963:)

**ಕೋಷ್ಟಕ: ೧೦.೩ ಸಮೀಕ್ಷೆಗೊಳಪಟ್ಟವರ ಮನೆಯ ವಿಧಗಳು**

| ಮನೆಯ ವಿಧ | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|
| ಟೆಂಟ್ | ೨ | ೦.೫೦ |
| ಗುಡಿಸಲು | ೧೭೮ | ೪೪.೫೦ |
| ಟಿನ್ | ೨೨ | ೫.೫೦ |
| ಧಾಬಾ | ೫೧ | ೧೨.೭೫ |
| ಆರ್ ಸಿ ಸಿ | ೨ | ೦.೫೦ |
| ಟೈಲ್ಸ್ | ೯೫ | ೨೩.೭೫ |
| ಆಶ್ರಯ | ೪೬ | ೧೧.೫೦ |
| ಬಾಡಿಗೆ ಮನೆ | ೪ | ೧.೦೦ |
| ಒಟ್ಟು | ೪೦೦ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ತೋರಿಸಿರುವಂತೆ ಬಹುತೇಕ ಅಂದರೆ ೪೪.೫೦ ರಷ್ಟು ಕಾಡುಗೊಲ್ಲ ಜನತೆ ಇನ್ನೂ ಗುಡಿಸಿಲಿನಲ್ಲಿ ವಾಸವಾಗಿರುವುದು ಈ ಸಮೀಕ್ಷೆಯಿಂದ ತಿಳಿದುಬರುತ್ತದೆ. ಕೇವಲ ೨೩.೭೫ ರಷ್ಟು ಜನರು ಹೆಂಚಿನ ಮನೆಯನ್ನು ಹೊಂದಿದ್ದಾರೆ. ಇದು ಇವರ ಆರ್ಥಿಕ ಹಿಂದುಳಿದಿರುವಿಕೆಯನ್ನು ತೋರಿಸುತ್ತದೆ.

**ಕೋಷ್ಟಕ: ೧೦. ೪ ಸಮೀಕ್ಷೆಗೊಳಪಟ್ಟವರ ಸರ್ಕಾರಿ ಸೌಲಭ್ಯಗಳು**

| ಕ್ರ.ಸಂ. | ಸೌಲಭ್ಯಗಳ ವಿಧ | ಕುಟುಂಬಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಪಡಿತರ ಚೀಟಿ | ೩೫೦ | ೫೨.೭೯ |
| ೨ | ವಿದ್ಯುತ್ ಸಂಪರ್ಕ | ೯೫ | ೧೪.೩೩ |
| ೩ | ಭಾಗ್ಯ/ ಕುಟೀರ ಜ್ಯೋತಿ | ೧೪೩ | ೨೧.೫೭ |
| ೪ | ಗ್ಯಾಸ್ | ೧ | ೦.೧೫ |
| ೫ | ನಲ್ಲಿ | ೧ | ೦.೧೫ |
| ೬ | ಶೌಚಾಲಯ | ೧ | ೦.೧೫ |
| ೭ | ಸ್ನಾನಗೃಹ | ೨ | ೦.೩೦ |
| ೮ | ಸೈಕಲ್ | ೨೭ | ೪.೦೭ |
| ೯ | ರೇಡಿಯೋ | ೨೭ | ೪.೦೭ |
| ೧೦ | ಟೇಪ್‌ರಿಕಾರ್ಡರ್ | ೧೦ | ೧.೫೧ |
| ೧೧ | ಟೀವಿ | ೫ | ೦.೭೫ |
| ೧೨ | ದೂರವಾಣಿ | ೦ | ೦.೦೦ |
| ೧೩ | ಮೊಬೈಲ್ | ೧ | ೦.೧೫ |

ಸರ್ಕಾರಿ ಸೌಲಭ್ಯಗಳನ್ನು ಪಡೇದುಕೊಳ್ಳುವಲ್ಲಿ ರಾಜ್ಯದ ಕಾಡುಗೊಲ್ಲ ಸಮುದಾಯ ಬಹಳ ಹಿಂದೆ ಬಿದ್ದಿದೆ ಎನ್ನುವುದು ಕೋಷ್ಟಕ ೧೦.೫ ಸಾಬೀತುಪಡಿಸುತ್ತದೆ. ಕನಿಷ್ಟ ಸೌಲಭ್ಯಗಳಾದ ಶೌಚಾಲಯದಿಂದ ಹಿಡಿದು, ದೂರವಾಣಿ ಸೌಲಭ್ಯದವರೆಗೆ ಈ ಸಮುದಾಯದವರು ಹಿಂದುಳಿದಿದ್ದಾರೆ. ಪಡಿತರ ಚೀಟಿ ಹೊಂದಿರುವವರು ಶೇಖಡ ೫೨.೭೯ ರಷ್ಟು ಕಂಡು ಬರುತ್ತದೆ. ಇದೂ ಸಹ ಇವರ ಆರ್ಥಿಕ ಬಡತನವನ್ನು ತೋರಿಸುತ್ತದೆ.

**ಕೋಷ್ಟಕ: ೧೦.೫ ಸಮೀಕ್ಷೆಗೊಳಪಟ್ಟವರ ಶೇಕಡಾವಾರು ಸರ್ಕಾರಿ ಸೌಲಭ್ಯಗಳು**

| ಸಂ. | ಸೌಲಭ್ಯಗಳು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಮತದಾರನ ಗುರುತಿನ ಚೀಟಿ | ೯೭.೮೫ | ೯೭.೦೩ | ೯೭.೪೮ |
| ೨ | ವೃದ್ಧಾಪ್ಯ ವೇತನ | ೦.೦೦ | ೦.೯೯ | ೦.೪೫ |
| ೩ | ಅಂಗವಿಕಲ | ೦.೯೯ | ೦.೭೯ | ೦.೯೦ |
| ೪ | ಕಲಾವಿದ | ೦.೬೬ | ೦.೫೯ | ೦.೬೩ |
| ೫ | ವೃದ್ಧಾಪ್ಯ | ೦.೩೩ | ೦.೫೯ | ೦.೪೫ |
| ೬ | ಶಿಷ್ಯವೇತನ | ೦.೧೭ | ೦.೦೦ | ೦.೦೯ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ಮೇಲಿನ ಕೋಷ್ಟಕದಂತೆ ಬಹುತೇಕ ಜನರು (೯೭.೪೮) ಓಟಿನ ಕಾರ್ಡನ್ನು ಹೊಂದಿದವರಾಗಿದ್ದಾರೆ. ಆದರೆ ಸರ್ಕಾರದಿಂದ ಶಿಷ್ಯವೇತನ ಮುಂತಾದ ಸೌಲಭ್ಯಗಳನ್ನು ಪಡೆದುಕೊಳ್ಳುವಲ್ಲಿ ಹಿಂದೆ ಬಿದ್ದಿರುವುದು ತಿಳಿದು ಬಂದಿದೆ.

**ಕೋಷ್ಟಕ ೧೦.೬ ಸಮೀಕ್ಷೆಗೊಳಪಟ್ಟ ಶೇಕಡಾವಾರು ಅಂಗವಿಕಲರು**

| ಸಂ | ಅಂಗವೈಕಲ್ಯ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಮೂಗ | ೭೧.೪೩ | ೪೨.೮೬ | ೫೭.೧೪ |
| ೨ | ಕಿವುಡ | ೦.೦೦ | ೦.೦೦ | ೦.೦೦ |
| ೩ | ಕುರುಡ | ೦.೦೦ | ೧೪.೨೯ | ೭.೧೪ |
| ೪ | ಮತಿಭ್ರಮಣೆ | ೦.೦೦ | ೦.೦೦ | ೦.೦೦ |
| ೫ | ಅಂಗವಿಕಲ | ೨೮.೫೭ | ೪೨.೮೬ | ೩೫.೭೧ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

**ರಾಜಕೀಯ ಸ್ಥಿತಿಗತಿ**

ರಾಜಕೀಯವಾಗಿ ರಾಜ್ಯದ ಗೊಲ್ಲ ಸಮುದಾಯ ಅತ್ಯಂತ ಹಿಂದುಳಿದಿದೆ. ರಾಜಕೀಯ ಹಿಂದುಳಿದಿರುವಿಕೆಯಿಂದಾಗಿ ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿ ಸಾಧ್ಯವಾಗಿಲ್ಲ ಎಂಬುದು ಸತ್ಯವಾದ ಮಾತು. ಸುಮಾರು ವರ್ಷಗಳವರೆಗೆ ಈ ಸಮುದಾಯವು

ಯಾವುದೇ ರಾಜಕೀಯ ಪ್ರತಿನಿಧಿಗಳನ್ನ ರಾಷ್ಟ್ರ ಮಟ್ಟದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ಹೊಂದಿದ್ದಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲೇ ಸಮುದಾಯದ ಸಂಘಟನೆಗೆ ಪ್ರಯತ್ನಗಳು ನಡೆದಿದ್ದರೂ ಆ ಸಂಘಟನೆ ರಾಜಕೀಯ ಪ್ರಗತಿಗೆ ಮುಖ್ಯವಾದ ತಿರುವು ಕೊಡಲಿಲ್ಲ ಎಂಬುದು ಗಮನಾರ್ಹವಾದುದು. ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಸಮುದಾಯದ ಮುಖಂಡರು ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಸಂಘಟಿತ ಪ್ರಯತ್ನ ಮಾಡಿದರಾದರೂ ಅದು ಸಮುದಾಯದ ಜನರಲ್ಲಿ ರಾಜಕೀಯ ಜಾಗೃತಿಯನ್ನ ಮೂಡಿಸಲಿಲ್ಲವೆಂದೇ ಹೇಳಬಹುದು. ಇದಕ್ಕೆ ಪ್ರಮುಖ ಕಾರಣಗಳೆಂದರೆ ಗೊಲ್ಲ ಸಮುದಾಯವು ಅತ್ಯಂತ ಹಿಂದುಳಿದಿರುವಿಕೆ, ಬಹುತೇಕ ಮಂದಿ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವುದು ಮೀಸಲಾತಿಯ ಅವಕಾಶ ಇಲ್ಲದಿರುವಿಕೆ ಮುಂತಾದುವು.

ರಾಜ್ಯದಲ್ಲಿ ೧೯೯೨ ಕ್ಕೆ ಮೊದಲು ಗೊಲ್ಲ ಸಮುದಾಯವೂ ಸೇರಿದಂತೆ ಎಲ್ಲಾ ಹಿಂದುಳಿದ ವರ್ಗಗಳಿಗೆ ಸ್ಥಳೀಯ ಸಂಸ್ಥೆಗಳಲ್ಲಿ ಯಾವುದೇ ರಾಜಕೀಯ ಮೀಸಲಾತಿ ಇರಲಿಲ್ಲ. ಆದರೆ ೧೯೯೨ ರಲ್ಲಿ ಸಂವಿಧಾನಕ್ಕೆ ೭೩ ನೇ ತಿದ್ದುಪಡಿ ತಂದು ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಗಮನಾರ್ಹ ಬದಲಾವಣೆಯನ್ನ ಮಾಡಲಾಯಿತು. ಇದರ ಪರಿಣಾಮವಾಗಿ ರಾಜ್ಯದಲ್ಲಿಯೂ ೧೯೯೩ ರಲ್ಲಿ ಸಂಪೂರ್ಣವಾಗಿ ಹೊಸ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲಾಯಿತು. ಈ ಐತಿಹಾಸಿಕ ಮಹತ್ವದ ಮುಖ್ಯವಾದಂತಹ ಪರಿಣಾಮವೇನೆಂದರೆ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಪ್ರಪ್ರಥಮ ಬಾರಿಗೆ ಮಹಿಳೆಯರಿಗೆ ಮತ್ತು ಪರಿಶಿಷ್ಟ ಜಾತಿ, ಬುಡಕಟ್ಟು ಹಾಗೂ ಹಿಂದುಳಿದ ವರ್ಗಗಳಿಗೆ ತಲಾ ಮೂರನೇ ಒಂದರಷ್ಟು ಮೀಸಲಾತಿಯನ್ನ ಕಲ್ಪಿಸಿದುದು. ೧೯೯೪ ರಲ್ಲಿ ರಾಜ್ಯದಲ್ಲಿ ಸರ್ಕಾರ ರಾಜ್ಯದ ಎಲ್ಲಾ ಹಿಂದುಳಿದ ಜಾತಿಗಳನ್ನ ಎರಡು ಗುಂಪುಗಳಾಗಿ ಅಂದರೆ ಅತ್ಯಂತ ಹಿಂದುಳಿದ ಜಾತಿಗಳನ್ನ 'ಎ' ಗುಂಪಿಗೆ ಮತ್ತು ಹಿಂದುಳಿದ ಜಾತಿಗಳನ್ನ 'ಬಿ' ಗುಂಪಿಗೆ ಸೇರಿಸಿ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿಯನ್ನ ಒದಗಿಸಿತು. ಸಹಜವಾಗಿಯೇ ಅತ್ಯಂತ ಹಿಂದುಳಿದ ಜಾತಿಯಾದ ಗೊಲ್ಲ ಸಮುದಾಯವನ್ನು 'ಎ' ಗುಂಪಿನಡಿಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿಯನ್ನ ಪಡೆಯಲು ಪ್ರಾರಂಭಿಸಿತು. ಈ ಒಂದು ರಾಜಕೀಯ ಮೀಸಲಾತಿಯು ಸ್ಥಳೀಯ ಸಂಸ್ಥೆಗಳಲ್ಲಿ ಅಂದರೆ ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್, ಗ್ರಾಮ ಪಂಚಾಯತ್, ನಗರಸಭೆ, ಪುರಸಭೆ, ನಗರಪಾಲಿಕೆ, ಮಹಾನಗರಪಾಲಿಕೆ, ಪಟ್ಟಣ ಪಂಚಾಯತ್‌ಗಳಲ್ಲಿ ಗೊಲ್ಲ ಸಮುದಾಯವು ಸ್ಪರ್ಧಿಸುವಂತೆ ಮಾಡಿತು. ಇದು ರಾಜ್ಯದ ಗೊಲ್ಲ ಸಮುದಾಯದಲ್ಲಿ ಒಂದು ರೀತಿಯ ರಾಜಕೀಯ ಜಾಗೃತಿಯನ್ನ ಮೂಡಿಸಿ ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರದ ಚುಕ್ಕಾಣಿಯನ್ನ ಹಿಡಿಯುವಂತೆ ಮಾಡಿತು. ಅಲ್ಲಿಂದೀಚೆಗೆ ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯದ ಜನರು ಗ್ರಾಮ ಪಂಚಾಯತ್ ಸದಸ್ಯರಾಗಿ, ಅಧ್ಯಕ್ಷರಾಗಿ, ತಾಲ್ಲೂಕು ಪಂಚಾಯತ್ ಅಧ್ಯಕ್ಷರಾಗಿ ಜಿಲ್ಲಾ ಪಂಚಾಯತ್

ಸದಸ್ಯ–ಅಧ್ಯಕ್ಷರಾಗಿ ಮತ್ತು ನಗರಗಳ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿಯೂ ಸ್ಪರ್ಧಿಸಿ ಆರಿಸಿ ಬಂದು ರಾಜಕೀಯ ಅಧಿಕಾರ ಪಡೆಯುತ್ತಿರುವುದನ್ನು ನೋಡಬಹುದಾಗಿದೆ.

ರಾಜಕೀಯ ಪ್ರಜ್ಞೆ ಮತ್ತು ರಾಜಕೀಯ ಉನ್ನತಿ ಸಾಧಿಸದ ಹೊರತು ಗೊಲ್ಲ ಸಮುದಾಯವು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಪ್ರಗತಿಯಾಗುವುದು ಕಷ್ಟಸಾಧ್ಯ ಎಂಬ ಸತ್ಯವನ್ನ ಅರಿತ ರಾಜ್ಯದ ಸಮುದಾಯದ ಮುಖಂಡರು ರಾಜ್ಯದಲ್ಲೆಡೆ ಸಂಚರಿಸಿ ಸಮುದಾಯವನ್ನು ರಾಜಕೀಯವಾಗಿ ಸಂಘಟಿಸುವ ಪ್ರಯತ್ನ ಮಾಡಿರುವುದನ್ನ ಇತ್ತೀಚಿನ ರಾಜಕೀಯ ಸನ್ನಿವೇಶದಲ್ಲಿ ನೋಡಬಹುದಾಗಿದೆ. ಇದಕ್ಕೆ ಜಾತಿಯ ಸಂಘಗಳು ಅಡಿಪಾಯವನ್ನ ಹಾಕಿ ರಾಜಕೀಯ ಸಂಘಟನೆಗೆ ಮತ್ತು ಜಾಗೃತಿಗೆ ಕಾರಣವಾದವು ಎಂಬುದರಲ್ಲಿ ಆಶ್ಚರ್ಯವಿಲ್ಲ. ಜೊತೆಗೆ ಇದೊಂದೇ ಕಾರಣವಾಗದೇ ಪಂಚಾಯತ್ ರಾಜ್ಯ ವ್ಯವಸ್ಥೆಯು ರಾಜಕೀಯ ಪ್ರಾತಿನಿಧ್ಯವನ್ನ ದೊರಕಿಸಿ ಕೊಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ರಾಜ್ಯದ ಗೊಲ್ಲ ಸಮುದಾಯದಲ್ಲಿ ಇತ್ತೀಚೆಗೆ ರಾಜಕೀಯ ಪ್ರಜ್ಞೆ ಹೆಚ್ಚುತ್ತಿದ್ದು, ಸ್ಥಳೀಯ ಸಂಸ್ಥೆಗಳೂ ಸೇರಿದಂತೆ ವಿಧಾನಸಭೆ ಮತ್ತು ಲೋಕಸಭೆಗೆ ಸ್ಪರ್ಧಿಸಲು ಪ್ರಾರಂಭಿಸಿದ್ದಾರೆ. ಆದರೆ ರಾಜ್ಯದ ಗೊಲ್ಲ ಸಮುದಾಯದ ಜನಸಂಖ್ಯೆಗೆ ಅನುಗುಣವಾಗಿ ರಾಜಕೀಯ ಪ್ರಾತಿನಿಧ್ಯ ಸರಿಯಾದ ರೀತಿಯಲ್ಲಿ ದೊರಕಿಲ್ಲವೆಂದೇ ಹೇಳಬಹುದು.

ಪರಿಹಾರೋಪಾಯಗಳು

೧. ಹಿಂದುಳಿದ ಸಮುದಾಯಗಳ ಅಭಿವೃದ್ಧಿಗೆ ಶಿಕ್ಷಣವೇ ತಾರಕ ಮಂತ್ರವಾದುದರಿಂದ ಸಮುದಾಯದ ಪ್ರತಿಯೊಬ್ಬರೂ ಸುಶಿಕ್ಷಿತರಾಗಬೇಕು. ಶಿಕ್ಷಣದ ಅಭಿವೃದ್ಧಿಗಾಗಿ ಸರ್ಕಾರ ನೀಡುವ ಸಹಾಯ–ಸೌಲಭ್ಯಗಳನ್ನ ಸದುಪಯೋಗ ಪಡಿಸಿಕೊಂಡು ಸಮುದಾಯ ಆ ಮೂಲಕ ರಾಷ್ಟ್ರದ ಮುನ್ನಡೆಗೆ ಕಾರಣವಾಗಬೇಕು.

೨. ಜಾಗತೀಕರಣದ ಈ ಸಂದರ್ಭಗಳಲ್ಲಿ ಸರ್ಕಾರಿ ಮತ್ತು ಅರೆ–ಸರ್ಕಾರಿ ಹುದ್ದೆಗಳು ಕಡಿಮೆಯಾಗುತ್ತಿರುವುದರಿಂದ ಗುಣಾತ್ಮಕ ಶಿಕ್ಷಣ ಪಡೆದು ವಿಶೇಷ ಕೌಶಲ್ಯ ಸಂಪಾದಿಸಿಕೊಂಡು ರಾಷ್ಟ್ರ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಯಾವುದೇ ತೆರನಾದ ಕೌಶಲ್ಯಾಧಾರಿತ ಕಸುಬನ್ನ ಮಾಡುವಂತೆ ಯುವಕರು ತಯಾರಾಗಬೇಕು.

೩. ಸಮುದಾಯವನ್ನು ಬಹುದಿನಗಳ ಕನಸಾದ ಪರಿಶಿಷ್ಟ ಬುಡಕಟ್ಟಿಗೆ ಸೇರಿಸುವ ಪ್ರಯತ್ನಕ್ಕೆ ಒತ್ತು ಕೊಟ್ಟು ಸಾಮೂಹಿಕವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೇಲೆ ಒತ್ತಡ ತರುವುದು. ಇದಕ್ಕೋಸ್ಕರ ವೈಜ್ಞಾನಿಕವಾಗಿ ಸಮುದಾಯದ ಅಧ್ಯಯನಗಳು ನಡೆದಿರುವುದರಿಂದ, ಅವುಗಳ ವರದಿಯನ್ನ ಮತ್ತು ವಿದ್ವಾಂಸರುಗಳ ಸಲಹೆಗಳನ್ನ ಸಮುದಾಯಕ್ಕೆ ಮತ್ತು ಸರ್ಕಾರಕ್ಕೆ ತಿಳಿಯಪಡಿಸಬೇಕಾಗುತ್ತದೆ. ಇದಕ್ಕೆ ಸಂಘಟಿತ ಮತ್ತು ಬದ್ಧತೆಯ ಪೂರ್ವಾವಶ್ಯಕಗಳು ಬೇಕಾಗುತ್ತವೆ.

೪. ಉನ್ನತ ಶಿಕ್ಷಣವು ಬೌದ್ಧಿಕ ಪ್ರಗತಿಗೆ ಸಹಾಯಕವಾಗುವುದರಿಂದ ಸಮುದಾಯದ ಮಹಿಳೆಯರನ್ನ ಒಳಗೊಂಡಂತೆ ಉನ್ನತ ಶಿಕ್ಷಣಕ್ಕೆ ಪ್ರೇರೇಪಿಸುವುದು.

೫. ಗೊಲ್ಲರ ಹಟ್ಟಿಗಳು ಮೂಲ ಸೌಕರ್ಯಗಳಿಂದ ವಂಚಿತವಾಗಿರುವುದರಿಂದ ಇವುಗಳನ್ನ ಕಂದಾಯ ಗ್ರಾಮಗಳೆಂದು ಘೋಷಿಸುವಂತೆ ಸರ್ಕಾರಕ್ಕೆ ಒತ್ತಾಯಿಸುವುದು. ಹಟ್ಟಿಗಳನ್ನ dismental ಮಾಡಿ ಅಭಿವೃದ್ಧಿಯ ದಿಕ್ಕಿನತ್ತ ಸಾಗುವುದು.

೬. ಸಮೂಹ ಮಾಧ್ಯಮ, ಪತ್ರಿಕಾ ರಂಗ ಸಿನೆಮಾ ಮುಂತಾದ ಧ್ವನಿ ಮಾಧ್ಯಮ ದೃಶ್ಯ ಮಾಧ್ಯಮಗಳಲ್ಲಿ ಜನರು ಕೀಳರಿಮೆಯನ್ನ ಬಿಟ್ಟು ಬೌದ್ಧಿಕವಾಗಿ ಬಳಸಿ ಕೊಳ್ಳಲು ಪ್ರೇರೇಪಿಸುವುದು. ಹಾಗೆಯೇ ತಲಾತಲಾಂತರಗಳಿಂದ ಬಂದ ಕೆಲವು ಮೂಢನಂಬಿಕೆಗಳನ್ನ ಬಿಟ್ಟು ಕಲೆ ಮತ್ತು ಸಂಸ್ಕೃತಿಯನ್ನ ಉಳಿಸಿ ಕೊಳ್ಳಬೇಕು.

೭. ಸಮುದಾಯದ ನಿಖರ ಜನಸಂಖ್ಯೆ ಸಾಮಾಜಿಕ-ಆರ್ಥಿಕ ಸ್ಥಿತಿಗಳನ್ನ ಅರಿಯಲು ಸುವಿಸ್ತಾರವಾದ ಸಾಮಾಜಿಕ-ಆರ್ಥಿಕ ಅಧ್ಯಯನವನ್ನ ತಜ್ಞ ವಿದ್ವಾಂಸರುಗಳಿಂದ ನಡೆಸುವುದು.

೮. ಕಾಡುಗೊಲ್ಲ ಸಮುದಾಯವು ಒಂದು ಅಲೆಮಾರಿ ಬುಡಕಟ್ಟಾದ್ದರಿಂದ ಕೇಂದ್ರ ಸರ್ಕಾರ ಸಂವಿಧಾನದಲ್ಲಿ ತಿದ್ದುಪಡಿ ತಂದು ಅಲೆಮಾರಿ ಪಟ್ಟಿ ತಯಾರಿಸಿ, ಅಲೆಮಾರಿ ಪಟ್ಟಿಗೆ ಕಾಡುಗೊಲ್ಲರನ್ನು ಸೇರಿಸುವುದು.

೯. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಲೆಮಾರಿ ಸಮುದಾಯಗಳಿಗೆ ಪ್ರತ್ಯೇಕ ಮೀಸಲಾತಿ ಕಲ್ಪಿಸಿ ಅವರ ಕಲ್ಯಾಣಕ್ಕೆ ಪ್ರಯತ್ನಿಸುವುದು.

೧೦. ಕಾಡುಗೊಲ್ಲ ಮಹಿಳೆಯು ಹಲವಾರು ಸಾಂಸ್ಕೃತಿಕ ಮತ್ತು ಸಾಮಾಜಿಕ ನಿಷೇಧಗಳನ್ನು ಎದುರಿಸುತ್ತಿರುವುದರಿಂದ ಅವರ ಸಶಕ್ತೀಕರಣಕ್ಕೆ ಯೋಜನೆಗಳನ್ನು ರೂಪಿಸುವುದು.

# ಅಂಕಿಅಂಶಗಳು: ೧. ಆಯ್ದ ಗ್ರಾಮಗಳ ಕಾಡುಗೊಲ್ಲರ ಜನಸಂಖ್ಯಾ ವಿವರ

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕುಟುಂಬ | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧. ಚಳ್ಳಕೆರೆ | ೧. ದೇವರ ಮರಿಕುಂಟೆ | ೮೪ | ೨೦೮ | ೧೯೪ | ೪೦೨ |
| | ೨. ಹೊಸಹಳ್ಳಿ | ೭೯ | ೨೦೬ | ೧೯೭ | ೪೦೩ |
| | ೩. ಅ. ಕರೆಮುಂಡ್ಲಹಟ್ಟಿ (ಸಾಣಿಕೆರೆ) | ೨೩ | ೬೪ | ೬೩ | ೧೨೭ |
| | ೩. ಆ. ಖಂಡೇನಹಳ್ಳಿ (ಸಾಣಿಕೆರೆ) | ೭೭ | ೨೧೦ | ೧೯೫ | ೪೦೫ |
| | ೪. ಸೂರನಹಳ್ಳಿ | ೫೧ | ೧೪೪ | ೧೦೭ | ೨೫೩ |
| | ೫. ವಡೇರಹಳ್ಳಿ | ೬ | ೧೪ | ೧೫ | ೨೯ |
| | ಒಟ್ಟು | ೨೩೨ | ೮೪೬ | ೭೭೧ | ೧೬೧೯ |
| ೨. ಚಿತ್ರದುರ್ಗ | ೧. ಗೋನೂರು | ೧೫ | ೩೭ | ೨೩ | ೬೦ |
| | ೨. ಹೊಸಕಲ್ಲಹಳ್ಳಿ | ೬೫ | ೧೭೯ | ೧೫೧ | ೩೩೦ |
| | ೩. ಜಾವಕೊಂಡ | ೮೧ | ೨೪೬ | ೧೯೩ | ೪೩೯ |
| | ೪. ಮದಕರಿಪುರ | ೨೭ | ೬೪ | ೫೦ | ೧೧೪ |
| | ೫. ತುರುವನೂರು | ೪೨ | ೧೦೯ | ೯೫ | ೨೦೪ |
| | ಒಟ್ಟು | ೨೩೦ | ೬೩೫ | ೫೧೨ | ೧೧೪೭ |
| ೩. ಹಿರಿಯೂರು | ೧. ಕಪಿಲಹಟ್ಟಿ (ಹರ್ತಿಕೋಟೆ) | ೩೯ | ೧೨೧ | ೧೦೬ | ೨೨೭ |
| | ೧. ಮಾರಪ್ಪನಹಟ್ಟಿ (ಹರ್ತಿಕೋಟೆ) | ೨೩ | ೮೧ | ೬೩ | ೧೪೪ |
| | ೨. ಹೊಸಯಳನಾಡು | ೮ | ೧೫ | ೧೫ | ೩೦ |
| | ೩. ಅ. ಹುಲ್ಲಿಬೇಡಹಟ್ಟಿ | ೩೯ | ೧೨೯ | ೧೧೯ | ೨೪೮ |
| | ೩. ಆ. ಬುರ್ಲಂಕಹಟ್ಟಿ | ೧೪ | ೬೦ | ೩೬ | ೯೬ |
| | ೪. ನಂದಿಹಳ್ಳಿ | ೧೯ | ೬೬ | ೬೧ | ೧೨೭ |
| | ೫. ಅ. ದೊಡ್ಡಗೊಲ್ಲರಹಟ್ಟಿ | ೮೦ | ೨೨೫ | ೧೮೦ | ೪೦೫ |
| | ೫. ಆ. ಕಟ್ಟೆಪ್ಪನಹಟ್ಟಿ | ೩೪ | ೧೦೧ | ೮೯ | ೧೯೦ |
| | ಒಟ್ಟು | ೨೫೬ | ೭೯೮ | ೬೬೯ | ೧೪೬೭ |
| ೪. ಹೊಳಲ್ಕೆರೆ | ೧. ಬರೇಹಳ್ಳಿ | ೩೫ | ೯೪ | ೮೭ | ೧೮೧ |
| | ೨. ಆವಳಿಹಟ್ಟಿ | ೨೫ | ೮೫ | ೩೯ | ೧೨೪ |
| | ೩. ಗಂಗಸಮುದ್ರ | ೮೩ | ೨೪೩ | ೨೦೭ | ೪೫೦ |
| | ೪. ಹೊಳಲ್ಕೆರೆ | ೩೮ | ೧೧೭ | ೯೨ | ೨೦೯ |
| | ೫. ದಾಮಗಿರಿ | ೭೩ | ೧೮೮ | ೧೬೨ | ೩೫೦ |
| | ಒಟ್ಟು | ೨೫೪ | ೭೨೭ | ೫೮೭ | ೧೩೧೪ |
| ೫. ಹೊಸದುರ್ಗ | ೧. ಬೀಸನಹಳ್ಳಿ | ೩೨ | ೧೦೬ | ೭೭ | ೧೮೩ |
| | ೨. ಅ. ಹೊಸ ತಿಮ್ಮಪ್ಪನಹಟ್ಟಿ | ೫೩ | ೧೪೭ | ೧೨೧ | ೨೬೮ |
| | ೨. ಆ. ಹಳೆ ತಿಮ್ಮಪ್ಪನ ಹಟ್ಟಿ | ೩೦ | ೭೩ | ೬೪ | ೧೩೭ |
| | ೩. ಹೇರೂರು | ೩೫ | ೧೩೦ | ೧೧೮ | ೨೪೮ |
| | ೪. ಲಕ್ಕಿಹಳ್ಳಿ | ೪೪ | ೧೩೫ | ೧೦೯ | ೨೪೪ |
| | ೫. ಮಾಡದಕೆರೆ | ೩೯ | ೧೩೫ | ೧೦೯ | ೨೪೪ |
| | ಒಟ್ಟು | ೨೩೩ | ೭೨೫ | ೫೯೮ | ೧೩೨೩ |
| ೬. ಮೊಳಕಾಲ್ಮೂರು | ೧. ತೊಮ್ಮಲಿಂಗನಹಳ್ಳಿ | ೮೦ | ೨೦೭ | ೧೮೨ | ೩೮೯ |
| | ೨. ಬೈರಾಪುರ | ೮೮ | ೨೬೮ | ೨೦೭ | ೪೮೫ |
| | ೩. ಗುಡ್ಡದಹಳ್ಳಿ | ೨೩ | ೬೫ | ೭೮ | ೧೪೩ |
| | ೪. ಹಾವಿಗೆಲ್ | ೧೫ | ೩೭ | ೪೦ | ೭೭ |
| | ೫. ಕೊಂಡ್ಲಹಳ್ಳಿ | ೯೪ | ೨೭೩ | ೨೨೭ | ೫೦೦ |
| | ಒಟ್ಟು | ೩೦೦ | ೮೬೯ | ೭೩೪ | ೧೬೦೩ |

## ಅಂಕಿಅಂಶಗಳು ೪. ಆಯ್ದ ಗ್ರಾಮಗಳ ಕಾಡುಗೊಲ್ಲರ ವೃತ್ತಿಗಳ ವಿವರ

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕಸುಬುಗಳು | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ಕೃಷಿಕರು | | | ಕೃಷಿಕೂಲಿಗಳು | | | ಸರಕಾರಿ ನೌಕರಸ್ಥರು | | | ಸಣ್ಣ ವ್ಯಾಪಾರಸ್ಥರು | | | ಖಾಸಗಿ | ಇತರ ಕಸುಬುಗಳು | | |
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | | ಗಂಡು | ಹೆಣ್ಣು | ಒಟ್ಟು |
| ೧. ಚಳ್ಳಕೆರೆ | ೧. ದೇವರ ಮರಿಕುಂಟೆ | ೧೧೫ | ೨ | ೧೧೭ | ೧ | | ೧ | ೫ | | ೫ | | | | | | | |
| | ೨. ಹೊಸಹಳ್ಳಿ | ೭೮ | ೫ | ೮೩ | ೮ | ೩ | ೧೧ | ೯ | ೧ | ೧೦ | | | | ೨ | | | |
| | ೩. ಆ. ಕರೆಮುಂಡ್ಲಹಟ್ಟಿ (ನಾಣೀಕೆರೆ) | ೨೮ | ೧ | ೨೯ | ೪ | ೧ | ೫ | ೨ | | ೨ | | | | | ೧ | | ೧ |
| | ೩. ಆ. ಬಂಡೇನಹಳ್ಳಿ (ನಾಣೀಕೆರೆ) | ೯೩ | ೨ | ೯೫ | ೧೩ | ೪ | ೧೭ | ೧ | | ೧ | ೧ | | ೧ | | ೪ | | ೪ |
| | ೪. ಸೂರನಹಳ್ಳಿ | ೫೦ | | ೫೦ | ೩ | | ೩ | ೨ | | ೨ | | | | | | | |
| | ೫. ಪನೇರಹಳ್ಳಿ | ೫ | | ೫ | | | | ೧ | | ೧ | | | | | | | |
| | ಒಟ್ಟು | ೩೬೯ | ೧೦ | ೩೭೯ | ೨೯ | ೮ | ೩೭ | ೨೦ | ೧ | ೨೧ | ೧ | | ೧ | ೨ | ೫ | | ೫ |
| ೨. ಚಿತ್ರದುರ್ಗ | ೧. ಗೋನೂರು | ೧೭ | | ೧೭ | ೩ | ೧ | ೪ | | | | | | | | | | |
| | ೨. ಹೊಸಪಲ್ಲಹಳ್ಳಿ | ೯೨ | ೧೩ | ೧೦೫ | ೭ | ೨ | ೯ | ೧ | | ೧ | | ೧ | ೧ | ೧ | | | |
| | ೩. ಜಾನಕೊಂಡ | ೧೪೩ | ೧ | ೧೪೪ | ೪ | ೧ | ೫ | ೩ | | ೩ | | | | ೧ | | | |
| | ೪. ಮದಕರಿಪುರ | ೨೯ | | ೨೯ | ೨ | | ೨ | | | | | | | ೩ | | | |
| | ೫. ಕುರುಬನೂರು | ೬೬ | ೩ | ೬೯ | ೧ | | ೧ | ೧ | | ೧ | | | | | | | |
| | ಒಟ್ಟು | ೩೪೭ | ೧೭ | ೩೬೩ | ೧೭ | ೪ | ೨೧ | ೫ | | ೫ | | ೧ | ೧ | ೫ | | | |
| ೩. ಹಿರಿಯೂರು | ೧. ಕಪಿಲಹಟ್ಟಿ (ಹರ್ತಿಕೋಟೆ) | ೫೮ | ೧ | ೫೯ | | | | ೧ | | ೧ | | | | ೧ | | | |
| | ೧. ಮಾರಪ್ಪನಹಟ್ಟಿ (ಹರ್ತಿಕೋಟೆ) | ೩೪ | ೧ | ೩೫ | | | | | | | | | | | | | |
| | ೨. ಹೊಸಯಳನಾಡು | | | | ೮ | | ೮ | | | | | | | | | | |
| | ೩. ಆ. ಹುರ್ಳಿಬೇಡಹಟ್ಟಿ | ೫೭ | | ೫೭ | ೨ | ೧ | ೩ | ೫ | | ೫ | | | | | | | |
| | ೩. ಆ. ಬುರ್ಲಗಂಡಹಟ್ಟಿ | ೩೦ | | ೩೦ | ೧ | | ೧ | | | | | | | | | | |
| | ೪. ನಂದಿಹಳ್ಳಿ | ೩೫ | ೫ | ೪೦ | ೨ | | ೨ | | | | | | | | ೨ | | ೨ |
| | ೫. ಆ. ದೊಡ್ಡಗೊಲ್ಲರಹಟ್ಟಿ | ೩೯ | ೨ | ೪೧ | ೬೫ | ೩ | ೬೮ | ೨ | | ೨ | | | | ೧ | ೫ | | ೫ |
| | ೫. ಆ. ಕಟ್ಟೆಪ್ಪನಹಟ್ಟಿ | ೪೯ | ೨ | ೫೧ | | | | ೨ | | ೨ | | | | ೨ | | | |
| | ಒಟ್ಟು | ೩೦೨ | ೧೧ | ೩೧೩ | ೭೮ | ೪ | ೮೨ | ೧೦ | | ೧೦ | | | | ೪ | ೭ | | ೭ |

## ಅಂಕಿಅಂಶಗಳು ೪. ಮುಂದುವರೆದಿದೆ

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕಸುಬುಗಳು | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|
| | | ಕೃಷಿಕರು | | | ಕೃಷಿಕೂಲಿಗಳು | | | ಸರಕಾರಿ ನೌಕರಸ್ಥರು | | | ಸಣ್ಣ ವ್ಯಾಪಾರಸ್ಥರು | | | | ಇತರ ಕಸುಬುಗಳು | | |
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಖಾಸಗಿ | ಗಂಡು | ಹೆಣ್ಣು | ಒಟ್ಟು |
| ೪. ಹೊಳಲ್ಕೆರೆ | ೧. ಬರೇಹಳ್ಳಿ | ೩೯ | | ೩೯ | ೬ | ೨ | ೮ | ೯ | | ೯ | ೧ | | ೧ | | | | |
| | ೨. ಅವಳಪಟ್ಟಿ | ೫೩ | ೨ | ೫೫ | ೧ | | ೧ | ೧ | | ೧ | | | | ೧ | | | |
| | ೩. ಗಂಗಸಮುದ್ರ | ೧೧೦ | ೧೪ | ೧೨೪ | ೧೧ | ೩ | ೧೪ | ೧ | | ೧ | ೧ | | ೧ | ೩ | | | |
| | ೪. ಹೊಳಲ್ಕೆರೆ | ೬೧ | | ೬೧ | ೧ | | ೧ | ೨ | ೧ | ೩ | | | | ೧ | | | |
| | ೫. ರಾಮಗಿರಿ | ೧೦೦ | ೨ | ೧೦೨ | ೫ | ೨ | ೭ | ೬ | | ೬ | | | | ೨ | | | |
| | ಒಟ್ಟು | ೩೬೩ | ೧೮ | ೩೮೧ | ೨೪ | ೭ | ೩೧ | ೧೯ | ೧ | ೨೦ | ೨ | | ೨ | ೭ | | | |
| ೫. ಹೊಸದುರ್ಗ | ೧. ಬೀಸನಹಳ್ಳಿ | ೪೯ | | ೪೯ | | | | ೩ | ೨ | ೫ | | | | ೧ | | | |
| | ೨. ಟಿ. ಹೊಸ ತಿಮ್ಮಪ್ಪನಹಟ್ಟಿ | ೮೯ | ೯ | ೯೮ | ೬ | ೨ | ೮ | ೧ | | ೧ | ೧ | | ೧ | ೨ | | | |
| | ೩. ಟಿ. ಹಳೆ ತಿಮ್ಮಪ್ಪನ ಹಟ್ಟಿ | ೨೮ | ೧ | ೨೯ | ೧೨ | ೪ | ೧೬ | | | | | | | | | | |
| | ೪. ಹೇರೂರು | ೬೦ | | ೬೦ | ೧ | | ೧ | ೭ | | ೭ | | | | | | | |
| | ೫. ಲಕ್ಕಿಹಳ್ಳಿ | ೮೧ | | ೮೧ | ೧ | | ೧ | | | | | | | | | | |
| | ೬. ಮಾಡದಕೆರೆ | ೮೧ | | ೮೧ | ೧ | | ೧ | | | | | | | | | | |
| | ಒಟ್ಟು | ೩೮೮ | ೧೦ | ೩೯೮ | ೨೧ | ೬ | ೨೭ | ೧೧ | ೨ | ೧೩ | ೧ | | ೧ | ೩ | | | |
| ೬. ಮೊಳಕಾಲ್ಮೂರು | ೧. ಬೊಮ್ಮಲಿಂಗನಹಳ್ಳಿ | ೯೭ | ೮ | ೧೦೫ | ೫ | ೩ | ೮ | ೧ | | ೧ | | | | ೪ | | | |
| | ೨. ಬೈರಾಪುರ | ೧೨೫ | ೫ | ೧೩೦ | ೧೮ | ೪ | ೨೨ | ೩ | | ೩ | | | | ೧ | | | |
| | ೩. ಗುಟ್ಟದಹಳ್ಳಿ | ೨೯ | ೧ | ೩೦ | ೧ | | ೧ | ೧ | | ೧ | ೨ | | ೨ | ೨ | | | |
| | ೪. ನಾಣಗಲ್ | ೧೭ | ೧ | ೧೮ | | | | | | | ೧ | | ೧ | | | | |
| | ೫. ಕೊಂಡ್ಲಹಳ್ಳಿ | ೧೦೩ | | ೧೦೩ | ೫೭ | ೯ | ೬೬ | ೧ | | ೧ | | | | | ೨ | | ೨ |
| | ಒಟ್ಟು | ೩೭೧ | ೧೫ | ೩೮೬ | ೮೧ | ೧೬ | ೯೭ | ೬ | | ೬ | ೩ | | ೩ | ೭ | ೨ | | ೨ |

## ಅಂಕಿಅಂಶಗಳು ೫. ಆಯ್ದ ಗ್ರಾಮಗಳ ಕಾಡುಗೊಲ್ಲರ ಭೂ ವಿವರ

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕುಟುಂಬ | ಭೂಮಿಗಳು | | | ಭೂ ಶ್ರೇಣಿಗಳು | | | | | |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಓ |
| ೧. ಚಿಕ್ಕಕೆರೆ | ೧. ದೇವರ ಮರಿಕುಂಟೆ | ೮೪ | ೧೫ | ೫೫೭.೫ | ೫೭೨.೫ | ೨ | ೧೦ | ೧೬ | ೩೪ | ೧೯ | ೩ |
| | ೨. ಹೊಸಹಳ್ಳಿ | ೭೯ | ೩೦೩.೫ | ೨೪೮ | ೫೫೧.೫ | ೩ | ೮ | ೧೩ | ೩೬ | ೧೨ | ೭ |
| | ೩. ಅ. ಕರೆಮುಂದ್ಲಹಟ್ಟಿ (ಸಾಣೀಕೆರೆ) | ೨೬ | | ೧೨೦ | ೧೨೦ | | | ೮ | ೧೪ | ೧ | ೩ |
| | ೩. ಆ. ಖಂಡೇನಹಳ್ಳಿ (ಸಾಣೀಕೆರೆ) | ೭೭ | ೭ | ೪೬೦ | ೪೬೭ | ೧ | ೪ | ೧೬ | ೪೩ | ೫ | ೮ |
| | ೪. ಸೂರನಹಳ್ಳಿ | ೫೧ | ೬೭.೫ | ೮೬ | ೧೫೩.೫ | | | ೬ | ೧೫ | ೨೭ | ೩ |
| | ೫. ವಡೇರಹಳ್ಳಿ | ೬ | | ೨೩ | ೨೩ | | | | ೬ | | |
| | ಒಟ್ಟು | ೩೨೩ | ೩೯೩ | ೧೪೯೪.೫ | ೧೮೮೭.೫ | ೬ | ೨೨ | ೫೯ | ೧೪೮ | ೬೪ | ೨೪ |
| ೨. ಚಿತ್ರದುರ್ಗ | ೧. ಗೋನೂರು | ೧೫ | ೪ | ೪೩ | ೪೭ | | | ೨ | ೭ | ೩ | ೩ |
| | ೨. ಹೊಸಕಲ್ಲಹಳ್ಳಿ | ೬೫ | ೨೨೪ | ೨೦೩ | ೪೨೭ | ೨ | ೭ | ೧೯ | ೨೦ | ೧೦ | ೭ |
| | ೩. ಜಾನಕೊಂಡ | ೮೧ | ೧೧೩ | ೨೫೪ | ೩೬೭ | | ೬ | ೧೩ | ೨೯ | ೨೮ | ೫ |
| | ೪. ಮದಕರಿಪುರ | ೨೭ | | ೬೨ | ೬೨ | | | | ೭ | ೧೮ | ೨ |
| | ೫. ತುರುವನೂರು | ೪೨ | ೨೯ | ೨೫೪ | ೨೮೩ | | ೭ | ೧೦ | ೧೯ | ೫ | ೧ |
| | ಒಟ್ಟು | ೨೩೦ | ೩೭೦ | ೮೧೬ | ೧೧೮೬ | ೨ | ೨೦ | ೪೪ | ೮೨ | ೬೪ | ೧೮ |
| ೩. ಹಿರಿಯೂರು | ೧. ಕಪಿಲಹಟ್ಟಿ (ಹರ್ತಿಕೋಟೆ) | ೩೯ | | ೨೨೯ | ೨೨೯ | | ೨ | ೧೦ | ೨೨ | ೫ | |
| | ೧. ಮಾರಪ್ಪನಹಟ್ಟಿ (ಹರ್ತಿಕೋಟೆ) | ೨೩ | | ೧೮೫ | ೧೮೫ | | ೪ | ೬ | ೧೩ | | |
| | ೨.ಹೊಸಯಳನಾಡು | ೮ | | | | | | | | | ೮ |
| | ೩. ಅ. ಹುರ್ಳಿಬೇಡಹಟ್ಟಿ | ೩೯ | ೫೬ | ೧೬೨ | ೨೧೮ | | ೨ | ೧೪ | ೧೬ | ೫ | ೨ |
| | ೩. ಆ. ಜಾರ್ಲಂತಹಟ್ಟಿ | ೧೪ | ೭೫ | ೭.೫ | ೮೨.೫ | | ೧ | ೭ | ೩ | ೩ | |
| | ೪. ನಂದಿಹಳ್ಳಿ | ೧೯ | ೧೦೨ | ೧೩೭ | ೨೩೯ | ೨ | ೫ | ೩ | ೬ | ೧ | ೨ |
| | ೫. ಅ. ದೊಡ್ಡಗೊಲ್ಲರಹಟ್ಟಿ | ೮೦ | ೧೪ | ೩೦೦ | ೩೧೪ | | ೨ | ೧೭ | ೨೭ | ೨೬ | ೮ |
| | ೫. ಆ. ಕಟ್ಟೆಪ್ಪನಹಟ್ಟಿ | ೩೪ | | ೩೧೮ | ೩೧೮ | ೧ | ೬ | ೮ | ೧೮ | ೧ | |
| | ಒಟ್ಟು | ೨೫೬ | ೨೪೭ | ೧೩೩೮.೫ | ೧೫೮೫.೫ | ೩ | ೨೨ | ೬೫ | ೧೦೫ | ೪೧ | ೨೦ |

ಅಂಕಿಅಂಶಗಳು ೫. ಮುಂದುವರೆದಿದೆ

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕುಟುಂಬ | ಭೂಮಿಗಳು | | | ಭೂ ಶ್ರೇಣಿಗಳು | | | | | |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಒ |
| ೪. ಹೊಳಲ್ಕೆರೆ | ೧. ಬರೇಹಳ್ಳಿ | ೩೫ | ೩೭ | ೪೦ | ೭೭ | | | ೨ | ೮ | ೨೦ | ೫ |
| | ೨. ಬವಳಿಹಟ್ಟಿ | ೨೫ | ೨ | ೧೩೬ | ೧೩೮ | | ೧ | ೧೦ | ೯ | ೩ | ೨ |
| | ೩. ಗಂಗಸಮುದ್ರ | ೮೩ | ೧೧೧ | ೩೩೦ | ೪೪೧ | | ೧೦ | ೧೭ | ೩೬ | ೧೩ | ೭ |
| | ೪. ಹೊಳಲ್ಕೆರೆ | ೩೮ | | ೩೦೨ | ೩೦೨ | ೨ | ೩ | ೧೨ | ೧೩ | ೭ | ೧ |
| | ೫. ರಾಮಗಿರಿ | ೭೩ | ೧೩೧ | ೩೦೯ | ೪೪೦ | ೩ | ೩ | ೧೭ | ೩೨ | ೧೩ | ೫ |
| | ಒಟ್ಟು | ೨೫೪ | ೨೮೧ | ೧೧೧೭ | ೧೩೯೮ | ೫ | ೧೭ | ೫೮ | ೯೮ | ೫೬ | ೨೦ |
| ೫. ಹೊಸದುರ್ಗ | ೧. ಬೀಸನಹಳ್ಳಿ | ೩೨ | | ೨೨೫ | ೨೨೫ | | ೫ | ೧೦ | ೧೪ | ೩ | |
| | ೨. ಅ. ಹೊಸ ತಿಮ್ಮಪ್ಪನಹಟ್ಟಿ | ೫೩ | ೩೫ | ೧೧೦ | ೧೪೫ | | | ೧ | ೨೫ | ೨೬ | ೧ |
| | ೨. ಆ. ಹಳೆ ತಿಮ್ಮಪ್ಪನ ಹಟ್ಟಿ | ೩೦ | | ೬೯ | ೬೯ | | | ೨ | ೯ | ೧೦ | ೯ |
| | ೩. ಹೇರೂರು | ೩೫ | | ೨೩೭ | ೨೩೭ | | ೧ | ೨೧ | ೮ | ೪ | ೧ |
| | ೪. ಲಕ್ಕಿಹಳ್ಳಿ | ೪೪ | ೧೦ | ೧೨೧ | ೧೩೧ | | | | ೨೩ | ೨೧ | |
| | ೫. ಮಾಡದಕೆರೆ | ೩೯ | ೧೦ | ೧೨೧ | ೧೩೧ | | ೨ | ೧೦ | ೧೫ | ೧೧ | ೧ |
| | ಒಟ್ಟು | ೨೩೩ | ೫೫ | ೮೮೩ | ೯೩೮ | | ೮ | ೪೪ | ೯೪ | ೭೫ | ೧೨ |
| ೬. ಮೊಳಕಾಲ್ಮೂರು | ೧. ಬೊಮ್ಮಲಿಂಗನಹಳ್ಳಿ | ೮೦ | ೧೨೨ | ೨೬೩.೫ | ೩೮೫.೫ | | ೮ | ೧೪ | ೩೨ | ೨೦ | ೬ |
| | ೨. ಭೈರಾಪುರ | ೮೮ | ೫೦.೫ | ೩೬೩ | ೪೧೪ | ೩ | ೫ | ೧೪ | ೨೬ | ೨೮ | ೧೨ |
| | ೩. ಗುಡ್ಡದಹಳ್ಳಿ | ೨೩ | ೫೩ | ೧೨೪ | ೧೭೭ | | ೭ | ೭ | ೫ | ೨ | ೨ |
| | ೪. ಹಾನಗಲ್ | ೧೫ | ೮ | ೪೪.೫ | ೫೨.೫ | | ೧ | ೧ | ೫ | ೮ | |
| | ೫. ಕೊಂಡ್ಲಹಳ್ಳಿ | ೯೪ | ೭೬ | ೨೭೩ | ೩೪೯ | | ೬ | ೧೫ | ೩೪ | ೧೫ | ೨೪ |
| | ಒಟ್ಟು | ೩೦೦ | ೩೦೯.೫ | ೧೦೬೮ | ೧೩೭೮ | ೩ | ೨೭ | ೫೧ | ೧೦೨ | ೭೩ | ೪೪ |

## ಅಂಕಿಅಂಶಗಳು ೬. ಆಯ್ದ ಗ್ರಾಮಗಳ ಕಾಡುಗೊಲ್ಲರ ಪಶುಸಂಪತ್ತು

| ತಾಲ್ಲೂಕುಗಳು | ಗ್ರಾಮದ ಹೆಸರುಗಳು | ಕುಟುಂಬ | ಪಶುಸಂಪತ್ತು | | | | | | |
|---|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕೋಣ | ಕುರಿ | ಮೇಕೆ | ಕೋಳಿ |
| ೧. ಚಳ್ಳಕೆರೆ | ೧. ದೇವರ ಮರಿಕುಂಟೆ | ೮೪ | ೧೦೩ | ೧೩ | ೬ | | ೧೦೨ | ೧೪೮ | |
| | ೨. ಪೊಸಹಳ್ಳಿ | ೭೯ | ೫೬ | ೪೦ | ೮೨ | ೧ | ೧೨೭ | ೧೦೫ | ೫೨ |
| | ೩. ಅ. ಕರಿಮುಂದ್ಲನಹಟ್ಟಿ (ಸಾಣೀಕೆರೆ) | ೨೬ | ೩೮ | ೭ | ೫ | | ೭೦ | ೮೧ | |
| | ೩. ಆ. ಬಿಂಡೇನಹಳ್ಳಿ (ಸಾಣೀಕೆರೆ) | ೭೭ | ೯೬ | ೧೬ | ೩೪ | ೧ | ೧೧೯ | ೭೧ | |
| | ೪. ಸೂರನಹಳ್ಳಿ | ೫೧ | ೫೪ | | | | ೧೪೫ | ೨೨ | |
| | ೫. ವಡೇರಹಳ್ಳಿ | ೬ | ೬ | ೪ | ೨ | | | ೧೦ | |
| | ಒಟ್ಟು | ೩೨೩ | ೩೫೩ | ೮೦ | ೧೨೯ | ೨ | ೫೬೩ | ೪೩೭ | ೫೨ |
| ೨. ಚಿತ್ರದುರ್ಗ | ೧. ಗೋನೂರು | ೧೫ | ೧೮ | ೬ | ೬ | | | ೧೬ | |
| | ೨. ಹೊಸಕಲ್ಲಹಳ್ಳಿ | ೬೫ | ೯೪ | ೧೬ | ೩೩ | | ೧೮೧ | ೬೨ | |
| | ೩. ಜಾನಕೊಂಡ | ೮೧ | ೯೬ | ೧೫ | ೮೩ | ೧ | ೧೭ | ೭ | |
| | ೪. ಮದಕರಿಪುರ | ೨೭ | ೨೭ | ೪ | ೧೦ | | ೭೫ | ೧೬ | |
| | ೫. ತುರುವನೂರು | ೪೨ | ೫೬ | ೧೯ | ೨೪ | | ೨೯೦ | ೮೦ | |
| | ಒಟ್ಟು | ೨೩೦ | ೨೯೧ | ೬೦ | ೧೫೬ | ೧ | ೫೬೩ | ೧೮೧ | |
| ೩. ಹಿರಿಯೂರು | ೧. ಕಪಿಲಹಟ್ಟಿ (ಹರ್ತಿಕೋಟೆ) | ೩೯ | ೬೪ | | ೪೭ | | ೩೭೫ | ೩೫ | |
| | ೧. ಮಾರಪ್ಪನಹಟ್ಟಿ (ಹರ್ತಿಕೋಟೆ) | ೨೩ | ೨೯ | ೧ | ೭ | | ೧೭೬೫ | ೯೯ | ೫ |
| | ೨. ಹೊಸಯಳನಾಡು | ೮ | | ೨ | ೫ | | | ೬ | |
| | ೩. ಅ. ಹುಚ್ಚಿಬೇಡಹಟ್ಟಿ | ೩೯ | ೨೬ | ೨೧ | ೨೧ | | ೨೩೬ | ೫೫ | |
| | ೩. ಆ. ಜುಲ್ಲಾಂತಹಟ್ಟಿ | ೧೪ | ೨೮ | ೭ | ೫ | | ೩೩೦ | ೧೫ | |
| | ೪. ನಂದಿಹಳ್ಳಿ | ೧೯ | ೩೧ | ೪ | ೧೭ | | ೧೨೫ | ೨ | |
| | ೫. ಅ. ದೊಡ್ಡಗೊಲ್ಲರಹಟ್ಟಿ | ೮೦ | ೫೧ | ೪ | ೨೬ | | ೩೭ | ೫೦ | |
| | ೫. ಆ. ಕಟ್ಟೆಪ್ಪನಹಟ್ಟಿ | ೩೪ | ೪೩ | ೧೬ | ೪೨ | | ೨೭೨ | ೧೩೭ | |
| | ಒಟ್ಟು | ೨೫೬ | ೨೭೨ | ೫೫ | ೧೭೦ | | ೩೧೪೦ | ೩೯೯ | ೫ |

ಅಂಕಿಅಂಶಗಳು ೬. ಮುಂದುವರೆದಿದೆ

| | | | | | | | | | |
|---|---|---|---|---|---|---|---|---|---|
| ೪. ಹೊಳಲ್ಕೆರೆ | ೧. ಅರೇಹಳ್ಳಿ | ೩೫ | ೪೦ | ೨೧ | ೪೮ | | ೫ | | |
| | ೨. ಅವಳಿಹಟ್ಟಿ | ೨೫ | ೪೨ | ೫ | ೧೧ | ೧ | ೧೨ | ೧೨ | |
| | ೩. ಗಂಗಸಮುದ್ರ | ೮೩ | ೧೪೫ | ೫೦ | ೧೨೧ | ೧೩ | ೨೮೬ | ೧೭೬ | |
| | ೪. ಹೊಳಲ್ಕೆರೆ | ೩೮ | ೪೪ | ೧೨ | ೩೭ | | | | |
| | ೫. ರಾಮಗಿರಿ | ೭೩ | ೧೦೪ | ೭೨ | ೧೦೯ | ೬ | ೩೯೪ | ೨೭೦ | |
| | ಒಟ್ಟು | ೨೫೪ | ೩೭೫ | ೧೬೦ | ೩೨೬ | ೨೦ | ೬೯೭ | ೪೫೮ | |
| ೫. ಹೊಸದುರ್ಗ | ೧. ಬೀಸನಹಳ್ಳಿ | ೩೨ | ೫೮ | ೧೨ | ೪೨ | ೧ | ೨೯ | ೪೬ | |
| | ೨. ಅ. ಹೊಸ ತಿಮ್ಮಪ್ಪನಹಟ್ಟಿ | ೫೩ | ೭೨ | ೧೭ | ೩೫ | ೩ | ೪೭೧ | ೨೩೧ | ೯ |
| | ೨. ಆ. ಹಳೆ ತಿಮ್ಮಪ್ಪನ ಹಟ್ಟಿ | ೩೦ | ೩೧ | ೨ | ೨೧ | ೧ | ೮೩ | ೮ | |
| | ೩. ಹೇರೂರು | ೩೫ | ೫೮ | ೧೦ | ೩೧ | | ೨೮೦ | ೯೪ | |
| | ೪. ಲಕ್ಕಹಳ್ಳಿ | ೪೪ | ೬೨ | ೨೮ | ೨೦ | | ೨೭೦ | ೧೧೫ | ೧೦ |
| | ೫. ಮಾಡದಕೆರೆ | ೩೯ | ೬೨ | ೨೮ | ೨೦ | | ೨೭೦ | ೧೧೫ | ೧೦ |
| | ಒಟ್ಟು | ೨೩೩ | ೩೪೩ | ೯೭ | ೧೬೯ | ೫ | ೧೪೦೩ | ೬೦೯ | ೨೯ |
| ೬. ಮೊಳಕಾಲ್ಮೂರು | ೧. ಬೊಮ್ಮಲಿಂಗನಹಳ್ಳಿ | ೮೦ | ೧೫೧ | ೮೭ | ೨೭ | ೨ | ೯೫ | ೮೮ | ೫೧ |
| | ೨. ಭೈರಾಪುರ | ೮೮ | ೧೩೫ | ೧೩೪ | ೯೫ | ೬ | ೫೭೬ | ೧೯೯ | ೩೦ |
| | ೩. ಗುಡ್ಡದಹಳ್ಳಿ | ೨೩ | ೪೪ | ೨೫ | ೧೩ | | ೩೨ | ೧೦ | ೧೦ |
| | ೪. ಹಾನಗಲ್ | ೧೫ | ೩೦ | ೧೪ | ೧ | | ೧೧ | ೧೦ | ೬ |
| | ೫. ಕೊಂಡ್ಲಹಳ್ಳಿ | ೯೪ | ೯೬ | ೩೭ | ೪೩ | ೩ | ೪೧೩ | ೭೩ | ೩೦ |
| | ಒಟ್ಟು | ೩೦೦ | ೪೫೬ | ೨೯೭ | ೧೭೯ | ೧೧ | ೧೧೨೭ | ೩೮೦ | ೧೨೭ |

## ಕಾಡುಗೊಲ್ಲರ ಮಾಹಿತಿದಾರರು

| ಹೆಸರು | ವಯಸ್ಸು | ಬೆಡಗು | ವೃತ್ತಿ | ಊರು |
|---|---|---|---|---|
| ಅಜ್ಜಪ್ಪ | ೬೦ | ಬೊಮ್ಮನರು | ಪ್ರವಾಚಕರು | ಕಾಟಪ್ಪನಹಟ್ಟಿ, ಚಳಕೆರೆ |
| ಕರಿಯಪ್ಪ ಡಿ | ೭೦ | ಮಾಸಲರು | ನಿವೃತ್ತಿ ಶಿಕ್ಷಕರು | ಮಾಚೆನಹಳ್ಳಿ |
| ಕರಿಯಪ್ಪ | ೪೫ | ಸನ್ನರು | ಕೆಪಿಟಿಸಿಎಲ್ ನೌಕರ | ಚಾಂಗವರ ಶಿರಾ ತಾ. |
| ಡಾ. ಕಾಟಪ್ಪ ವೈ | ೭೦ | ಸನ್ನರು | ನಿವೃತ್ತಿ ವೈದ್ಯರು | ಚಿತ್ರದುರ್ಗ |
| ಚನ್ನಕೇಶವ | ೬೫ | ಬಾಲನೋರು | ಸಮಾಜಸೇವಕರು | ಹೊಳಲ್ಕೆರೆ |
| ಜಯಮ್ಮ ಮತ್ತು ಸಂಗಡಿಗರು | ೫೦ | | ವ್ಯವಸಾಯ | ವೇಣಕಲ್ಲುಗುಡ್ಡ, ಹಿರಿಯೂರು |
| ತಮ್ಮಣ್ಣ | ೩೦ | ಸನ್ನರು | ಸಮಾಜಸೇವಕರು | ತೊರೆಬಿದಿನಳ್ಳಿ, ಚಳ್ಳಕೆರೆ |
| ತಿಪ್ಪೆಸ್ವಾಮಿ | ೬೦ | ಕರಡಿ ಗೊಲ್ಲರು | ಸಮಾಜಸೇವಕರು | ಜಗಳೂರು, ಗೊಲ್ಲರಹಟ್ಟಿ |
| ತಿಪ್ಪೆಸ್ವಾಮಿ | ೨೮ | ಸನ್ನವರು | ಖಾಸಗಿ ನೌಕರ | ವೇಣಕಲ್ಲು ಗುಡ್ಡ, ಹಿರಿಯೂರು ತಾ. |
| ದೊಡ್ಡನಾಗಪ್ಪ | ೭೨ | ಮರಿಯರು | ಸಮಾಜಸೇವಕರು | ಮೆಕಲುರುಹಳ್ಳಿ, ಹಿರಿಯೂರು |
| ನಾಗಪ್ಪ ವಿ. | ೭೮ | ಕರಡಿಗೊಲ್ಲರು | ನಿವೃತ್ತ ಅಧಿಕಾರಿ | ವೇಣಕಲ್ಲು ಗುಡ್ಡ, ಹಿರಿಯೂರು ತಾ. |
| ಪ್ರಕಾಶ್ | ೩೯ | ಸನ್ನವರು | ವಕೀಲರು | ಮುಗುಸುಳ್ಳಿ, ಹಿರಿಯೂರು ತಾ. |
| ಮುದ್ದಪ್ಪ ಎಸ್. | ೩೦ | ಕರಡಿಗೊಲ್ಲರು | ನಿವೃತ್ತಿ ಶಿಕ್ಷಕರು | ವೇಣಕಲ್ಲು ಗುಡ್ಡ, ಹಿರಿಯೂರು ತಾ. |
| ಮೈಲ್ಲಾರಪ್ಪ | ೬೫ | ಸನ್ನರು | ಟ್ರಿಜರಿ ನೌಕರ | ಚಿತ್ರದುರ್ಗ |
| ವಿಶಾಲಮ್ಮ | ೬೦ | ಕರಡಿಗೊಲ್ಲರ | ಖಾಸಗಿನೌಕರಸ್ಥೆ | ಚಿತ್ರದುರ್ಗ |
| ಶಿವಯಾದವ | ೬೦ | ಕರಡಿಗೊಲ್ಲರು | ವಕೀಲರು | ಕೃಷ್ಣಾಪುರ, ಹಿರಿಯೂರು ತಾ. |
| ಶ್ರೀಕಂಠನ | ೭೬ | ಕರಡಿಗೊಲ್ಲರು | ನಿವೃತ್ತಿ ಅಧಿಕಾರಿ | ಪಿ.ಡಿ. ಕೋಟೆ, ಚಳ್ಳಕೆರೆ |

## ಪರಾಮರ್ಶ ಸೂಚಿ

ಕನ್ನಡ

ಕಟ್ಟೀ, ವೆಂಕಟರಂಗೋ (ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೊ, ೧೮೯೩) ಪುನರ್ ಮುದ್ರಣ. ೧೯೮೫, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವೀಸೆಸ್).

ಕರಿಯಪ್ಪ ಡಿ., ಲೇಖನ ಅಡವಿ (ಕಾಡು) ಗೊಲ್ಲರ ಸಮುದಾಯದ ಚಾರಿತ್ರಿಕ ಹಿನ್ನೆಲೆ, *ಸ್ಮರಣ ಸಂಚಿಕೆ*, (ತುಮಕೂರು ಜಿಲ್ಲಾ ಪ್ರಥಮ ಅಧಿವೇಶನ, ೧೯೭೨)

ಕಾಳೇಗೌಡ ನಾಗವಾರ., ಕಾಡುಗೊಲ್ಲರ :ಜಾನಪದ ಒಂದು ಅಧ್ಯಯನ (ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಹೆಚ್.ಡಿ. ಮಹಾಪ್ರಬಂಧ, ೧೯೮೫)

ಕೃಷ್ಣಮೂರ್ತಿ ಹನೂರು., 'ಕಾಡುಗೊಲ್ಲರು' ಸಂಪಾದಕರು, ಪ್ರೊ। ಎಚ್ ಜೆ ಲಕ್ಕಪ್ಪಗೌಡರು: *ಕರ್ನಾಟಕದ ಬುಡಕಟ್ಟುಗಳು*, ಸಂಪುಟ–೧, (ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮)

ಗುರುಲಿಂಗಯ್ಯ ಎಂ., *ಕರ್ನಾಟಕದ ಗೊಲ್ಲ ಸಮುದಾಯ* (ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೫)

................*ಬುಡಕಟ್ಟುಗಳು ಮತ್ತು ಅಭಿವೃದ್ಧಿ* (ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೨೦೦೫)

ಚೆಲುವರಾಜು., *ಜುಂಜಪ್ಪ* (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭)

ನಾಗರಾಜು ಬಿ ಪಿ., *ಗೊಲ್ಲರಟ್ಟಿ* (ಆಪ್ತ ಪ್ರಕಾಶನ, ಬೆಂಗಳೂರು, ೧೯೯೮)

ಪ್ರಶಾಂತ ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೦).

ಮೀರಾಸಾಬಿಹಳ್ಳಿ ಶಿವಣ್ಣ., *ಕಾಡುಗೊಲ್ಲ ಬುಡಕಟ್ಟು ವೀರರು* (ಸಿವಿಜಿ ಪಬ್ಲಿಕೇಷನ್ ಬೆಂಗಳೂರು, ೨೦೦೫)

ಮೇತ್ರಿ ಕೆ ಎಂ., *ಕೃಷ್ಣಗೊಲ್ಲರ ಕಥನಕಾವ್ಯ*, (ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭)

................*ಬುಡಕಟ್ಟು ಕುಲಕಸುಬುಗಳು* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೨).

ರಂಗಯ್ಯ ಸಾ., 'ಕಾಡುಗೊಲ್ಲರು' ಸ್ಮರಣ ಸಂಚಿಕೆಯಲ್ಲಿ ಲೇಖನ, (ತುಮಕೂರು ಜಿಲ್ಲಾ ಪ್ರಥಮ ಅಧಿವೇಶನ, ೧೯೭೨)

ರೈ, ಎ ಸುಬ್ಬಣ್ಣ...(ಸಂ).,*ದ್ರಾವಿಡ ನಿಘಂಟು* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೧).
ಶಂಕರನಾರಾಯಣ ತೀ ನಂ., *ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು*, (ಮೈಸೂರು ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೪)
ಸಣ್ಣೋಬಯ್ಯ, ಎಸ್ ಕೆ., **ಪ್ಯಾಸ ಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ** (ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಹೆಚ್.ಡಿ. ಅಪ್ರಕಟಿತ ಮಹಾಪ್ರಬಂಧ, ೨೦೦೨)
ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧).

## ಇಂಗ್ಲೀಷ್

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

Buchanan, Francis., Journey through Mysore, Canara and Malbar (London, 1807)

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes...*(New Delhi: A Nabhi Publications, 2004).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).

Gurulingaiah, M.," Social Mobility and Social Change among Gollas" Unpublished Ph D Thesis submitted to Mangalore University, 2000.

........ ., Tribal Culture, Change and Mobility (New Delhi: Anmol Publications, 2007)

Hassan, S S., *The Castes and Tribes of H E H Nizam's Dominions* (Bom-

bay: Government Central Press, 1920; rpt. 1989, New Delhi: Asian Educational Services).

Havanur, L G (Chairman)., *Karnataka Backward Classes Commission Report* (Bangalore: Government Press, 1975 ), 5 Vols.

Luiz, A A D., The Tribes of Mysore (Bangalore: G S Viswa and Co, 1963)

Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).

Nagan Gowda, R (Chairman)., *Mysore Backward Classes Committee Report* (Bangalore: Government Press, 1979).

Nanjundayya, H V., *The Ethnographic Survey of Mysore* (Bangalore: Government Press, 1908).

Posset, Journal of Anthropological Society, 1888.

Praveen Fernandees., Kadugollas ( Mangalore: Unesco Co action Learning Centre, 1994).

Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).

Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.

Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Shashi, S S., *The World of Nomads*(New Delhi: Lotus Press, 2006).

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........., *The Scheduled Tribes* (Delhi: Oxford University, Press,1994) People of Inida National Series, vol. 3

........., *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes*

*Act in the Bombay Presidency Part - I* (Bombay: Govt. Central Press, 1936)

*The New Encyclopaedia Britannica* (The University of Chicago, 1992)

Thurrston, E., *Ethnographic Notes on Southern India* (Madrss: Government Press, 1906).

..........., *Castes and Tribes of Southern India* (Madrss: Government Press, 1909; rpt. 1975, Delhi: Cosmo Publications) 7 vols.

Venkataswamy, T (Chairman).,Report of the Karnataka Second Backward Classes Commission (Bangalore: Government Press, 1986), 3 Vols.



ದೇವರ ಗುಡಿ ಮುಂದೆ ಕುಳಿತಿರುವ ಪೂಜಾರಿ, ಯರಬಳ್ಳಿ



ಯರಬಳ್ಳಿ ಹಾಲುಗುಡ್ಡಪ್ಪ ದೇವಸ್ಥಾನದ ಪೂಜಾರಿ



ಗಣೆಯ ನಾದದೊಂದಿಗೆ ಎತ್ತಪ್ಪ ಮತ್ತು ಜುಂಜಪ್ಪನ ಕುರಿತು ಪದ ಹಾಡುತ್ತಿರುವುದು



ಶನಿವಾರದ ಪೂಜೆಯ ನಂತರ ದಾಸಯ್ಯನವರೊಂದಿಗೆ ಗಣೆ ನುಡಿಸುತ್ತಿರುವುದು, ಕೊಳಹಾಳ



ಗಣೆ ನಾದದೊಂದಿಗೆ ಮೈಮರೆತ ಗೊಲ್ಲಜ್ಜ



ಗಣೆಯ ನಾದದಲ್ಲಿ ಪದ ನುಡಿಸುತ್ತಿರುವುದು



ಚಿತ್ರದೇವರ ಪೌಳಿ (ಪಾಲವ್ವನ ಹಳ್ಳಿ)



ದೇವರ ಪೌಳಿ



ಕೊಳಹಾಳ ಗೊಲ್ಲರಹಟ್ಟಿಯ ದೇವಸ್ಥಾನ



ಎತ್ತಪ್ಪನ ಕಟ್ಟೆಯಲ್ಲಿರುವ ಉತ್ಸವಗಳು, ವೇಣುಕಲ್ಲು ಗುಡ್ಡ



ಗೋಲ್ಲರ ಹಟ್ಟಿ, ವೇಣುಕಲ್ಲುಗುಡ್ಡ



ಖಾರ ಅರಿಯುತ್ತಿರುವ ವಯೋವೃದ್ಧೆ



ಕತ್ತೆಯ ಮೇಲೆ ಜೀವನೋಪಾಯದ ಸಾಮಗ್ರಿ ಮತ್ತು ಕುರಿಗಳೊಂದಿಗೆ ವಲಸೆ ಹೋಗುತ್ತಿರುವುದು



ಬಿಡುಬಿಟ್ಟ ಕುರಿಮಂದೆ



ನಾಡೋಜ ಪ್ರಶಸ್ತಿ ಪುರಸ್ಕೃತೆ ಸಿರಿಅಜ್ಜಿ



ಗೊಲ್ಲನಕಟ್ಟೆ ಗೊಲ್ಲರಹಟ್ಟಿಯ ಅಜ್ಜಿ



ಮುಟ್ಟಾದ ಮಹಿಳೆಯರಿಗೆ ಸೂತಕ ಆಚರಣೆ, ಯರಬಳ್ಳಿ



ಹೆರಿಗೆ ಸೂತಕ ಆಚರಣೆ, ವೇಣುಕಲ್ಲುಗುಡ್ಡ